॥ ಶ್ರೀಃ ॥

# ಸತ್ಸಂಪ್ರದಾಯದೀಪಿಕಾ

# ಆಚಾರಕಾಂಡಃ.

ಸ್ಮೃತಿರತ್ನಾಕರಾದಿ ಧರ್ಮಶಾಸ್ತ್ರಗಳನ್ನನುಸರಿಸಿ

ಗ್ರಾಮಂ ವಿದ್ವಾನ್ ಸೋಮಯಾಜಿ ಯಾಂಡಾನ್

ಶ್ರೀ॥ ಉ॥ ಜನಾರ್ದನೈಯ್ಯಂಗಾರ್ಯರಿಂದ

ಟೀಕೆಯೊಡನೆ ರಚಿಸಲ್ಪಟ್ಟು,

ಹಾಸನದಲ್ಲಿರುವ ಶ್ರೀ. ಮ. ಎಂ. ರಂಗಸ್ವಾಮೈಯ್ಯಂಗಾರ್ಯರಿಂದ

ಪ್ರಕಟಿಸಲ್ಪಟ್ಟಿತು.

---

ಬೆಂಗಳೂರು:

ರ್ವ ಮುದ್ರಾಕ್ಷರಶಾಲೆಯಲ್ಲಿ ಹರಿರಾಮಮಿಶ್ರರಿಂದ ಮುದ್ರಿಸಲ್ಪಟ್ಟಿತು.

---

೧೯೦೯.



ಕ್ರಯ ೨ ರೂಪಾಯಿಃ

# ಆಚಾರಕಾಂಡ ವಿಷಯಾನುಕ್ರಮಣಿಕಾ.

ಶ್ರೀ



# ಅವತಾರಿಕೆ.

ಸಮಸ್ತ ಚಿದಚಿದ್ವಸ್ತು ಶರೀರಾಯಾಖಿಲಾತ್ಮನೆ ।
ಶ್ರೀಮತೇ ನಿರ್ಮಲಾನಂದೋ ದನ್ವತೇವಿಷ್ಣವೇನಮಃ ॥

ಅವತಾರಿಕಾ॥ ಶ್ರಿಯಃಪತಿಯಾಗಿಯೂ, ಅವಾಪ್ತಸಮಸ್ತಕಾಮನಾಗಿಯೂ, ಸಮಸ್ತ ಕಲ್ಯಾಣಗುಣಾತ್ಮಕನಾಗಿಯೂ ಇರುವ ಸರ್ವೇಶ್ವರನು.

ವೈಕುಂಠೇತುಪರೇಲೋಕೆ ಶ್ರಿಯಾಸಾರ್ಧಂಜಗತ್ಪತಿಃ ।
ಆಸ್ತೇವಿಷ್ಣುರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ ॥

ಎಂಬಂತೆ ಶ್ರೀ ವೈಕುಂಠವೆಂಬ ದಿವ್ಯಲೋಕದಲ್ಲಿ ಶ್ರೀ ಮಹಾಮಣಿ ಮಂಟಪದಲ್ಲಿ ಶ್ರೀ ಭೂಮಿ ನೀಳಾದೇವಿಗಳೊಡನೆ ರತ್ನ ಸಿಂಹಾಸನಾರೂಢನಾಗಿ ನಿತ್ಯಚೇತನರಿಂದಲೂ, ಮುಕ್ತರಿಂದಲೂ, ಸಮ್ಯಕ್ ಶುಶ್ರೂಷಿಸ

ಲ್ಪಟ್ಟ ಪಾದ ಕಮಲವುಳ್ಳವನಾದಾಗ್ಯೂ ಆ ನಿತ್ಯಮುಕ್ತರುಗಳೋಪಾದಿ ಯಲ್ಲಿ ಬದ್ಧ ಜೀವರುಗಳು ತಮ್ಮ ಪಾದಕಮಲಶುಶ್ರೂಷಾರ್ಹರಾಗಿದ್ದಾಗ್ಯೂ ಅದನ್ನ ಹೊಂದದವರಾಗಿ ಪ್ರಳಯಕಾಲದಲ್ಲಿ ಪ್ರಕೃತಿಯಲ್ಲಿ ಅಡಗಿ ಜೇನುಮೇಣದಲ್ಲಿ ಸಂಬಂಧಿಸಿದ ಸುವರ್ಣ ಕಣಗಳೋಪಾದಿಯಲ್ಲಿ ಕ್ಷೀಣ ಜ್ಞಾನರಾದ ಜೀವರುಗಳನ್ನು ನೋಡಿ.

ಏವಂಸಂಸೃತಿಚಕ್ರಸ್ಥೇ ಭ್ರಾಮ್ಯಮಾಣೇಸ್ವಕರ್ಮಭಿಃ ।
ಜೀವೇದುಃಖಾಕುಲೇವಿಷ್ಣೋಃ ಕೃಪಾಕಾಪ್ಯುಪಜಾಯತ ॥

ಎಂಬಂತೆ ಸಂಸಾರ ಚಕ್ರಸ್ಥನಾಗಿ ಜೀವನು ತನ್ನಪ್ರಾರಬ್ಧ ಕರ್ಮಗಳಿಂದ ದುಃಖಾಕುಲನಾಗಲು ಜಗದ್ವ್ಯಾಪಿಯಾದ ವಿಷ್ಣುವು ಕೃಪಾವಿಷ್ಟನಾಗಿ.

ವಿಚಿತ್ರಾದೇಹಸಂಪತ್ತಿಃ ಈಶ್ವರಾಯನಿವೇದಿತುಂ ।
ಪೂರ್ವಮೇವಕೃತಾಬ್ರಹ್ಮನ್ ಹಸ್ತಪಾದಾದಿಸಂಯುತಾ ॥

ಎಂಬಂತೆ ಮಹದಾದಿ ಸೃಷ್ಟಿಕ್ರಮದಿಂದ ಆ ಜೀವರುಗಳಿಗೆ ತಮ್ಮ ಪಾದಕಮಲ ಸಮಾಶ್ರಯಣೋಚಿತಗಳಾದ ಕರಣ ಕಳೇಬರಗಳನ್ನು ಕೊಟ್ಟು ನಿರೀಕ್ಷಿಸಲು ಆ ಜೀವರುಗಳು ಆ ಕರಣ ಕಳೇಬರಗಳನ್ನು ಹೊಂದಿ ನದೀ ತರಣಕ್ಕೋಸ್ಕರ ಕೊಡಲ್ಪಟ್ಟ ನಾವೆಗಳಿಂದ ನದಿಯನ್ನು ದಾಟದೆ ನದೀ ವೇಗಾನುಸಾರವಾಗಿ ಸಾಗರವನ್ನು ಹೊಂದುವರೋಪಾದಿ ಯಲ್ಲಿ ಆ ಕರಣ ಕಳೇಬರಗಳಿಂದ ಸ್ರಕ್ಚಂದನವನಿತಾದಿ ವಿಷಯಾಂತರ ಪ್ರವಣರಾಗಲು ಅದನ್ನೋಡಿ ಕೃಪಾವಿಷ್ಟನಾಗಿ ಆ ಜೀವರುಗಳಿಗೆ ಸದಸದ್ವಿವೇಚನಕ್ಕಾಗಿ ಶಾಸನಾತ್ ಶಾಸ್ತ್ರಂ ಎಂಬಂತೆ ತಮ್ಮ ಶಾಸನರೂಪವಾದ ವೇದವೆಂಬ ಶಾಸ್ತ್ರವನ್ನು ಪ್ರವರ್ತನೆ ಮಾಡಿಸಿದನು.

ಆದಾಗ್ಯೂ ಅದರಲ್ಲಿಯೂ ಅವಿಶ್ವಾಸ ಸಂಶಯ ಅನ್ಯಥಾ ಜ್ಞಾನಗಳಿಂದ ಅನಾದರವೇ ಪ್ರಾಪ್ತವಾಗಲು ತನ್ನ ಶಾಸನಾತಿ ಲಂಘನವನ್ನು ಮಾಡುವ ರಾಷ್ಟ್ರವನ್ನು ಸ್ವಾಧೀನಕ್ಕೆ ತಂದುಕೊಳ್ಳುವ ರಾಜನೋಪಾದಿಯಲ್ಲಿ ಸ್ವಾಚಾರ ಮುಖದಿಂದಲಾದರೂ ಸ್ವಾಧೀನಕ್ಕೆ ತರಬೇಕೆಂದು ಯೋಚನೆಮಾಡಿ ಜೀವರುಗಳನ್ನು ಶಿಕ್ಷಿಸುವದಕ್ಕೆ ಅರ್ಹವಾದ ರಾಮಕೃಷ್ಣಾದಿ ಮ

ನುಷ್ಯಾವತಾರವನ್ನಂಗೀಕರಿಸಿ ಜಗನ್ನಾಯಕನಾದ ನಾರಾಯಣನು ಸ್ವಾಚಾರ ಮುಖದಿಂದ ಸಾಮಾನ್ಯ ವಿಶೇಷ ಧರ್ಮಗಳನ್ನು ತೋರ್ಪಡಿಸಿದಾಗ್ಯೂ..

ಅವಜಾನಂತಿಮಾಮ್ಮೂಢಾಃ ಮಾನುಷೀಂತನುಮಾಶ್ರಿತಂ ।
ಪರಂಭಾವಮಜಾನಂತೋ ಮಮಭೂತಮಹೇಶ್ವರಂ ॥

ಎಂಬಂತೆ ಜಗದ್ರಕ್ಷಕನಾದ ತಾನು ಪರಮಕಾರುಣಿಕತ್ವದಿಂದ ಮನುಷ್ಯಾವತಾರ ಮಾಡಿದಾಗ್ಯೂ ತಮ್ಮಗಳ ಪ್ರಾರಬ್ಧ ಕರ್ಮಪರಿಪಾಕದಿಂದ ಸಂಕುಚಿತಜ್ಞಾನರಾದ ಜೀವರುಗಳು. (ಜನರು) ತಮ್ಮನ್ನೂ ಪ್ರಾಕೃತ ಮನುಷ್ಯರನ್ನಾಗಿಯೇ ತಿಳಿದು ತಿರಸ್ಕರಿಸಿ ಹೀಗೆ ಅಜ್ಞಾತೆಯಿಂದ ಸಂಸಾರಾರ್ಣವಮಗ್ನರಾಗಿಯೇ ಇರಲು, ನಾರದ ಪರಾಶರ ಶುಕ ಶೌನಕಾದಿ ಮಹರ್ಷಿಗಳಿಂದ ವೇದಾಂತ ಸಂಪ್ರದಾಯವು ಕಮ್ಮಿಯಾಗದಂತೆ ನಡಿಸಿ.

ಕೃಷ್ಣದ್ವೈಪಾಯನಂವ್ಯಾಸಂ ವಿದ್ಧಿನಾರಾಯಣಂ ಪ್ರಭುಂ ।
ಕೋಹ್ಯನ್ಯೋಭುವಿಮೈತ್ರೇಯ ಮಹಾಭಾರತಕೃದ್ಭವೇತ್ ॥

ಎಲೈಮೈತ್ರೇಯನೇ! ಸಾಕ್ಷಾನ್ನಾರಾಯಣನೇ ವ್ಯಾಸಾವತಾರವನ್ನು ಮಾಡಿರುವನೆಂದು ತಿಳಿಯಿರಿ. ನಾರಾಯಣನನ್ನು ವಿನಃ ಮಹಾಭಾರತ ಕರ್ತೃತ್ವವು ಯಾರಿಂದ ಸಾಧ್ಯವಾಗುವದು? ಎಂಬದಾಗಿ ಪರಾಶರ ಮಹರ್ಷಿಗಳು ಹೇಳಿರುವಂತೆ ವ್ಯಾಸಾದಿಗಳನ್ನನುಪ್ರವೇಶಿಸಿ ಮಹಾಭಾರತ ಶಾರೀರಕ ಶಾಸ್ತ್ರಗಳನ್ನುಂಟುಮಾಡಿಸಿ ತತ್ವಹಿತ ಪುರುಷಾರ್ಥಗಳನ್ನು ಪ್ರಕಾಶಪಡಿಸಿಯೂ.

ಪೂರ್ವೋತ್ಪನ್ನೇಷುಭೂತೇಷು ತೇಷುತೇಷುಕಲೌಪ್ರಭುಃ ।
ಅನುಪ್ರವಿಶ್ಯಕುರುತೇ ಯತ್ಸಮೀಹಿತಮಚ್ಯುತಃ ॥

ಎಂಬಂತೆ ಪರಾಂಕುಶ ಪರಕಾಲಾದಿ ರೂಪದಿಂದ ಸಾರತಮಾಂಶಗಳನ್ನ ಸರ್ವರಿಂದಲೂ ಅಧಿಕರಿಸಲರ್ಹವಾದ ದ್ರಾವಿಡಭಾಷೆಯಿಂದ ಪ್ರಸಿದ್ಧಪಡಿಸಿಯೂ, ತಮ್ಮಿಂದ ಪ್ರವರ್ತಿತವಾದ ಸನ್ಮಾರ್ಗಕ್ಕೆ ಯಾವವಿಧವಾದ ಉಪರೋಧವೂ ಬಾರದಂತೆ.

ಸಾಕ್ಷಾನ್ನಾರಾಯಣೋದೇವಃ ಕೃತ್ವಾಮರ್ತ್ಯಮಯೀಂತನುಂ।
ಮಗ್ನಾನುದ್ಧರತೇಲೋಕಾನ್ ಕಾರುಣ್ಯಾತ್ ಶಾಸ್ತ್ರಪಾಣಿನಾ ॥

ನಾರಾಯಣನು ಸಂಸಾರವೆಂಬ ಸಮುದ್ರದಲ್ಲಿ ಮುಳುಗಿರುವ ಜನಗೆಳನ್ನುಕಂಡು ತಾನು ಮನುಷ್ಯಾವತಾರವನ್ನು ಮಾಡಿ ಶಾಸ್ತ್ರವೆಂಬ ಹಸ್ತವನ್ನ ಕೊಟ್ಟು ಮೇಲಕ್ಕೆತ್ತಿಕೊಳ್ಳುವನು. ಎಂಬಂತೆ ಅನೇಕ ಪೂರ್ವಾಚಾರ್ಯರ ವ್ಯಾಜದಿಂದ ರಕ್ಷಿಸಿಯೂ, ಈ ಅಧ್ಯಾತ್ಮ ಸಂಪ್ರದಾಯವು ಸರ್ವಥಾ ಅಸ್ಖಲಿತವಾಗಿ ನಡೆದುಬರುವಂತೆ ಮಾಡಿ ತನ್ನಸಂಕಲ್ಪವನ್ನು ನೆರವೇರಿಸಿದನು. ಅದೇಪ್ರಕಾರವಾಗಿ ಸತ್ಸಂಪ್ರದಾಯವು ಈ ಪರ್ಯಂತರವೂನಡೆದು ಬರುತ್ತಲಿದ್ದಾಗ್ಯೂ ಪ್ರಕೃತಕಾಲದಲ್ಲಿ ಕೆಲನೀಚ ಜನಗಳ ಪ್ರೋತ್ಸಾಹದಿಂದ ಆರ್ಯಸಿದ್ಧಾಂತದಲ್ಲಿ ಕೆಲವರಿಗೆ ಬುದ್ಧಿಲಾಘವವು ಪ್ರಾಪ್ತವಾಗಿ ಸಿದ್ಧಾಂತ ಸಾಕರ್ಯವೇ ತಿಳಿಯಲಿಲ್ಲವು. ಮತ್ತೆಕೆಲವರು ಶ್ಲಾಘನೀಯವಾದ ಗೀರ್ವಾಣ ವಾಣಿಯನ್ನಭ್ಯಾಸಮಾಡದೆ ಪಾಶ್ಚಾತ್ಯರ ಭಾಷೆಯನ್ನ ಮಾತ್ರ ಅಭ್ಯಾಸಮಾಡಿದ ಪ್ರಯುಕ್ತ ಆರ್ಯಸಿದ್ಧಾಂತವನ್ನು ಅರಿಯಬೇಕೆಂಬ ಅಭಿಲಾಷೆ ಇದ್ದಾಗ್ಯೂ ಅನುಕೂಲ್ಯವಿಲ್ಲದವರಾದರು. ಅಲ್ಲದೆ ಸತ್ಸಂಪ್ರದಾಯ ನಿಷ್ಠರಾದ ಮಹಾನುಭಾವರು ಅಪ್ರಷ್ಟೋತ್ತರವು ನಿಷಿದ್ಧವಾದ ಪ್ರಯುಕ್ತ ಸಂಪ್ರದಾಯ ರಹಸ್ಯವನ್ನು ಯಾರಲ್ಲಿಯೂ ಹೇಳಲಾರರು. ಈ ಪ್ರಕಾರ ಸರ್ವಥಾ ಸತ್ಸಂಪ್ರದಾಯಕ್ಕೆ ದುರವಸ್ಥೆಯು ಪ್ರಾಪ್ತವಾದ್ದರಿಂದ ಮಹನೀಯರ ಪ್ರೋತ್ಸಾಹಪೂರ್ವಕ ಈ ‘‘ ಸತ್ಸಂಪ್ರದಾಯ ದೀಪಿಕಾ ’’ ಎಂಬ ಗ್ರಂಥವು ಬರಿಯಲ್ಪಡುವುದು. ಇದರಲ್ಲಿ ಪ್ರಥಮತಃ ಕರ್ಮವಿಚಾರವು, ಅನಂತರ ಬ್ರಹ್ಮಕಾಂಡವಿಚಾರವು ಅಂದರೆ ಅದರಲ್ಲಿ ಮುಖ್ಯವಾದ ಮುಮುಕ್ಷೂಪಾಯ ಸಂಗ್ರಹವು, ಪ್ರಸಂಗಸಂಗತಿಯಿಂದ ವೇದಾಂತ ವಿಚಾರಗಳು ಸಕಲರ ಅವಗಾಹನಕ್ಕೆಬಂದು ಸಂಪ್ರದಾಯಗಳು ತಿಳುವಳಿಕೆಗು ಮತ್ತು ಆಚರಣೆಗು ಸಹ ಬರಬೇಕೆಂಬ ಉದ್ದೇಶದಿಂದ ಶ್ರುತಿ ಸ್ಮೃತಿ ಪುರಾಣ ಇತಿಹಾಸಾದಿ ಪ್ರಮಾಣಗಳೊಡನೆ ಸಂಗ್ರಹಿಸಿ ಸಕಲಜನರಿಗೂ ಉಪಯೋಗವಾಗುವಹಾಗೆ ಬರಿಯಬುದ್ದೇಶಿಸುವೆನು.

ಹಾಸನ ತಾಲ್ಲೂಕು ಗ್ರಾಮ. } ಮ॥ ಜನಾರ್ದನ್ಮೈಯ್ಯಂಗಾರ್ಯ.

ಶುಭಮಸ್ತು.

ಶ್ರೀ ಹಯವದನ ಪರಬ್ರಹ್ಮಣೇನಮಃ.



# ಸತ್ಸಂಪ್ರದಾಯ ದೀಪಿಕಾ

## ಆಚಾರಕಾಂಡ ಪ್ರಾರಂಭಃ.

ಶ್ಲೋ॥ ವರ್ಣಾಶ್ರಮಾಣಾಂ ವ್ಯವಸ್ಥಾತ್ರೇಯುಗೇಯುಗೇ ।
ಲೀಲಯೈವಗೃಹೀತೇಚ್ಛಾಬ್ಧವಪುಷೇವಿಷ್ಣವೇನಮಃ ॥

ಆಚಾರಕಾಂಡವು ಬರಿಯಲ್ಪಡುವದು. ಪ್ರಥಮತಃ ಆಚಾರನಿರೂಪಣವನ್ನ ಯಾತಕ್ಕೆ ಮಾಡಬೇಕೆಂದರೆ? ಸಕಲ ಧರ್ಮಕ್ಕೂ ಆಚಾರವೇ ಪ್ರಧಾನವಾದುದರಿಂದ ಇದನ್ನೇ ಮೊದಲು ತಿಳಿಸಬೇಕಾದದ್ದು ಮುಖ್ಯ ಕರ್ತವ್ಯವಾಗಿದೆ.

ಪರಾಶರಃ॥ ಚತುರ್ಣಾಮಪಿವರ್ಣಾನಾಂ ಆಚಾರೋಧರ್ಮಪಾಲಕಃ ।
ಆಚಾರಭ್ರಷ್ಟದೇಹಾನಾಂ ಭವೇದ್ಧರ್ಮಃಪರಾಙ್ಮುಖಃ ॥೧॥

ತಾತ್ಪರ್ಯ ॥ ಬ್ರಾಹ್ಮಣಾದಿ ವರ್ಣಗಳಿಗೆ ತತ್ತದ್ವರ್ಣೋಚಿತವಾದ ಆಚಾರವೇ ಧರ್ಮರಕ್ಷಕವಾದದ್ದು, ಆಚಾರಹೀನರಿಗೆ ಮಾಡಲ್ಪಟ್ಟ ಧರ್ಮವು ರಕ್ಷಕವಾಗಲಾರದು. ... ... ॥೧॥

ವಸಿಷ್ಠಃ। ಆಚಾರಹೀನಂ ನಪುನಂತಿವೇದಾಃ ಯದ್ಯಪ್ಯಧೀತಾಃಸಹ
ಷಡ್ಭಿರಂಗೈಃ । ಛಂದಾಂಸ್ಯೇನಂಮೃತ್ಯುಕಾಲೇತ್ಯಜಂತಿ
ನೀಡಂಶಕುಂತಾ ಇವಜಾತಪಕ್ಷಾಃ ॥೨॥

ತಾತ್ಪರ್ಯ ॥ ಆಚಾರವಿಲ್ಲದವನು ಷಡಂಗ ಸಹಿತವಾದ ವೇದಾಧ್ಯಯನ ಮಾಡಿದವನಾದಾಗ್ಯೂ ಪರಿಶುದ್ಧನಲ್ಲವು. ಕಷ್ಟಪ್ರಾಪ್ತವಾದ ಕಾಲದಲ್ಲಿ ವೇದಗಳು ಇವನನ್ನು ತ್ಯಜಿಸುವವು. ಹ್ಯಾಗೆಂದರೆ ಪಕ್ಷಿಗಳು ಪಕ್ಷಬಲವುಳ್ಳವುಗಳಾಗಿ ಬೆಳೆದಗೂಡನ್ನ ಬಿಡುವಂತೆ ॥ ೨ ॥

ಬ್ರಾಹ್ಮಣಸ್ಯತು ದೇಹೋಯಂ ನೋಪಭೋಗಾಯಕಲ್ಪತೇ ।
ಇಹಕ್ಲೇಶಾಯಮಹತೇಪ್ರೇತ್ಯಾನಂತಸುಖಾಯವೈ ॥ ೩ ॥

ಬ್ರಾಹ್ಮಣನಿಗೆ ಈ ಶರೀರವು ಸಂಸಾರ ಸುಖಕ್ಕಾಗಿ ಸೃಷ್ಟಿಸಲ್ಪಟ್ಟದ್ದಲ್ಲ. ಮತ್ತೇತಕ್ಕೆಂದರೆ ಇಹಲೋಕದಲ್ಲಿ ಧರ್ಮಾದಿಕಾಯ ಕ್ಲೇಶಕ್ಕೂ ಪರದಲ್ಲಿ ಸ್ವರ್ಗಾದಿ ಮೋಕ್ಷಪರ್ಯಂತವಾದ ಸೌಖ್ಯಕ್ಕೂ ಎಂದು ತಿಳಿಯತಕ್ಕದ್ದು. ... ... ॥ ೩ ॥

ರತ್ನಾವಳ್ಯಾಂ ॥ ಶುಚಿಂರಕ್ಷಂತಿದೇವಾಶ್ಚ ರಕ್ಷಂತಿಪಿತರಶ್ಶುಚಿಂ ।
ಶುಚೇರ್ಬಿಭ್ಯತಿರಕ್ಷಾಂಸಿಯೇಚಾನ್ಯೇದುಷ್ಟಚಾರಿಣಃ ॥ ೪ ॥

ತಾತ್ಪರ್ಯ ॥ ಆಚಾರಶೀಲನಾದ ಮನುಷ್ಯನನ್ನು ದೇವತೆಗಳೂ, ಪಿತೃಗಳೂ ರಕ್ಷಿಸುವರು ಅಲ್ಲದೆ ಪರಿಶುದ್ಧನಾದವನಿಗೆ ರಾಕ್ಷಸರೇ ಮೊದಲಾದ ದುಷ್ಟಾಚಾರಿಗಳೂ ಭಯಪಡುವರು. ... ... ॥ ೪ ॥

ಆಚಾರಾಲ್ಲಭತೇಹ್ಯಾಯುಃ ಆಚಾರಾಲ್ಲಭತೇಶ್ರಿಯಂ ।
ಆಚಾರಾತ್ಕೀರ್ತಿಮಾಪ್ನೋತಿ ಪುರುಷಃಪ್ರೇತ್ಯಚೇಹಚ ॥ ೫ ॥

ಆನುಶಾಸನಿಕೇಪರ್ವಣಿ॥ ಸಮಸ್ತಕ್ಕೂ ಆಚಾರವೇ ಪ್ರಧಾನವಾದದ್ದು. ಮನುಷ್ಯನು ಆಚಾರದ್ದೆಸೆಯಿಂದ ಇಹಲೋಕದಲ್ಲಿ ಆಯುಷ್ಯವನ್ನು ಕೀರ್ತಿಯನ್ನು ಐಶ್ವರ್ಯವನ್ನೂ ಹೊಂದುವನು. ಅಲ್ಲದೇ ಪರದಲ್ಲಿ ಶ್ಲಾಘನೀಯವಾದ ಗತಿಯನ್ನೂ ಹೊಂದುವನು. ... ... ॥ ೫ ॥

ದುರಾಚಾರೋಹಿಪುರುಷೋ ನೇಹಾಯುರ್ವಿಂದತೇಮಹತ್
ತ್ರಸಂತಿಚಾಸ್ಯಭೂತಾನಿ ತಥಾಪರಿಭವಂತಿಚ । ತಸ್ಮಾತ್ಕುರ್ಯಾದಿಹಾಚಾರಂ ಯದೀಚ್ಛೇದ್ಭೂತಿಮಾತ್ಮನಃ ॥ ೬ ॥

ಹೀಗೆ ಅನ್ವಯದಿಂದಹೇಳಿ ವ್ಯತಿರೇಕದಿಂದ ಹೇಳುವುದು. ದುರಾಚಾರವುಳ್ಳ ಮನುಷ್ಯನು ಅರ್ಹವಾದ ಆಯುಸ್ಸನ್ನ ಹೊಂದಲಾರನು. ಇವನನ್ನು ಕಂಡರೆ ಸಾಧುಜನಗಳು ಭಯಪಡುವರು. ಅಲ್ಲದೇ ಇವನನ್ನು ತಿರಸ್ಕಾರವಾಗಿಯೂ ತಿಳಿಯುತ್ತಾರೆ. ... ॥ ೬ ॥

ಆಚಾರಶಾಲಿಗಳು ಅಲ್ಪಾಯುಸ್ಸಿನಲ್ಲಿಯೇ ನಾಶಹೊಂದಿರುವದನ್ನ ಪ್ರತ್ಯಕ್ಷವಾಗಿ ನೋಡಿರುತ್ತೇವೆ. ಹಾಗೆಯೇ ದುರಾಚಾರವುಳ್ಳ ಮನುಷ್ಯರು ಬಹುಕಾಲ ಜೀವಿಸಿಕೊಂಡಿರುವದನ್ನು ಸಹ ಪ್ರತ್ಯಕ್ಷವಾಗಿಯೇ ನೋಡುತ್ತಲಿದ್ದೇವೆ. ಮತ್ತು ಆಚಾರಶೀಲರನ್ನು ಜನಗಳು ತಿರಸ್ಕರಿಸುವದನ್ನು ಆಚಾರಹೀನರಾದವರನ್ನು ಪುರಸ್ಕರಿಸುವದನ್ನೂ ನೋಡಿರುತ್ತೇವೆ. ಆದ ಕಾರಣ ಈ ವಾಕ್ಯಗಳನ್ನು ಹ್ಯಾಗೆ ನಂಬಬಹುದು? ಪ್ರತ್ಯಕ್ಷವಿರೋಧವಲ್ಲವೆ! ಎಂದರೆ. ಮನುಷ್ಯನು ಆಚಾರಶೀಲನಾಗಿದ್ದರೆ ಈಗ ಬದುಕಿದ ಕಾಲಕ್ಕಿಂತಲೂ ಇನ್ನೂ ಬಹುಕಾಲ ಬದುಕುತ್ತಿದ್ದನು. ದುರಾಚಾರದಿಂದ ಆಯುಸ್ಸು ನ್ಯೂನವಾಯಿತು. ಅದರಂತೆ ಆಚಾರಶೀಲನಾದವನಿಗೆ ಕೇವಲ ಅಲ್ಪಾಯುರ್ಯೋಗವೇ ಇದ್ದಾಗ್ಯೂ ಆಚಾರಮಾಹಾತ್ಮ್ಯದಿಂದ ಆಯುಸ್ಸು ವೃದ್ಧಿಯಾಗುವುದು. ವಸಿಷ್ಠ ವಿಶ್ವಾಮಿತ್ರಾದಿ ಮಹರ್ಷಿಗಳು ತಪಸ್ಸೇ ಮುಂತಾದ ಆಚಾರ ಮಾಹಾತ್ಮ್ಯದಿಂದ ಅನೇಕ ಲಕ್ಷ ವರುಷಗಳವರಿಗೆ ಬದುಕಿದ್ದದ್ದೂ ರಾವಣ ದುರ್ಯೋಧನಾದಿಗಳು ಅಲ್ಪ ಕಾಲದಲ್ಲಿಯೇ ನಷ್ಟವಾದದ್ದೂ, ಇದಕ್ಕೆ ದೃಷ್ಟಾಂತವು. ಸಾಧುಜನಗಳ ತಿರಸ್ಕಾರ ಪುರಸ್ಕಾರಗಳು ಮುಖ್ಯವಾದ್ದರಿಂದ ಎರಡನೇ ಆಕ್ಷೇಪವು ಬಾಧಕವಾದ್ದಲ್ಲ. ಅದುಕಾರಣ ಇಹಪರಗಳಲ್ಲಿ ಶ್ರೇಯಸ್ಸನ್ನ ಅಪೇಕ್ಷಿಸುವನು, ತನ್ನ ವರ್ಣಾಶ್ರಮಾದಿಗಳಿಗೆ ಅರ್ಹವಾದ ಆಚಾರದಲ್ಲಿ ನಿರತನಾಗಿರಬೇಕು

## ಆಹ್ನಿಕವಿಧಿಯು ಹೇಳಲ್ಪಡುವುದು.

ಆಹ್ನಿಕವೆಂದರೆ ಒಂದು ದಿವಸದಲ್ಲಿ ನಡಿಸುವ ಸಚ್ಚರಿತ್ರವು ಅದು ಸಂಕ್ಷೇಪವಾಗಿ ಹೇಳಲ್ಪಡುವುದು.

ಶ್ಲೋ ॥ ಕಲ್ಯೋದ್ಬೋಧೋಚ್ಯುತಾಂಘ್ರಿಸ್ಮರಣಮುಪಸಿಚ
ಸ್ನಾನಮರ್ಘ್ಯಂಜಪೋಗ್ನಿರ್ಹೋಮಶ್ಚ ಬ್ರಹ್ಮಯ
ಜ್ಞೋ ಹಿತಭಜನಮಥಸ್ನಾನಮಧ್ಯಾಹ್ನಕೃತ್ಯೇ।
ವಿಷ್ಣ್ವರ್ಚಾವೈಶ್ವದೇವಂ ಮಖವಿಧಿರಶನಂ ಸತ್ಪ್ರ
ಬಂಧಾಸು ಸಂಧ್ಯಾ ಸಂಧ್ಯೋಪಾಸ್ತಿರ್ಜಪಾರ್ಚಾನಾನ್ನಂ
ಶಯನಮಿತಿಪ್ರತ್ಯಹಂಸಚ್ಚರಿತ್ರಂ ॥

ತಾತ್ಪರ್ಯ ॥ ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಅಚ್ಯುತಾಂಘ್ರಿಸ್ಮರಣ
ವನ್ನ ಮಾಡಿ ಮೃತ್ತಿಕಾಶೌಚಪೂರ್ವಕವಾದ ಪ್ರಾತಸ್ಸ್ನಾನಾನಂತರ
ಸಂಧ್ಯಾವಂದನ ಔಪಾಸನ ಬ್ರಹ್ಮಯಜ್ಞ ಉಪಾದಾನ ಮಾಧ್ಯಾಹ್ನಿಕ
ಸ್ನಾನಾದಿಕೃತ್ಯ ವಿಷ್ಣ್ವಾರಾಧನ ವೈಶ್ವದೇವ ಮಹಾಯಜ್ಞ ಭೋಜನ
ರಾಮಾಯಣಾದಿ ಸತ್ಪ್ರಬಂಧ ಪಾರಾಯಣ ಸಾಯಂ ಸಂಧ್ಯಾನುಷ್ಠಾನ
ಸಾಯಮೌಪಾಸನ ದೇವತಾರ್ಚನ ಭೋಜನಯೋಗಾದಿ ಸಚ್ಚರಿತ್ರವೇ
ಆಹ್ನಿಕವೆನ್ನಿಸಿಕೊಳ್ಳಲ್ಪಡುತ್ತದೆ.

## ಅಥ ಪ್ರಾತರುತ್ಥಾನವಿಧಿಃ.

ಯಾಜ್ಞವಲ್ಕ್ಯಃ ॥ ಬ್ರಾಹ್ಮೇಮುಹೂರ್ತ ಉತ್ಥಾಯಚಿಂತಯೇ
ದಾತ್ಮನೋಹಿತಂ। ಧರ್ಮಾರ್ಥಕಾಮಾನ್ಸ್ವೇ
ಕಾಲೇ ಯಥಾಶಕ್ತಿನಹಾಪಯೇತ್ ॥ ೧ ॥

ತಾತ್ಪರ್ಯ ॥ ಬ್ರಾಹ್ಮ ಮುಹೂರ್ತದಲ್ಲಿ ಮಾಧವೀಯದಲ್ಲಿ ಹೇಳುವ
ಪ್ರಕಾರ ಕೊನೆ ಅರ್ಧಯಾಮದ ಮೊದಲಿನಲ್ಲಿ ಎದ್ದು ತನಗೆ ಹಿತವನ್ನು
ಅಂದರೆ ಮಾಡಲ್ಪಟ್ಟ ಮುಂದೆ ಮಾಡಬೇಕಾಗುವ ವೇದಾರ್ಥ ಸಂಶಯಗ
ಳನ್ನು ಚಿಂತಿಸುವುದು. (ಆ ಕಾಲದಲ್ಲಿ ಚಿತ್ತಕ್ಕೆ ಅವ್ಯಾಕುಲತ್ವದಿಂದ
ತತ್ವ ಪ್ರತಿಭೆಯುಂಟಾಗುವುದರ ದೆಸೆಯಿಂದ ಎಂದು ಭಾವವು.) ಅನಂ
ತರ ಧರ್ಮಾರ್ಥ ಕಾಮಗಳನ್ನು ಉಚಿತಕಾಲಗಳಲ್ಲಿ ಯಥಾ ಸಂಭವವಾಗಿ
ಅನುಭವಿಸುವುದು (ಪುರುಷಾರ್ಥವಾದ್ದರಿಂದ ಎಂದು ಭಾವವು) ಯದ್ಯಪಿ
ಇವುಗಳಿಗೆ ಸಾಮಾನ್ಯವಾಗಿ ಸೇವನವು ಹೇಳಲ್ಪಟ್ಟಾಗ್ಯೂ ಕಾಮಾರ್ಥ
ಗಳ ಸೇವನವು ಧರ್ಮಾವಿರುದ್ಧವಾಗಿರಬೇಕೆಂದು ವಿಜ್ಞಾನೇಶ್ವರರು
ಹೇಳಿದ್ದಾರೆ ... ... ... ॥ ೧ ॥

ರತ್ನಾವಳ್ಯಾಂ ॥ ಬ್ರಾಹ್ಮಮುಹೂರ್ತೇನಿದ್ರಾಂಚ ಕುರುತೇ
ಸರ್ವದಾತುಯಃ । ಅಶುಚಿಂತಂವಿಜಾನೀ
ಯಾದನರ್ಹಂಸರ್ವಕರ್ಮಸು ॥ ೨ ॥

ತಾತ್ಪರ್ಯ ॥ ಬ್ರಾಹ್ಮೇ ಮುಹೂರ್ತದಲ್ಲಿ ಆರೋಗ್ಯಶಾಲಿ
ಯಾಗಿದ್ದ ಯಾವ ಮನುಷ್ಯನು ಮಲಗಿ ನಿದ್ರೆಗೈಯುವನೋ ಅವನು

ಸರ್ವ ಕರ್ಮದಲ್ಲಿಯೂ ಅನರ್ಹನು. ಅಶುಚಿರ್ಭೂತನಾದ್ದರಿಂದ ಎಂದು ತಿಳಿಯತಕ್ಕದ್ದು. ... ... ||೧||

ಆಯುರ್ವೇದೆ॥ ಬ್ರಾಹ್ಮೇಮುಹೂರ್ತೇಉತ್ಥಾಯ ಜೀರ್ಣಾಜೀರ್ಣಂನಿರೂಪಯೇತ್ | ಅಜೀರ್ಣೇಪುನರಾಸಂಧ್ಯಾಗಮಾತ್ಸ್ವಾಪೋವಿಧೀಯತೆ ... ... ||೨||

ಬ್ರಾಹ್ಮ ಮುಹೂರ್ತದಲ್ಲಿ ಎದ್ದು ಜೀರ್ಣಾಜೀರ್ಣಗಳನ್ನು ನೋಡಿಕೊಂಡು ಜೀರ್ಣವಾಗದೇ ಇರುವಪಕ್ಷ ಪ್ರಾತಸ್ಸಂಧ್ಯಾಪರ್ಯಂತರವು ಮಲಗ ಬಹುದು. ||೩||

ಬ್ರಾಹ್ಮೇಮುಹೂರ್ತೇಯಾನಿದ್ರಾ ಸಾಪುಣ್ಯಕ್ಷಯಕಾರಿಣೀ | ತಾಂಕರೋತಿತುಯೋಮೋಹಾ ತ್ಪಾದಕೃಚ್ಛ್ರೇಣ ಶುಧ್ಯತಿ॥ ... ... ||೪||

ಬ್ರಾಹ್ಮ ಮುಹೂರ್ತದಲ್ಲಿ ಮಾಡಲ್ಪಡುವ ನಿದ್ರೆಯು ಪುಣ್ಯಕ್ಷಯ ಕಾರಿಯಾಗುವದು. ಅಜ್ಞಾನದಿಂದ ಆಗ ಯಾವನು ನಿದ್ರೆ ಮಾಡುವನೋ ಅವನು ಪಾದಕೃಚ್ಛ್ರ ಪ್ರಾಯಶ್ಚಿತ್ತದಿಂದ ಪರಿಶುದ್ಧನಾಗುವನು. ಕೃಚ್ಛ್ರಾದಿ ಸ್ವರೂಪವು ಪ್ರಾಯಶ್ಚಿತ್ತ ಕಾಂಡದಲ್ಲಿ ಬರೆಯಲ್ಪಡುವದು.

ಮಾಧವೀಯೇ॥ ಸೂರ್ಯೋದಯಾತ್ಪ್ರಾಕ್ ಅರ್ಧಪ್ರಹರದ್ವಿಮುಹೂರ್ತೌ ತತ್ರಾದ್ಯೋ ಬ್ರಾಹ್ಮಃ ದ್ವಿತೀಯೋ ರೌದ್ರಃ ಇತಿ ||೫||

ಪರಾಶರಮಾಧವೀಯದಲ್ಲಿ ॥ ಸೂರ್ಯೋದಯಕ್ಕಿಂತ ಮೊದಲು ಅರ್ಧ ಯಾಮದಲ್ಲಿ ಎರಡು ಮುಹೂರ್ತಗಳು. ಅದರಲ್ಲಿ ಮೊದಲನೇದು ಬ್ರಾಹ್ಮ ಮುಹೂರ್ತವು. ಎರಡನೇದು ರೌದ್ರವು ಎಂದು ಹೇಳಿದ್ದಾರೆ.

ಸ್ಮೃತ್ಯಂತರೇವಿಶೇಷಃ ॥ ರೌದ್ರಃ ಶ್ವೇತಶ್ಚ ಮೈತ್ರಶ್ಚ ತಥಾ ಚಾರಭಟಸ್ಸ್ಮೃತಃ | ಸಾವಿತ್ರೋ ವೈಶ್ವದೇವಶ್ಚ ಗಾಂಧರ್ವಃ ಕುತಪಸ್ತಥಾ ॥ ರೌಹಿಣಸ್ತಿಲಕಶ್ಚೈವ ವಿಭವೋ ನಿರ್ಋತಿಸ್ತಥಾ | ಶಂಬರೋ ವಿಜಯಶ್ಚೈವ ಭಗಃ ಪಂಚದಶಸ್ಮೃತಃ ॥ ಏತೇ ಪಂಚದಶ ಸೂರ್ಯೋದಯಾರಭ್ಯ ಕ್ರಮಾದ್ದಿವಾ ಮುಹೂರ್ತಾಃ॥

## ರಾತ್ರಿ ಮುಹೂರ್ತಗಳು.

ಶಶಾಂಕಶ್ಚಾಕ್ಷಪಶ್ಚೈವ ತಥಾಹಿರ್ಬುಧ್ನ್ಯಮೈತ್ರಕೌ ।
ಅಶ್ವಿನೋಯಾಮ್ಯವಹ್ನೀಯೌ ವೈಧಾತ್ರಶ್ಚಾಂದ್ರಪದಃ॥
ಆದಿತೇಯೋಥ ಜೈತ್ರಶ್ಚ ವೈಷ್ಣವಸ್ಸೂರಪಿವಚ ।
ಬ್ರಾಹ್ಮೋನಾಭ ಸ್ವತಶ್ಚೈವ ಮುಹೂರ್ತಾಕ್ರಮ
ಶೋನಿಸಿ ॥ಇತಿ॥

ಸ್ಮೃತ್ಯಂತರದಲ್ಲಿ ಒಂದು ಹಗಲಿಗೆ ಹದಿನೈದು ಮುಹೂರ್ತಗಳು ಒಂದು ರಾತ್ರಿಗೆ ಹದಿನೈದು ಮುಹೂರ್ತಗಳು ಅದರಲ್ಲಿ ರಾತ್ರಿಯ ಹದಿನಾಲ್ಕನೆಯ ಮುಹೂರ್ತವು ಬ್ರಾಹ್ಮವೆಂದು ಹೇಳಿದೆ. ಮುಹೂರ್ತವೆಂದರೆ ಎರಡು ಘಳಿಗೆಯು ಶ್ಲೋಕದಲ್ಲಿಯೆ ಸುಲಭವಾಗಿ ಅರ್ಥವಾಗುವ ಪ್ರಯುಕ್ತ ಮುಹೂರ್ತಗಳನ್ನು ವಿವರಿಸಲಿಲ್ಲವು.

### ॥ ಅಥ ಬ್ರಾಹ್ಮಮುಹೂರ್ತಕರ್ತವ್ಯವಿಧಿಃ ॥

ವಿಷ್ಣುಧರ್ಮೇ-ಶಯನೇ॥ಉತ್ತಿಷ್ಠನ್ ಚಿಂತಯೇದ್ಧರಿಂ ವ್ರಜನ್
ಚಿಂತಯೇತ್ಕೇಶವಂ। ಭುಂಜನ್ ಚಿಂತಯೇತ್ ಗೋವಿಂದಂ ಸ್ವಪನ್
ಚಿಂತಯೇನ್ಮಾಧವಂ ॥೧॥ ಇತ್ಯುಕ್ತರೀತ್ಯಾಉತ್ಥಾಯ ಹರಿ
ರ್ಹರಿರಿತಿಸಪ್ತಕೃತ್ವಉಚ್ಚಾರ್ಯ ॥

ತಾತ್ಪರ್ಯ॥ ಶಯ್ಯೆಯಿಂದೇಳುವಾಗ ಹರಿಯನ್ನು ಪ್ರಯಾಣ ಕಾಲದಲ್ಲಿ ಕೇಶವನನ್ನು ಭೋಜನಕಾಲದಲ್ಲಿ ಗೋವಿಂದನನ್ನು ಮಲಗುವಾಗ ಮಾಧವನನ್ನೂ ಧ್ಯಾನಿಸು. ಎಂದು ಹೇಳಿರುವ ಪ್ರಕಾರ ಎದ್ದು ಹರಿಃ ಹರಿಃ ಎಂದು ಏಳುಬಾರಿ ಉಚ್ಚಾರ ಮಾಡಬೇಕು.

ಗ್ರಾಹಗ್ರಸ್ತೇಗಜೇಂದ್ರೇರುದತಿ (ರುವತಿ) ಸರಭಸಂತಾರ್ಕ್ಷ್ಯ
ಮಾರುಹ್ಯಧಾವನ್ ವ್ಯಾಘೂರ್ಣನ್ಮಾಲ್ಯಭೂಷಾ ವಸನಪ
ರಿಕರೋಮೇಘಗಂಭೀರಘೋಷಃ। ಅಬಿಭ್ರಾಣೋರಥಾಂ
ಗಂ ಶರಮಸಿಮಭಯಂ ಶಂಖಚಾಪೌ ಸಖೇಟೌ ಹಸ್ತೈಃ
ಕೌಮೋದಕೀಂ ಮಪ್ಯವತು ಹರಿರಸಾವಂಹಸಾಂಸಂಹರ್ತಾ
ನಃ ... ... ॥೧॥

ತಾತ್ಪರ್ಯ ॥ ಗ್ರಾಹಗ್ರಸ್ತನಾದ ಗಜೇಂದ್ರನು ಕೂಗುತ್ತಿರಲು ಅತ್ಯಧಿಕ ವೇಗದೊಡನೆ ತನ್ನ ಹಸ್ತಗಳಿಂದ ಶಂಖ ಚಕ್ರಾದ್ಯಾಯುಧಂಗಳನ್ನು ಧರಿಸಿ ಗರುಡಾರೂಢನಾಗಿ ವಸ್ತ್ರ ಭೂಷಣಾದಿಗಳೆಲ್ಲವು ಜೋಲಾಡುವಂತೆ ಮೇಘ ಶಬ್ದದೋಪಾದಿಯಲ್ಲಿ ಅತಿಗಂಭೀರವಾದ ಧ್ವನಿಯೊಡನೆ ಬರುತ್ತಿರುವ ಹರಿಯು ಪಾಪರಾಶಿಯಿಂದ ಗ್ರಸ್ತರಾದ ನಮ್ಮನ್ನು ರಕ್ಷಿಸಲಿ.

ನಕ್ರಾಕ್ರಾಂತೇಕರೀಂದ್ರೇ ಮುಕುಳಿತ ನಯನೇ ಮೂಲಮೂಲೇ
ತಿಖಿನ್ನೇನಾಹಂನಾಹಂನಚಾಹಂನಚಭವತಿಪುನಸ್ತಾದೃಶೋ
ಮಾದೃಶೇಷು । ಇತ್ಯೇವಂತ್ಯಕ್ತಹಸ್ತೇಸಪದಿಸುರಗಣೇ
ಭಾವಶೂನ್ಯೇಸಮಸ್ತೇ ಮೂಲಂಯಃಪ್ರಾದುರಾಸೀತ್ಸದಿಶ
ತುಭಗವಾನ್ ಮಂಗಳಂಸಂತತಂನಃ ... ॥ ೨ ॥

ತಾತ್ಪರ್ಯ ॥ ಮೊಸಳೆಯಿಂದ ಗ್ರಸ್ತನಾದ ಗಜೇಂದ್ರನು ಅಧಿಕವಾದ ವೇದನೆಯಿಂದ ಕಣ್ಣು ತೆರೆಯುವದಕ್ಕೂ ಆಗದೆ ಜಗತ್ಕಾರಣ ಜಗತ್ಕಾರಣನೇ ರಕ್ಷಿಸು ಎಂದು ಮೊರೆ ಇಡಲು ದೇವಶ್ರೇಷ್ಠರೆಲ್ಲರು ನಾವು ಜಗತ್ಕಾರಣರಲ್ಲ ನಾವು ಜಗತ್ಕಾರಣರಲ್ಲ ನಮ್ಮಲ್ಲಿ ಯಾರೂ ಅಲ್ಲವು. ಎಂದು ಯಾರೂ ಸಮೀಪಕ್ಕೆ ಬರದಿರಲು ಯಾವ ಹರಿಯು ಖಿನ್ನನಾದ ಗಜೇಂದ್ರನಿಗೆ ಪ್ರತ್ಯಕ್ಷನಾದನೋ ಆ ಜಗನ್ನಾಯಕನು ನಮಗೆ ಸದಾ ಮಂಗಳವನ್ನೀಯಲಿ.

ಪ್ರಾತಃಸ್ಮರಾಮಿಭವಭೀತಿ ಮಹಾರ್ತಿಶಾಂತ್ಯೈನಾರಾಯಣಂ
ಗರುಡವಾಹನಮಂಬುಜನಾಭಂ । ಗ್ರಾಹಾಭಿಭೂತಮದವಾ
ರಣಮುಕ್ತಿಹೇತುಂ ಚಕ್ರಾಯುಧಂ ತರುಣವಾರಿಜಪತ್ರ
ನೇತ್ರಂ ... ... ॥೦॥

ತಾತ್ಪರ್ಯ॥ ಗ್ರಾಹಗ್ರಸ್ತನಾಗಿ ಪರಾಭವವನ್ನು ಹೊಂದಿದ ಗಜೇಂದ್ರನಿಗೆ ಮುಕ್ತಿಪ್ರದನಾದ ಕಮಲಾಕ್ಷನಾದ ಚಕ್ರಪಾಣಿಯಾದ ಅಂಜನವರ್ಣನಾದ ಗರುಡವಾಹನನನ್ನು ಸಂಸಾರ ಭೀತಿಯೆಂಬ ರೋಗನಿವಾರಣಕ್ಕೋಸ್ಕರ ಪ್ರಾತಃಕಾಲದಲ್ಲಿ ಸ್ಮರಿಸುವೆನು.

ಪ್ರಾತರ್ನಮಾಮಿಮನಸಾವಚಸಾಚಮೂರ್ಧ್ನಾಪಾದಾರವಿಂದ
ಯುಗಳಂಪರಮಸ್ಯ ಪುಂಸಃ । ನಾರಾಯಣಸ್ಯನರಕಾರ್ಣ
ವತಾರಣಸ್ಯಪಾರಾಯಣಪ್ರವರವಿಪ್ರಪರಾಯಣಸ್ಯ ॥೨॥

ತಾತ್ಪರ್ಯ॥ ನರಕೋದ್ಧಾರಿಯಾದ ಭಕ್ತವಲ್ಲಭನಾದ ಪರಮ ಪುರುಷನಾದ ನಾರಾಯಣನ ಪಾದಾರವಿಂದ ದ್ವಂದ್ವವನ್ನು ಪ್ರಾತಃಕಾಲದಲ್ಲಿ ಮನೋವಾಕ್ಕಾಯ ಕರ್ಮಗಳಿಂದ ವಂದಿಸುವೆನು.

ಪ್ರಾತರ್ಭಜಾಮಿಭಜತಾಮಭಯಂಕರಂತಂ ಪ್ರಾಕ್ಸರ್ವಜನ್ಮ
ಕೃತ ಪಾಪಭಯಾಪನುತ್ತ್ಯೈ । ಯೋಗ್ರಾಹವಕ್ತ್ರಪತಿ
ತಾಂಘ್ರಿಗಜೇಂದ್ರ ಘೋರಶೋಕಪ್ರಣಾಶಮಕರೋದ್ಧೃ
ತಶಂಖಚಕ್ರಃ ... ... ॥೩॥

ತಾತ್ಪರ್ಯ॥ ಯಾವ ಜಗನ್ನಾಯಕನಾದ ನಾರಾಯಣನು ಗ್ರಾಹಗ್ರಸ್ತನಾಗಿ ಶೋಕಾವಿಷ್ಟನಾದ ಗಜೇಂದ್ರನಿಗೆ ಶೋಕ ನಾಶವನ್ನುಂಟುಮಾಡಿದನೋ ಅಂತಹ ಮತ್ತು ಭಕ್ತರಿಗೆ ಅಭಯಪ್ರದನಾದ ಚಕ್ರಪಾಣಿಯನ್ನ ನನ್ನ ಜನ್ಮಾಂತರೀಯ ಸರ್ವ ಪಾಪಗಳ ನಾಶಕ್ಕಾಗಿ ಭಜಿಸುವೆನು ॥

ಶ್ಲೋಕತ್ರಯಮಿದಂಪುಣ್ಯಂ ಪ್ರಾತರುತ್ಥಾಯಯಃಪಠೇತ್ ।
ಲೋಕತ್ರಯಗುರುಸ್ತಸ್ಮೈದದ್ಯಾದಾತ್ಮಪದಂಹರಿಃ ॥೪॥

ಇತ್ಯನುಸಂಧಾಯ ನಿದ್ರಾಂತಾಚಮನಂಮುಖ್ಯಂ ಶಾಸ್ತ್ರಂವಾಕೃತ್ವಾ॥

ಈ ಪುಣ್ಯಪ್ರದವಾದ ಶ್ಲೋಕತ್ರಯವನ್ನು ಪ್ರಾತಃಕಾಲದಲ್ಲೆದ್ದು ಯಾರು ಪಠಿಸುವರೋ ಅವರಿಗೆ ಸರ್ವಲೋಕಾಧಿಪತಿಯಾದ ಶ್ರೀಹರಿಯು ಮೋಕ್ಷಸಾಮ್ರಾಜ್ಯದಾನವನ್ನು ಮಾಡುವನು.

ಉತ್ಥಾಯತಸ್ಮಾತ್ ಶಯನಾತ್ ಪಾದೌಪ್ರಕ್ಷಾಳ್ಯವಾಗ್ಯತಃ ।
ಆಚಮ್ಯಸಂಸ್ಪೃಶೇದ್ಭೂಮಿಂಮಂತ್ರಮೇತಂಸಮುಚ್ಚರನ್॥

ಹಾಸಿಗೆಯಿಂದೆದ್ದು ಪಾದ ಪ್ರಕ್ಷಾಳನಾನಂತರ ಮೇಲೆ ಹೇಳಿದಂತೆ ಆಚಮನವನ್ನು ಮಾಡಿ ಮುಂದೆ ಹೇಳುವ ಮಂತ್ರೋಚ್ಚಾರಣದೊಡನೆ ಭೂಸ್ಪರ್ಶನಂ ಮಾಡತಕ್ಕದ್ದು.

ಶ್ಲೋ॥ ಸಮುದ್ರವಸನೇದೇವಿ ಪರ್ವತಸ್ತನಮಂಡಿತೇ। ವಿಷ್ಣು ಪತ್ನಿನಮಸ್ತುಭ್ಯಂ ಪಾದಸ್ಪರ್ಶಂಕ್ಷಮಸ್ವಮೆ॥

ತಾತ್ಪರ್ಯ॥ ಸಮುದ್ರವೇ ಡಾಬಾಗುಳ್ಳ ಪರ್ವತಸ್ತನಾಲಂಕೃತೆಯಾದ ವಿಷ್ಣು ಪತ್ನಿಯಾದ ಭೂದೇವಿಯೇ ನನ್ನ ಪಾದಸ್ಪರ್ಶವನ್ನು ಕ್ಷಮಿಸು.

ಕಾತ್ಯಾಯನಃ॥ ಶ್ರೋತ್ರಿಯಂಸುಭಗಂಗಾಂಚ ಅಗ್ನಿಮಗ್ನಿ
ಚಿತಂತಥಾ। ಪ್ರಾತರುತ್ಥಾಯಯಃಪಶ್ಯೇತ್ ಆರ್ತಿಭ್ಯಸ್ಸ
ವಿಮುಚ್ಯತೆ॥

ತಾತ್ಪರ್ಯ॥ ಇಲ್ಲಿ ಕಾತ್ಯಾಯನ ಮಹರ್ಷಿಗಳು ಕೆಲವು ವಿಶೇಷವನ್ನು ಹೇಳಿರುತ್ತಾರೆ. ಪ್ರಾತಃ ಕಾಲದಲ್ಲೆದ್ದು ಶ್ರೋತ್ರಿಯನನ್ನು ಸೌಭಾಗ್ಯಶಾಲಿಯನ್ನು ಹಸುವನ್ನು ಅಗ್ನಿಯನ್ನು ದೀಕ್ಷಿತನನ್ನು ಯಾವನು ಪ್ರಥಮತಃ ನೋಡುವನೋ ಅವನು ಆ ದಿವಸ ಸುಖಿಯಾಗಿರುವನು.

ಪಾಪಿಷ್ಟಂ ದುರ್ಭಗಂಮದ್ಯಂ ನಗ್ನಮುತ್ಕೃತ್ತನಾಸಿಕಂ।
ಪ್ರಾತರುತ್ಥಾಯಯಃಪಶ್ಯೇತ್ ತತ್ಕಲೇರುಪಲಕ್ಷಣಂ॥

ತಾತ್ಪರ್ಯ॥ ಪ್ರಾತಃ ಕಾಲದಲ್ಲೆದ್ದು ಪಾಪಿಷ್ಟನನ್ನು ದುರ್ಭಾಗ್ಯನನ್ನು ಮದ್ಯವನ್ನು ದಿಗಂಬರನನ್ನು ದುರ್ಲಕ್ಷಣವುಳ್ಳವನನ್ನು ಯಾವನು ನೋಡುವನೋ ಅವನು ಆ ದಿನದಲ್ಲಿ ದುಃಖ ಭಾಗಿಯಾಗುವನು.

ಪಾಂಚರಾತ್ರರಕ್ಷಾಯಾಂ॥ ನಿಗಮಾಂತಗುರುವಚನಃ॥ತತಃ
ಸ್ನಾನೀಯಮದರ್ಭತಿಲವಸ್ತ್ರಾದಿಕಂ ಮೃತ್ಪಾತ್ರಶೌಚಾರ್ಥಂಸ್ನಾ
ನೋಪಕರಣಂ ಸರ್ವಂ ಸಮಾಹೃತ್ಯ ತಮಸ್ತಿರೋಹಿತ
ಮನುಷ್ಯಜಂತುಮಲಾಯನಾರ್ಥಂನಿರ್ಗಮಮಾರ್ಗಂ ಸಂಚಾ
ಲಯೇತ್ ತತ್ರೋಗ್ರಹಾನ್ನಿರ್ಗಚ್ಛನ್ ಕೇಶವಮನುಧ್ಯಾ
ಯೇತ್ ವ್ರಜಚಿಂತಯಕೇಶವಮಿತಿ ಸ್ಮರಣಾತ್‌ತತಃ
ಸ್ವಾಶ್ರಮಾದಿಭ್ಯೋನೈರುತ್ಯಾಂ ದಿಶಿ ದ್ವಿತ್ರೀಷುಪಾತಪ್ರ

ವಿಂಶಾಂ ಧನುಷಮತಿಕ್ರಮ್ಯ। ಶುದ್ಧದೇಶನಿಕ್ಷಿಪ್ತಸ್ನಾನೋಪಕರಣಃ। ಯಥೋಕ್ತನಿಯಮೈರ್ವಿಣ್ಮೂತ್ರವಿಸರ್ಜನಂ ಕೃತ್ವಾ। ಸ್ವವರ್ಣಾಶ್ರಮಾವಸ್ಥಾದ್ಯನುಗುಣಾದೃಷ್ಟಾರ್ಥ ಮೃತ್ಸಂಖ್ಯಾದಿನಿಯಮಮಪದ್ಗಂಧಲೇಪಕ್ಷಯಕರಂ ಮಶಕ ದಂಶಪೀಡಾವಿರಹಿತಂ ಶೌಚಂ ಕುರ್ಯಾತ್-ಇತಿ ॥

ತಾತ್ಪರ್ಯ॥ ಅನಂತರ ಸ್ನಾನಾರ್ಥವಾದ ದರ್ಭತಿಲವಸ್ತ್ರವೇ ಮೊದಲಾದ ದೃಷ್ಟಾದೃಷ್ಟ ಪ್ರಯೋಜನಕಾರಿಗಳಾದ ಸ್ನಾನೋಪಕರಣಗಳನೆಲ್ಲವಂ ತೆಗೆದುಕೊಂಡು ಅಂಧಕಾರದಲ್ಲಿ ಕಾಣದೆಯಿರುವ ದುಷ್ಟ ಜಂತುಗಳನ್ನೋಡಿಸುವ ಉದ್ದಿಶ್ಯ ಹಸ್ತಧ್ವನಿಯನ್ನು ಮಾಡಿ ಅನಂತರ ತನ್ನ ಗೃಹಾದಿಗಳಿಗೆ ನೈರುತ್ಯ ದಿಕ್ಕಿಗಾಗಿ ಎರಡು ಮೂರು ಬಾಣಪಾತದಷ್ಟು ದೂರ ಭೂಮಿಯನ್ನತಿಕ್ರಮಿಸಿ ಶುದ್ಧವಾದ ಸ್ಥಳದಲ್ಲಿ ಇಡಲ್ಪಟ್ಟ ಸ್ನಾನೋಪಕರಣಗಳುಳ್ಳವನಾಗಿ ಶಾಸ್ತ್ರೋಕ್ತ ನಿಯಮಾನುಸಾರ ಮಲಮೂತ್ರ ವಿಸರ್ಜನಾನಂತರ ಸ್ವವರ್ಣಾಶ್ರಮಾವಸ್ಥಾದ್ಯನುಗುಣವಾಗಿ ಅದೃಷ್ಟಾರ್ಥವಾದ ಮೃತ್ಸಂಖ್ಯಾದಿ ನಿಯಮದೊಡನೆ ದುರ್ಗಂಧಲೇಪಕ್ಷಯಕರವಾದ ಶೌಚವನ್ನು ಮಶಕಾದಿ ಪ್ರಾಣಿಪೀಡೆ ಸಂಭವಿಸದಂತೆ ಮಾಡತಕ್ಕದ್ದು ವಸ್ತ್ರಾದಿಗಳು ಕಾಣಲ್ಪಡುವ ಪ್ರಯೋಜನ ವುಳ್ಳವುಗಳು. ದರ್ಭಾದಿಗಳು ಕಾಣಲ್ಪಡದಿರುವ ಪ್ರಯೋಜನವುಳ್ಳವುಗಳು. ಇದೇ ದೃಷ್ಟಾದೃಷ್ಟ ಪ್ರಯೋಜನ ಶಬ್ದಾರ್ಥವು. ಈ ಶೌಚವಿಧಿಯಲ್ಲಿ ಅದೃಷ್ಟಾರ್ಥವಾದ ಮೃತ್ಸಂಖ್ಯಾದಿ ನಿಯಮದೊಡನೆ ಎಂದು ಹೇಳಿರುವದ್ದರಿಂದ ಯಾತಕ್ಕಾಗಿ ಶೌಚದಲ್ಲಿ ಮೃತ್ತನ್ನ ಹಾಕಬೇಕು ಎಂಬುವ ಕುಶಂಕೆಯು ತಳ್ಳಲ್ಪಟ್ಟಿತು ಎಂದು ತಿಳಿಯುವುದು.

## ಅಥ ಮೂತ್ರಪುರೀಷೋತ್ಸರ್ಗವಿಧಿಃ.

ಆಂಗಿರಾಃ ॥ ಉತ್ಥಾಯ ಪಶ್ಚಿಮೇಯಾಮೇ ರಾತ್ರೇರಾಚಮ್ಯ ಚೋದಕಂ। ವಾಚಂನಿಯಮ್ಯ ಯತ್ನೇನಷ್ಠೀವನೋಚ್ಛ್ವಾಸವರ್ಜಿತಃ ॥ ಅಂತರ್ಧಾಯ ತೃಣೈರ್ಭೂಮಿಂ ಶಿರಃ ಪ್ರಾ

ವೃತ್ಯ ವಾಸಸಾ । ಕುರ್ಯಾನ್ಮೂತ್ರಪುರೀಷೇ ತು ಶುಚೌ
ದೇಶೇ ಸಮಾಹಿತಃ ... ॥೧॥

ತಾತ್ಪರ್ಯ ॥ ರಾತ್ರಿಯ ಪಶ್ಚಿಮಯಾಮದಲ್ಲಿದ್ದು ಶುದ್ಧಾಚಮನವನ್ನ ಮಾಡಿ ಉಗಿಯುವುದು ಸಿಟ್ಟುಸುರುಬಿಡುವುದು ಇವುಗಳನ್ನು ಬಿಟ್ಟು ಪ್ರಯತ್ನದಿಂದ ಮೌನವನ್ನಾಶ್ರಯಿಸಿ ವಸ್ತ್ರದಿಂದ ಶಿರಸ್ಸನ್ನಾಚ್ಛಾದಿಸಿಕೊಂಡು ಹುಲ್ಲಿನಿಂದ ಭೂಮಿಯನ್ನ ಮುಚ್ಚಿ ಶುದ್ಧವಾದ ಸ್ಥಳದಲ್ಲಿ ಮೂತ್ರ ಪರಿಷೋತ್ಸರ್ಜನ ಮಾಡಬೇಕು.

ಯಮಃ ॥ ಅಯಜ್ಞೀಯೈರನಾರ್ದ್ರೈಶ್ಚ ತೃಣೈಸ್ಸಂಛಾದ್ಯ
ಮೇದಿನೀಂ । ಘ್ರಾಣಾಸ್ಯೇ ವಾಸಸಾವೇಷ್ಟ್ಯ ಮಲಮೂತ್ರೇ
ತ್ಯಜೇದ್ಬುಧಃ ॥೨॥

ತಾತ್ಪರ್ಯ ॥ ಯಜ್ಞಾರ್ಹಗಳಲ್ಲದ ಒಣಗಿರುವ ಹುಲ್ಲುಗಳಿಂದ ಭೂಮಿಯನ್ನಾಚ್ಛಾದಿಸಿ ಮೂಗು ಬಾಯಿಗಳನ್ನ ವಸ್ತ್ರದಿಂದ ಮುಚ್ಚಿಕೊಂಡು ಮಲಮೂತ್ರಗಳನ್ನ ಬಿಡಬೇಕು.

ಸ್ಮೃತ್ಯಂತರೇ ॥ ಋಷ್ಯರ್ಚನೇ ನಿವೀತಂ ಸ್ಯಾತ್ ತಥಾ ವಸ್ತ್ರ
ಸ್ಯ ಧಾರಣೇ । ರೇತಸ್ಸೇಕೇ ತಥಾ ಮೂತ್ರಪುರೀಷೋತ್ಸರ್ಗ
ಯೋರಪಿ ... ॥೩॥

ತಾತ್ಪರ್ಯ ॥ ಋಷ್ಯರ್ಚನ ವಸ್ತ್ರಧಾರಣ ಸ್ತ್ರೀಸಂಗಮ ಮೂತ್ರಪುರೀಷೋತ್ಸರ್ಗ ಕಾಲಗಳಲ್ಲಿ ನಿವೀತವು ಅವಶ್ಯಕವಾದದ್ದು.

ಕಾತ್ಯಾಯನಃ ॥ ಯಜ್ಞೋಪವೀತಂ ಕರ್ಣೇ ತು ದಕ್ಷಿಣೇ ತು
ನಿಧಾಯ ಚ । ಕೃತ್ವಾವಕುಂಠನಂ ವಿಪ್ರಃ ಉತ್ತರೀಯೇಣ
ವಾಸಸಾ ॥ ಪವಿತ್ರಂ ದಕ್ಷಿಣೇ ಕರ್ಣೇ ಕೃತ್ವಾ ಶುಚಿಧರಾ
ತಲೇ । ಶುಷ್ಕಪತ್ರವಲೀಚ್ಛನ್ನೇ ವಿಣ್ಮೂತ್ರೇ ತು ವಿಸರ್ಜ
ಯೇತ್ ... ॥೪॥

ತಾತ್ಪರ್ಯ ॥ ಹೀಗೆ ನಿವೀತವಾದ ಯಜ್ಞೋಪವೀತವನ್ನು ಪವಿತ್ರವನ್ನು ಸಹ ಬಲಗಿವಿಯಲ್ಲಿ ಸುತ್ತಿ ಇಟ್ಟು ಉತ್ತರೀಯದಿಂದ ಶಿರಸ್ಸನ್ನ ಆಚ್ಛಾದಿಸಿಕೊಂಡು ಒಣಗಿರುವ ಎಲೆಗಳಿಂದ ಮುಚ್ಚಲ್ಪಟ್ಟ ಶುದ್ಧವಾದ ನೆಲದಮೇಲೆ ಮಲಮೂತ್ರ ವಿಸರ್ಜನವನ್ನ ಮಾಡಬಹುದು.

ಯಾಜ್ಞವಲ್ಕ್ಯಃ॥ ದಿವಾಸಂಧ್ಯಾಸುಕರ್ಣಸ್ಥ ಬ್ರಹ್ಮಸೂತ್ರ ಉದಙ್ಮುಖಃ । ಕುರ್ಯಾನ್ಮೂತ್ರಪುರೀಷೇತು ರಾತ್ರೌಚೇದ್ದಕ್ಷಿಣಾಮುಖಃ ... ॥೫॥

ತಾತ್ಪರ್ಯ॥ ದಕ್ಷಿಣ ಕರ್ಣದಲ್ಲಿ ಇಡಲ್ಪಟ್ಟ ಬ್ರಹ್ಮಸೂತ್ರಉಳ್ಳವನಾಗಿ ಹಗಲು ಸಂಧ್ಯಾಕಾಲಗಳಲ್ಲಿ ಉತ್ತರಾಭಿಮುಖನಾಗಿ ರಾತ್ರಿಯಲ್ಲಿ ದಕ್ಷಿಣಾಭಿಮುಖನಾಗಿಯೂ ಮಲಮೂತ್ರ ವಿಸರ್ಜಿಸುವುದು.

ಪಿತಾಮಹಃ॥ ಉದೀಚೀಂಪ್ರಾಗುದೀಚೀಂವಾ ಶೌಚಾಚಾರಕ್ಷಮಾಂದಿಶಂ ... ॥೬॥

ತಾತ್ಪರ್ಯ॥ ಉತ್ತರದಿಕ್ಕಿನಲ್ಲಿಯೋ ಅಥವಾ ಈಶಾನ್ಯ ದಿಕ್ಕಿನಲ್ಲಿಯೋ ಯಾವ ದಿಕ್ಕಿನಲ್ಲಿ ಶೌಚಾಚಾರಗಳಿಗೆ ಅನುಕೂಲವಿರುವದೋ ಆ ದಿಕ್ಕಿನಲ್ಲಿ ಮಲಮೂತ್ರ ವಿಸರ್ಜನೆ ಮಾಡಬಹುದು.

ಮನುಃ॥ ನಾನ್ಯಚಿತ್ತಃ ಚಿರಂತಿಷ್ಠೇನ್ನ ಸ್ಪೃಶೇತ್ಪಾಣಿನಾ ಶಿರಃ । ನಬ್ರೂಯಾನ್ನ ದಿಶಃಪಶ್ಯೇದ್ವಿಣ್ಮೂತ್ರೋತ್ಸರ್ಜನೇ ಬುಧಃ ... ॥೭॥

ಮಲಮೂತ್ರ ವಿಸರ್ಜನಕಾಲದಲ್ಲಿ ಕಾರ್ಯಾಂತರಾಲೋಚನೆಯನ್ನು ಮಾಡಬಾರದು. ಯಾವದನ್ನೂ ಹೇಳಬಾರದು. ದಿಕ್ಕುಗಳನ್ನೋಡಬಾರದು.

ವ್ಯಾಸಃ॥ ಸಜಲಂಭಾಜನಂಸ್ಥಾಪ್ಯ ಮೃತ್ತಿಕಾಂಚಪರೀಕ್ಷಿತಾಂ । ಕುರ್ಯಾನ್ಮೂತ್ರಪುರೀಷೇತು ನಾನ್ಯಥಾಶುದ್ಧಿಮಾಪ್ನುಯಾತ್ ... ॥೮॥

ತಾತ್ಪರ್ಯ॥ ನೀರುಳ್ಳ ಶೌಚಾರ್ಹವಾದ ಪಾತ್ರವನ್ನೂ ಪರೀಕ್ಷಿತವಾದ ಶೌಚಾರ್ಹವಾದ ಮಣ್ಣನ್ನೂ ಶುದ್ಧವಾದ ಸ್ಥಳದಲ್ಲಿಟ್ಟು ಮೂತ್ರಪುರೀಷವನ್ನು ಮಾಡಬೇಕು ಅನ್ಯಥಾ ಶುದ್ಧನಾಗಲಾರನು.

ಬೋಧಾಯನಃ॥ ಫಾಲಕೃಷ್ಟೇಜಲೇಚಿತ್ಯಾಂ ವಲ್ಮೀಕೇ ಗಿರಿಮಸ್ತಕೇ । ದೇವಾಲಯೇನದೀತೀರೇ ದರ್ಭಪೃಷ್ಠೇ ಶುಕಾದ್ವಲೇ ... ॥೯॥

ಉತ್ತಭೂಮಿ ನೀರು ಚಿತಿಪುತ್ತ ಪರ್ವತಾಗ್ರ ದೇವಾಲಯ ನದೀತೀರ ಬೆಳ
ದಿರುವ ದರ್ಭೆ ಮತ್ತು ಹುಲ್ಲು ವೃಕ್ಷಾಧಿಗಳ ನೆಳಲು ಮರದ ಬುಡ ಈ
ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು.

ಮನುಃ॥ ಪ್ರತ್ಯಗ್ನಿಂಪ್ರತಿಸೂರ್ಯಂಚ । ಪ್ರತಿಸೋಮೋದಕದ್ವಿಜಾನ್ ॥
ಪ್ರತಿಗಾಂಪ್ರತಿಸಂಧ್ಯಾಂಚ । ಪ್ರಜ್ಞಾನಶ್ಯತಿಮೇಹತಃ ॥ ೧೦ ॥
ತಾ॥ ಅಗ್ನಿ, ಸೂರ್ಯ, ಚಂದ್ರ, ಬ್ರಾಹ್ಮಣ, ಗೋವು, ಸಂಧ್ಯೆಗಳಿಗೆದು
ರಾಗಿ ಮಲಮೂತ್ರ ವಿಸರ್ಜನಂ ಗೈಯ್ಯುವವನ ಪ್ರಜ್ಞೆಯು ನಷ್ಟ
ವಾಗುವದು.

ಆಪಸ್ತಂಭಃ॥ ನಸೋಪಾನನ್ಮೂತ್ರಪುರಿಷೇಕುರ್ಯಾತ್ ॥ ೧೧ ॥
ತಾ॥ ಪಾದರಕ್ಷೆಯನ್ನು ಧರಿಸಿ ಮಲಮೂತ್ರ ವಿಸರ್ಜನೆ ಮಾಡಬಾರದು.
ಚರಕಃ॥ ನವೇಗಂಧಾರಯೇತ್ಸೊಪರುದ್ಧಃ । ಕ್ರಿಯಾಂಕುರ್ಯಾ
ತ್ । ಯಾವದ್ವೇಗಂಧಾರಯತಿತಾವದಪ್ರಯತಃಸ್ಯಾತ್ ॥ ೧೨
ತಾ॥ ಮಲಮೂತ್ರಗಳ ವೇಗವನ್ನು ಧರಿಸಬಾರದು. ಮಲಮೂತ್ರಗ
ಳನ್ನು ತಡಮಾಡಿಕೊಂಡು ಕ್ರಿಯೆಗಳನ್ನು ಮಾಡಬಾರದು. ವೇಗವನ್ನ ಧರಿ
ಸಿರುವ ಪರ್ಯಂತರವೂ ಅಪರಿಶುದ್ಧನು.
ಭಾರದ್ವಾಜಃ॥ ಮಲಮೂತ್ರಂತ್ಯಜೇದ್ಯಸ್ತು । ವಿಸ್ಮೃತ್ಯೈವೋಪವೀತ
ಧೃಕ್ ॥ ತತ್ಸೂತ್ರಂತುಪರಿತ್ಯಜ್ಯದಧ್ಯಾದನ್ಯನ್ನವಂಪುನಃ ॥ ೧೩ ॥
ತಾ॥ ಮರತು ಉಪವೀತಿಯಿಂದಾ ಯಾವನು ಮಲಮೂತ್ರ ವಿಸ
ರ್ಜನೆ ಮಾಡುವನೋ ಅವನು ಆ ಸೂತ್ರವನ್ನ ತ್ಯಾಗಮಾಡಿ ಹೊಸದಾಗಿ
ಯಜ್ಞೋಪವೀತವನ್ನ ಹಾಕಿಕೊಳ್ಳಬೇಕು.
ಅಂಗಿರಾಃ॥ ಕೃತ್ವಾಮೂತ್ರಂಪುರೀಷಂವಾಯೋಮಾನ್ಯ್ರೋದಕಂಭವೇತ್॥
ಸ್ನಾತ್ವಾಲಬ್ಧ್ವೋದಕಂಪಶ್ಚಾತ್ಶೌಚಂಕೃತ್ವಾವಿಶುಧ್ಯತಿ ॥ ೧೪ ॥
ತಾ॥ ಮಲಮೂತ್ರ ವಿಸರ್ಜನಾನಂತರ ಶೌಚಕ್ಕೆ ನೀರು ಇಲ್ಲದಿದ್ದರೆ
ನೀರು ಅನುಕೂಲವಾದನಂತರ ಶೌಚವನ್ನ ಮಾಡಿಸ ಚೇಲಸ್ನಾನ ಮಾ
ಡಿದರೆ ಶುದ್ಧನಾಗುವನು.

ಜಾಬಾಲಿಃ॥ [illegible] ॥
[illegible] ॥ ೧೫ ॥

ತಾ॥ ಸ್ನಾನಾನಂತರ ಆರ್ದ್ರವಸ್ತ್ರದಿಂದ ಯಾವವನು ಮಲಮೂತ್ರ
ಗಳನ್ನ ವಿಸರ್ಜನೆ ಮಾಡುವನೋ ಅವನು ಶೌಚಾನಂತರ ಪ್ರಾಣ
ಯಾಮಮಾತ್ರವನ್ನು ಮಾಡಿ ಪುನಹಾ ಸ್ನಾನದಿಂದ ಶುದ್ಧನಾಗುವನು.

ದೇವಲಃ॥ ಧೃತೋರ್ಧ್ವಮೇಹನೋವಸ್ತ್ರಮುತ್ಕ್ಷಿಪ್ಯದ್ರುತಮುತ್ಥಿತಃ
ಆಶೌಚಾನ್ನೋತ್ಸೃಜೇತ್ ಶಿಶ್ನಂಪ್ರಸ್ರಾವೋಚ್ಚಾರಯೋರಪಿ ॥ ೧೬

ಮಲಮೂತ್ರವಿಸರ್ಗಗಳಲ್ಲಿ ವಸ್ತ್ರವನ್ನ ಮೇಲಕ್ಕೆಯತ್ತಿ ಉ
ರ್ಧ್ವಾಭಿಮುಖವಾಗಿ ಲಿಂಗವನ್ನ ಯಡಗೈಯಲ್ಲಿ ಹಿಡಿದು ಯಾವತ
ಶೌಚ ಪರ್ಯಂತರವೂ ಬಿಡಬಾರದು.

ಯತಿಧರ್ಮಸಮುಚ್ಚಯೇ॥ ಸ್ನಾನೇಚಾವಶ್ಯಕೇಚೈವಭೋಜನೇಜಪ
ಕರ್ಮಣಿ ॥ ಸ್ವಾಧ್ಯಾಯೇಚೈವನಿದ್ರಾಯಾಂ ಉಪದಂಡೇನಬಂಧಯೇತ್ ॥೧

ವಾ॥ ಉಪದಂಡಾಭಾವೇನಿಧಾನ ಸ್ಥಲೇಚಾಶುದ್ಧೇವಿಶೇಷತಃ । ತ್ರಿದಂಡ
ಮುಪವೀತಂಚಶಿಖಾವತ್ ಬಿಭೃಯಾಧ್ಯತಿಃ । ಕುರ್ಯಾನ್ಮೂತ್ರಪುರೀಷೇತು
ತ್ರಿದಂಡರಹಿತೋಯತಿಃ ॥ ೧೭ ॥

ತಾ॥ ಸನ್ಯಾಸಿಯಾದವನು ಸ್ನಾನಕಾಲದಲ್ಲಿಯು ಅವಶ್ಯಕವಾದ ಕ
ರ್ಮದಲ್ಲಿಯು ಭೋಜನಕಾಲದಲ್ಲಿಯೂ ತ್ರಿದಂಡವನ್ನ ಉಪದಂಡದಲ್ಲಿ ಬ
ಧನ ಮಾಡಬೇಕು. ಉಪದಂಡವಿಲ್ಲದೆಯೂ ಸ್ಥಳ ಅಪರಿಶುದ್ಧವಾಗಿದ
ಇದ್ದರೆ ತ್ರಿದಂಡವನ್ನು ಉಪವೀತವನ್ನೂ ಶಿಖೆಯೋಪಾದಿಯಲ್ಲಿ ಧರಿಸಬೇ
ಕಾಗಿದ್ದಾಗ್ಯೂ ಮೂತ್ರಪುರೀಷ ವಿಸರ್ಗಗಳನ್ನು ತ್ರಿದಂಡವಿಲ್ಲದೆ ಮಾಡ
ಬಹುದು.

ಮಾಧವೀಯೇ ಭರದ್ವಾಜಃ॥ ಯಥಾಪಕೃಷ್ಯವಿಣ್ಮಾತ್ರಂ ಲೋಷ್ಟಕಾ
ಷ್ಠತೃಣಾದಿನಾ॥ ಉದಸ್ತವಾಸಾಉತ್ತಿಷ್ಠೇತ್ ದೃಢಂವಿಧೃತಮೇಹನಃ॥೧೮

ತಾ॥ ಲೋಷ್ಟಕಾಷ್ಟ ತೃಣಾದಿಗಳಿಂದ ಮಲಮೂತ್ರಗಳನ್ನು ತೊಡೆ
ಮೇಲಕ್ಕೆ ಎತ್ತಲ್ಪಟ್ಟ ವಸ್ತ್ರವುಳ್ಳವನಾಗಿ ದೃಢವಾಗಿ ಧರಿಸಲ್ಪಟ್ಟ ಲಿಂ
ಉಳ್ಳವನಾಗಿ ಏಳಬೇಕು.

ಹಾರೀತಃ॥ ಆಹಾರಂತುರಹಃಕುರ್ಯಾ ನ್ನಿಹಾರಂಚೈವಸರ್ವದಾ
ಗುಪ್ತಾಭ್ಯಾಂಲಕ್ಷ್ಮೀಯುಕ್ತಸ್ಯ ಪ್ರಕಾಶೇಹೀಯತೇಶ್ರಿಯಃ ॥ ೧೯ ॥

ತಾ॥ ಆಹಾರ ವಿಹಾರಗಳಲ್ಲಿ ರಹಸ್ಯವಾಗಿದ್ದರೇ ಐಶ್ವರ್ಯವು ವೃದ್ಧಿಯಾಗುವದು. ಅನ್ಯಥಾ ನಾಶವಾಗುವದು.

॥ ಅಥಶೌಚವಿಧಿಃ ॥

ಭಾರದ್ವಾಜಃ ॥ ಉತ್ಥಾಯ ವಾಮಹಸ್ತೇನ । ಗೃಹೀತ್ವೋರ್ಧ್ವಗಮೇಹನಂ ॥ ಶೌಚದೇಶಮಥಾಭ್ಯೇತ್ಯ ಕುರ್ಯಾತ್ ಶೌಚಂ ಮೃದಾಂಬುಭಿಃ ॥೧೯॥

ತಾ॥ ಮಲಮೂತ್ರತ್ಯಾಗಾನಂತರ ಯಡಗೈಯಿಂದ ಊರ್ಧ್ವಾಭಿಮುಖವಾಗಿ ಶಿಶ್ನವನ್ನು ಹಿಡಿದು ಶೌಚದೇಶವನ್ನು ಹೊಂದಿ ಮೃಜ್ಜಲಗಳಿಂದ ಶೌಚವನ್ನ ಮಾಡತಕ್ಕದ್ದು.

ಯಾಜ್ಞವಲ್ಕ್ಯಃ ॥ ತೀರ್ಥೇಶೌಚಂನಕುರ್ವೀತ ಕುರ್ವೀತೋದ್ಧೃತ್ಯವಾರಿಣಾ ॥ ಮೃತ್ತಿಕಾವಾರಿದೌಚಾನ್ಯ ವಿಜ್ಞೇಯೌ ಪರಿಚಾರಕೌ ॥ ೨॥

ತಾ॥ ನದೀತಟಾಕಾದಿ ತೀರ್ಥೋದಕಗಳಲ್ಲಿ ಶೌಚವನ್ನು ಮಾಡಬಾರದು. ನೀರನ್ನು ಪಾತ್ರದಲ್ಲಿ ತೆಗದುಕೊಂಡು ಹೋಗಿ ಶೌಚ ಮಾಡಬೇಕು.

ವಿಶ್ವಾಮಿತ್ರಃ ॥ ಯದಾಕಥಂಚಿದಪ್ಯುದ್ಧರಣಂ । ನಸಂಭವತಿತಮಾವಿಶೇಷಮೋಹವಿವಸ್ವ್ಯ ॥ ಅರತ್ನಿಮಾತ್ರಂಜಲಂತ್ಯಕ್ತ್ವಾ । ಕುರ್ಯಾತ್ ಶೌಚಂಮನುದ್ಧೃತೆ ॥ ಪಶ್ಚಾತ್ತಚ್ಛೋಧಯೇತ್ತೀರ್ಥ । ಮನ್ಯಥಾನಶುಚಿರ್ಭವೇತ್ ॥ ೩॥ ತೀರ್ಥಂ । ಶೌಚಸ್ಥಲಂ.

ತಾ॥ ನೀರನ್ನು ಬೇರೆ ಪಾತ್ರದಿಂದ ತೆಗದುಕೊಂಡುಹೋಗಿ ಶೌಚ ಮಾಡಲು ಅನುಕೂಲವಿಲ್ಲದಪಕ್ಷ ತಟಾಕಾದಿ ನೀರಿಗೆ ಒಂದು ಮೊಳ ಹಿಂದಕ್ಕಾಗಿ ನಿಂತು ಶೌಚಮಾಡಿ ಅನಂತರ ಆ ಸ್ಥಳವನ್ನ ನೀರಿನಿಂದ ಶುದ್ಧಿ ಮಾಡಬೇಕು, ಅನ್ಯಥಾ ಶುದ್ಧಿಯಾಗುವದಿಲ್ಲ.

ಮನುಃ ॥ ಆಹರೇನ್ಮೃತ್ತಿಕಾಂವಿಪ್ರಃ। ಕೂಲಾತ್ ಸಸಿಕತಾಂತಥಾ ॥೪॥

ತಾ॥ ತೀರಪ್ರದೇಶದಿಂದ ಮಳಲು ಮಿಶ್ರವಾದ ಮಣ್ಣನ್ನು ತೆಗೆದುಕೊಳ್ಳುವದು ಯುಕ್ತವು.

ಮರೀಚಿಃ ॥ ತತ್ರಸಿಕೇಷುಮಾನಮುದ್ದಿಷ್ಟಃ । ವಿಪ್ರೇಣುಕ್ತಾ ಶುದ್ಧ್ಯಭಾವೇ । ರಕ್ತಾಕ್ಷತ್ರವಿಧೀಯತೆ ॥ಪರಿದ್ರವರ್ಣಾವೈಶ್ಯೇತು ಶೂದ್ರೇಕೃಷ್ಣಾಂವಿನಿರ್ದಿಶೇತ್ ॥ ೫ ॥

ತಾ॥ ಬ್ರಾಹ್ಮಣರಿಗೆ ಶುಭ್ರವಾದ ಮೃತ್ತು, ಕ್ಷತ್ರಿಯರಿಗೆ ಕೆಂಪುವ
ಣ್ಣು, ವೈಶ್ಯರಿಗೆ ಹಳದಿ, ಶೂದ್ರರಿಗೆ ಕಪ್ಪುಮಣ್ಣು ಈ ಪ್ರಕಾರ ತೆಗ
ಕೊಳ್ಳಬೇಕು.

ಮನುಃ॥ ಉಕ್ತವಿಶೇಷಾಸಂಭವೇಯಾ ಕಾಚಿತ್ಗ್ರಾಹ್ಯೇತ್ಯಾಹಮನುಃ
ಯಸ್ಮಿನ್ದೇಶೇತುಯತ್ತೋಯಂ । ಯಾಚಯತ್ರೈವಮೃತ್ತಿಕಾ ॥ ಸೈವ
ತ್ರಪ್ರಶಸ್ತಾಸ್ಯಾ । ದ್ಯಥಾಶೌಚಂವಿಧೀಯತೇ ॥ ೬ ॥

ತಾ॥ ಮೇಲೆ ಹೇಳಲ್ಪಟ್ಟ ಮಣ್ಣುಗಳು ದೊರಿಯದಿದ್ದರೆ ಯಾವ ದೇ
ದಲ್ಲಿ ಯಾವ ಮಣ್ಣು ನೀರು ದೊರಿಯುವದೋ ಅದೇ ಪ್ರಶಸ್ತವು.

ವಿಷ್ಣುಪುರಾಣೇ॥ ವರ್ಜ್ಯಾಮೃದ್ವಿಶೇಷಾಃ । ವಲ್ಮೀಕಾನ್ಮೂಷಿಕೋ
ತ್ಖಾತಾ ಮೃದಮಂತರ್ಜಲಾತಥಾ । ಶೌಚಾವಶಿಷ್ಟಾಂಗೇಹಾಚ್ಚ ನಾದದ್ಯಾ
ಲ್ಲೇಪಸಂಭವಾಂ ॥ ಅಂತಃಪ್ರಾಣ್ಯವಪನ್ನಾಂಚ ಲೋಹೋತ್ಖಾತಾ
ಸಕರ್ದಮಾಂ ॥ ೭ ॥

ತಾ॥ ಹುತ್ತದಮಣ್ಣು, ಹೆಗ್ಗಣ ಬಾಚಿದ ಮಣ್ಣು, ನೀರೊಳಗಣ
ಮಣ್ಣು, ಇತರರ ಶೌಚಾವಶಿಷ್ಟವಾದ ಮಣ್ಣು, ಲೇಪವು ಹೋಗದಿರು
ಮಣ್ಣು, ಜೀವಜಂತುಗಳಿಂದ ಕೂಡಿದ ಮಣ್ಣು, ಲೋಹದಿಂದ ತೆಗದಿರು
ಮಣ್ಣು, ಕೆಸರುಮಣ್ಣು, ಮನೆಯಿಂದ ತೆಗೆದುಕೊಂಡುಹೋದ ಮಣ್ಣು
ಸಹಾ ಶೌಚಾರ್ಹವಲ್ಲ.

ಯಮಃ॥ಅಂತರ್ಜಲಮೃತ್ತಿಕಾಪ್ರತಿಷೇಧಃ ವಾಪೀಕೂಪಾದಿ ವ್ಯತಿ
ಕ್ತವಿಷಯ ಇತ್ಯಾಹಯಮಃ ॥

ವಾಪೀಕೂಪತಟಾಕೇಷು ನಾಹರೇದ್ಬಾಹ್ಯತೋಮೃದಂ । ಆಹರೇಜ್ಜ
ಮಧ್ಯಾತ್ತು ಪರತೋಮಣಿ ಬಂಧನಾತ್ ॥ ದೇವಲೋಪಿಕಾಶ್ಚಿನ್ನಿಷಿಧಾ
ಮೃದೋದರ್ಶಯತಿ ॥ ೮ ॥

ತಾ॥ ವಾಪೀಕೂಪಾದಿಗಳಲ್ಲಿ ಶೌಚಮಾಡುವ ಸಂದರ್ಭದಲ್ಲಿ ಹೊರಗಣ
ಮಣ್ಣು ಕೂಡದು. ನೀರಿನಲ್ಲಿ ಒಂದು ಅಡಿ ಕೆಳಭಾಗದಲ್ಲಿ ಮಣ್ಣನ್ನು ತೆ
ದುಕೊಳ್ಳಬೇಕು.

ದೇವಲಃ॥ ಅಂಗಾರತುಷಕೀಟಾಸ್ಥಿ । ಶರ್ಕರಾವಾಲುಕಾನ್ವಿತಾಂ ।
ವಲ್ಮೀಕೋಸರಿತೋಯಾಂತಃ । ಕುಡ್ಯಾಥಾತ್ಮಕಾನಜಾಂ ॥

ಆಹೃತಾಮನ್ಯಶೌಚಾರ್ಥೇ । ಮಾದದೀತನಮೃತ್ತಿಕಾಂ ॥

ತಾ॥ ಇದ್ದಲು, ಉಮ್ಮಿ, ಕ್ರಿಮಿ, ಅಸ್ಥಿ, ಸುರುಜುಕಲ್ಲು, ಮರಳು, ಇವುಗಳಿಂದ ಕೂಡಿದ ಮಣ್ಣು, ಹುತ್ತದ ಮಣ್ಣು, ಗೋಡೆ ಇಡದಮಣ್ಣು, ಶ್ಮಶಾನದಮಣ್ಣು, ಗ್ರಾಮಕ್ಕೂ ಹೊರಕ್ಕೂ ಅಂತರಾಳವಾದ ಮಣ್ಣು, ಧೂಳು, ಇತರರು ಶೌಚಕ್ಕಾಗಿ ಇಟ್ಟಿರುವ ಮಣ್ಣು, ಸಹಾ ಶೌಚಕ್ಕೆ ಕೂಡದು.

ಹಸ್ತನಿಯಮಮಾಹದೇವಲಃ ॥ ಧರ್ಮವಿದ್ದಕ್ಷಿಣಂಹಸ್ತಂ । ಅಧಶ್ಶೌಚೇನಯೋಜಯೇತ್ ॥ ತಥಾಚವಾಮಹಸ್ತೇನ ನಾಭೇರೂರ್ಧ್ವಂನಶೋಧಯೇತ್ ॥ ೧೦ ॥

ತಾ॥ ಬಲಗೈಯಿಂದ ನಾಭಿಯ ಕೆಳಭಾಗವನ್ನೂ ಯಡಗೈಯಿಂದ ನಾಭಿಯ ಮೇಲ್ಭಾಗವನ್ನೂ ಶೋಧಿಸಬಾರದು.

ಬ್ರಹ್ಮಾಂಡಪುರಾಣೇ ॥ ಉಧೃತೋದಕಮಾದಾಯ ಮೃತ್ತಿಕಾಂಚೈವವಾಗ್ಯತಃ ॥ ಉದಙ್ಮುಖೋದಿವಾಕುರ್ಯಾ ದ್ರಾತ್ರೌಚೇದ್ದಕ್ಷಿಣಾಮುಖಃ ॥ ೧೧ ॥

ತಾ॥ ಕೈನೀರಿನಿಂದ ಶೌಚಮಾಡುವ ಸಂದರ್ಭದಲ್ಲಿ ಹಗಲು ಉತ್ತರಾಭಿಮುಖನಾಗಿಯೂ ರಾತ್ರಿಕಾಲದಲ್ಲಿ ದಕ್ಷಿಣಾಭಿಮುಖನಾಗಿಯೂ ಶೌಚ ಮಾಡತಕ್ಕದ್ದು.

ಭಗವಚ್ಛಾಸ್ತ್ರೇತು॥ ಊರುದ್ವಯಾಂತರಸ್ಥೇನ ಸವ್ಯೇನಕ್ಷಾಳಯೇದ್ಗುದಂ । ಬಹಿರ್ಜಾನುಸ್ಥಿತೇನಾಂಭೋ ದೇಯಂದಕ್ಷಿಣಪಾಣಿನಾ ॥ ೧೨ ॥

ತಾ॥ ಯೆರಡು ತೊಡೆಗಳಿಗೆ ಮಧ್ಯದಲ್ಲಿ ಯಡಗೈಯನ್ನು ಇಟ್ಟು ಟಿಲಮಂಡಿಗೆ ಹೊರಗೆ ಇರುವ ಬಲಗೈಯಿಂದ ನೀರನ್ನು ಕೊಟ್ಟು ಶೌಚ ಮಾಡತಕ್ಕದ್ದು. ಅಂದರೆ ಯಡಗೈಯಿಂದ ಶೌಚವನ್ನು ಮಾಡತಕ್ಕದ್ದು.

ಸಂವರ್ತಃ । ಬ್ರಹ್ಮಚಾರೀಯತಿಶ್ಚೈವ ನಾಂತರ್ಲಿಂಗಂವಿಶೋಧಯೇತ್ ॥ ಅಂತರ್ಲಿಂಗಸ್ಯಶೌಚೇನ ಪಯೋಶ್ಚಾಂದ್ರಾಯಣಂಸ್ಮೃತಂ ॥ ೧೩ ॥

ತಾ॥ ಬ್ರಹ್ಮಚಾರಿಯೂ ಯತಿಯೂ ಲಿಂಗದ ಒಳಭಾಗವನ್ನು ಶೋಧಿಸ

ಬಾರದು. ಹಾಗೆ ಶೋಧಿಸಿದರೆ ಚಾಂದ್ರಾಯಣ ವ್ರತವನ್ನ ಮಾಡಬೇಕೆಂದು ಸ್ಮೃತಿ ಹೇಳುವದು.

ಶಾತಾತಪಃ॥ ಏಕಾಲಿಂಗೇಕರೇಸವ್ಯೇ ತಿಸ್ರೋದ್ವೇಹಸ್ತ
ಯೋಃದ್ವಯೋಃ ॥ ಮೂತ್ರಶೌಚಂಸಮಾಖ್ಯಾತಂ ಪುರೀ
ಷೇದ್ವಿಗುಣಂಭವೇತ್ ॥ ೧೪ ॥

ತಾ॥ ಮೂತ್ರಶೌಚದಲ್ಲಿ ಲಿಂಗಕ್ಕೆ ಒಂದು ಮೃತ್ತನ್ನೂ ಯಡಗೈಯ್ಯಿಗೆ ಮೂರು ಮೃತ್ತನ್ನೂ ಎರಡು ಕೈಗಳನ್ನು ಕೂಡಿಸಿ ಯರಡು ಮೃತ್ತನ್ನು ಹಾಕಬೇಕು. ಮೂತ್ರಶೌಚಕ್ಕೆ ದ್ವಿಗುಣವಾಗಿ ಮಲಶೌಚವು ಮಾಡ ತಕ್ಕದ್ದು.

ಮನುಃ॥ ಏಕಾಲಿಂಗೇಗುದೇತಿಸ್ರಃ । ತಥೈಕತ್ರಕರೇದಶ ॥
ಉಭಯೋಸ್ಸಪ್ತದಾತವ್ಯಾ ಮೃದಃಶುದ್ಧಿಮಭೀಪ್ಸತಾ ॥೧೫॥

ತಾ॥ ಲಿಂಗದಲ್ಲಿ ಒಂದು, ಗುದದಲ್ಲಿ ಮೂರು, ಯಡಗೈಯ್ಯಲ್ಲಿ ಹತ್ತು, ಯೆರಡು ಕೈಗಳನ್ನು ಕೂಡಿಸಿ ಯೇಳು, ಹೀಗೆ ಮೃತ್ತಿಕಾ ಶೌಚವನ್ನು ಮಾಡಿದರೆ ಶುಧ್ಧನಾಗುವನು.

ಬೋಧಯನೋಪಿ॥ ಪಂಚಾಪಾನೇವ್ಯದೋಯೋಜ್ಯಾ ವಾಮ
ಪಾದೇತಥಾಕರೇ ॥ ತಿಸ್ರಃತಿಸ್ರಃಕ್ರಮಾದೋಜ್ಯಾಃ ಸಮ್ಯ
ಕ್ಶೌಚಂಚಿಕೀರ್ಷತಾ ॥ ೧೬ ॥

ತಾ॥ ಗುದದಲ್ಲಿ ಐದು, ಯಡಗೈ ಯಡಗಾಲುಗಳಲ್ಲಿ ಮೂರು ಮೃತ್ತುಗಳನ್ನು ಹಾಕಬೇಕು.

ಚತುರ್ವಿಂಶತಿಮತೇ॥ ಯೇವಂದ್ವಾದಶಕೃತ್ವಸ್ತು । ಗುದಶೌಚಂ
ಸಮಾಚರೇತ್ ॥ ದಶಕೃತ್ವೋವಾಮಹಸ್ತಂ । ಸಪ್ತಕೃತ್ವಃ
ಕರಾವುಭೌ ॥ ಸಂಯೋಜ್ಯಚೈವಪ್ರಕ್ಷಾಳ್ಯ । ಸಕೃತ್ರಜ್ಞೌ
ಚಂಸಮಾಚರೇತ್ ॥ ಪಂಚಕೃತ್ವಾಃಕತಾಪ್ರಕ್ಷಾಳ್ಯ । ಮೃದಾಮ
ಲಕಮಾತ್ರಯಾ ॥ ತ್ರಿಃಕೃತ್ವಾಲಿಂಗಶೌಚಂಚ । ಹಸ್ತೌಪ್ರಕ್ಷಾ
ಳ್ಯಪದದ್ವಯಂ ॥ ಸಂಯೋಜ್ಯತ್ರಿಃಮೃದಾಪ್ರಕ್ಷಾಳ್ಯ ಪ್ರಕ್ಷಾಳ
ಯೇಚ್ಛೌಚಭೂತಲಂ ॥ ೧೭ ॥

ತಾ॥ ನೆಲ್ಲಿಕಾಯಿನಷ್ಟು ಪ್ರಮಾಣವಾದ ಮಣ್ಣಿನಿಂದ ಗುದಕ್ಕೆ ಹನ್ನೆ

ರಷ್ಟು, ಯೆಡಗೈಗೆ ಏಳು, ಯೆರಡು ಕೈಗಳನ್ನೂ ಜೋಡಿಸಿ ಏಳು, ಮ ಣ್ಣುಗಳನ್ನು ಹಾಕಿ ಸಕೃದಾವೃತ್ತಿ ಪುನಃ ಶೌಚವಮಾಡಿ ಐದುಬಾರಿಸ್ರಾವ ಣವುಳ್ಳ ಮಣ್ಣಿನಿಂದ ಕೈಯ್ಯೆಗಳನ್ನಿ ತೊಳದು ಮೂರು ಮಣ್ಣಿನಿಂದ ಲಿಂ ಗಶೌಚವನ್ನು ಮಾಡಿ ಕೈಕಾಲುಗಳನ್ನು ತೊಳದುಕೊಳ್ಳಬೇಕು. ಇದ ನ್ನೇ ಈಗ ಸಂಪ್ರದಾಯದಲ್ಲಿ ಇಟ್ಟುಕೊಂಡಿರುತ್ತಾರೆಂತ ತಿಳಿಯಬೇಕು.

ಮನುಃ ॥ ಏತಚ್ಛೌಚಂಗೃಹಸ್ಥಾನಾಂ ದ್ವಿಗುಣಂಬ್ರಹ್ಮ ಚಾರಿಣಾಂ । ತ್ರಿಗುಣಂತುವನಸ್ಥಾನಾಂ ಯತೀನಾಂತುಚತು ರ್ಗುಣಂ ॥ ೧೮ ॥

ತಾ॥ ಈ ಗೃಹಸ್ಥರ ಶೌಚಕ್ಕಿಂತ ಮೇಲೆ ಹೇಳಲ್ಪಟ್ಟ ಬ್ರಹ್ಮಚಾರಿಗಳು ದ್ವಿಗುಣವಾಗಿಯೂ ವಾನಪ್ರಸ್ಥರು ತ್ರಿಗುಣವಾಗಿಯೂ ಸನ್ಯಾಸಿಗಳು ಚತುರ್ಗುಣವಾಗಿಯೂ ಆಚರಿಸತಕ್ಕದ್ದು.

ಆದಿತ್ಯಪುರಾಣೇ ॥ ಸ್ತ್ರೀಶೂದ್ರಯೋರರ್ಧಮಾನಂ ಪ್ರೋ ಕ್ತಂಶೌಚಂಮನೀಷಿಭಿಃ ॥ ದಿವಾಶೌಚಸ್ಯನಿತ್ಯರ್ಧಂ ಪಥಿಃ ಪಾದಂವಿಧೀಯತೇ ॥ ಆರ್ತಃಕುರ್ಯಾದ್ಯಥಾಶಕ್ತಿ ಶಕ್ತಃಕು ರ್ಯಾದ್ಯಥಾವಿಧಿ ॥ ೧೯ ॥

ತಾ॥ ಗೃಹಸ್ಥರಿಗೆ ಹೇಳಲ್ಪಟ್ಟ ಶೌಚದಲ್ಲಿ ಸ್ತ್ರೀಶೂದ್ರರು ಅರ್ಧಶೌಚ ಮಾಡತಕ್ಕದ್ದು. ರಾತ್ರಿಯಲ್ಲಿ ಸರ್ವರೂ ಉಕ್ತಶೌಚದಲ್ಲಿ ಅರ್ಧಶೌಚಮಾ ಡತಕ್ಕದ್ದು. ದಾರಿಯಲ್ಲಿ ನಾಲ್ಕನೇ ಒಂದುಭಾಗ ರೋಗಿಯಾದವನು ಯ ಥಾಶಕ್ತಿ, ಶಕ್ತನಾದವನು ಯಥಾವಿಧಿಯಾಗಿ ಮಾಡತಕ್ಕದ್ದು.

ವ್ಯಾಸಃ॥ ಪಿಟ್ಯಾಚಂಪ್ರಥಮಂಕುರ್ಯಾ ನ್ಮೂತ್ರಶೌಚಮತಃಪ ರಂ ॥ ಪಾದಶೌಚಂತತಃಕುರ್ಯಾ ತ್ಕರಶೌಚಮತಃಪರಂ ॥ ೨೦॥

ತಾ॥ ಪ್ರಥಮತಃ ಗುದಶೌಚವನ್ನು ನಂತರ ಮೂತ್ರಶೌಚವನ್ನು ಆ ಬಳಿಕ ಪಾದಶೌಚವನ್ನು ಆ ಮೇಲೆ ಹಸ್ತಶೌಚವನ್ನು ಮಾಡತಕ್ಕದ್ದು.

ಭಾರ್ಗವಃ॥ ಯದಾವಾಲುಕಾಭಿಃಶೌಚಂ ಕುರ್ಯಾತ್ತದಾದ್ವಿಗು ಣಂಕುರ್ಯಾದಿತಿ ॥ ೨೧ ॥

ತಾ॥ ಮಳಲಿನಿಂದ ಶೌಚ ಮಾಡತಕ್ಕ ಸಂಧರ್ಭದಲ್ಲಿ ಮೇಲೆ ಹೇಳಲ್ಪ ಟ್ಟದ್ದಕ್ಕೆ ದ್ವಿಗುಣವಾಗಿ ಆಚರಿಸಬೇಕು.

ಶಂಖಃ। ಆತ್ಮಮೂತ್ರಸ್ಪರ್ಶೇತ್ರಿಸ್ರೋ ಮೃದಃಪಾದಹಸ್ತಾದಿ
ಗ್ರಾಮಬಾಹ್ಯಾಂತರಾಳಸ್ಥಾಂ। ವಾಲುಕಾಂಪಾಂಸುರೂಪಿಣೀ।
ಷುಸಪ್ತಮೇಧ್ಯಸ್ಪರ್ಶೇ ಮೃದಃಪಂಚದಶಪೇವಂ ಪರಸ್ಯ
ಶೋಣಿತವಿಣ್ಮೂತ್ರಸ್ಪರ್ಶೇಚೇತಿ ॥ ೨೦ ॥

ತಾ॥ ಸ್ವಮೂತ್ರಸ್ಪರ್ಶವಾದರೆಪಾದ ಹಸ್ತಾದಿಗಳಿಗೆ ಮೂರು, ಮಲ ಸ್ಪರ್ಶವಾದರೆ ಹದಿನೈದು, ಇತರರ ವಿಣ್ಮೂತ್ರ ಸ್ಪರ್ಶವಾದರೂ ಸಹಾ ಹದಿನೈದು ಮೃತ್ತನ್ನ ಹಾಕಬೇಕು.

ದಕ್ಷಃ॥ ಶೌಚೇಯತ್ನಸ್ಸದಾಕಾರ್ಯಃ ತನ್ಮೂಲೋಹಿದ್ವಿಜಸ್ಯ ತಃ। ಶೌಚಾಚಾರವಿಹೀನಸ್ಯ ಸಮಸ್ತಾಃನಿಷ್ಫಲಾಃಕ್ರಿಯಾಃ॥ ಯಸ್ಯಶೌಚೇಪಿಶೈಥಿಲ್ಯಂ ವೃತ್ತಂತಸ್ಯಪರೀಕ್ಷಿತಂ॥
ತಸ್ಮಾತ್ಸರ್ವಪ್ರಯತ್ನೇನ ದ್ವಿಜಃಶೌಚಂಸಮಾಚರೇತ್ ॥ ೨೧ ॥

ತಾ॥ ಬ್ರಾಹ್ಮಣನಿಗೆ ಶೌಚವು ಮುಖ್ಯವಾದದ್ದು. ಸರ್ವಪ್ರಯತ್ನದಿಂದಲು ಅವಶ್ಯಕವಾಗಿಮಾಡತಕ್ಕದ್ದು. ಶೌಚಾಚಾರಹೀನನಾದವನಿಂದ ಮಾಡಲ್ಪಡುವ ವಿಶಿಷ್ಟ ಕರ್ಮಗಳು ನಿಷ್ಫಲವಾಗುವದು.

॥ ಅಥ ಗಂಡೂಷವಿಧಿಃ ॥

॥ ೧ ॥ ಆಪಸ್ತಂಬಃ ॥

ಏವಂಶೌಚವಿಧಿಂಕೃತ್ವಾ । ಪಶ್ಚಾದ್ಗಂಡೂಷಮಾಚರೇತ್ ॥
ಮೂತ್ರೇರೇತಸಿವಿಟ್ಸರ್ಗೇ । ದಂತಧಾವನಕರ್ಮಣಿ ॥ ಭಕ್ಷ್ಯಾಣಾಂಭಕ್ಷಣೇಚೈವ । ಕ್ರಮಾದ್ಗಂಡೂಷಮಾಚರೇತ್
ಚತುರಷ್ಟತ್ರಿಷಡ್ಭಿಃಷಟ್ । ಗಂಡೂಷೈಃಶುದ್ಧಿರೀರಿತಾ॥
ಮುಖಶುದ್ಧಿಂಪ್ರಕುರ್ವೀತ ! ಹ್ಯನ್ಯಥಾದೋಷಮಾಪ್ನುಯಾತ್ । ಪುರಸ್ತಾದ್ದೇವತಾಸ್ಸರ್ವಾಃ । ದಕ್ಷಿಣೇಪಿತರಸ್ತಥಾ ॥ ಪಶ್ಚಿಮೇಮುನಿಗಂಧರ್ವಾಃ । ವಾಮೇಗಂಡೂಷಮಾ

ವೆಂಬ ನರಕವನ್ನು ಹೊಂದುವನು.

೬ ಬೋಧಾಯನಃ ॥

ಆಸೀನ ಏವ ಗಂಡೂಷಾನ್ ವಿಸೃಜೇತ್.

ವ್ಯಾ ॥ ಏವಕಾರಾತ್ ತಿಷ್ಠತೋಗಂಡೂಷಕರಣನಿಷೇಧಃ ॥

ಅರ್ಥ ॥ ಕುಳಿತುಕೊಂಡವನಾಗಿಯೇ ಗಂಡೂಷಗಳನ್ನು ಬಿಡಬೇಕು ಇಲ್ಲಿ ಏವಕಾರದಿಂದ ನಿಂತುಕೊಂಡು ಗಂಡೂಷ ಮಾಡಕೂಡದೆಂದು ನಿಷೇಧ ಮಾಡಲ್ಪಟ್ಟಿದೆ ಯೆಂದು ವ್ಯಾಖ್ಯಾನ ಮಾಡಿರುತ್ತಾರೆ.

೭ ॥ ಆಹ್ನಿಕೇ ॥ ಮೂತ್ರೋತ್ಸರ್ಗೇಷಡ್ಗಂಡೂಷಾನ್ । ಕೃತ್ವಾ। ಇತಿ

ಅರ್ಥ ॥ ಮೂತ್ರೋತ್ಸರ್ಗದಲ್ಲಿ ಆರು ಗಂಡೂಷ ಮಾಡತಕ್ಕದ್ದು ಯೆಂದು ಹೇಳಿ ಇರುತ್ತೆ ಶಿಷ್ಟಾಚಾರವೂ ಈ ಪ್ರಕಾರದಿಂದಲೇ ಯೆಂದು ತಿಳಿಯತಕ್ಕದ್ದು ಭೋಜನೋತ್ತರದಲ್ಲಿ ೧೬ ಗಂಡೂಷವೇ ಶಿಷ್ಟಾಚಾರ ಇತರ ವಿಚಾರಗಳು ಯಥಾಸೌಕರ್ಯನಾಗಿ ಮಾಡಲ್ಪಡುವವು.

॥ಅಥ ಆಚಮನ ವಿಧಿಃ ॥

೧ ॥ ವೃದ್ಧಪರಾಶರಃ ॥

ಕೃತ್ವಾಥಶೌಚಂಪ್ರಕ್ಷಾಳ್ಯ । ಪಾದೌಹಸ್ತೌಚ ಮೃಜ್ಜ
ಲೈಃ ॥ ಪ್ರಬದ್ಧಶಿಖಕಚ್ಛಸ್ತು । ದ್ವಿಜಆಚಾಮನಮಾಚರೇತ್

ಅರ್ಥ ॥ ಪೂರ್ವೋಕ್ತಪ್ರಕಾರ ಶೌಚಮಾಡಿ ಮೃಜ್ಜಲಗಳಿಂದ ಕೈಕಾಲುಗಳನ್ನು ತೊಳೆದುಕೊಂಡು ಕಟ್ಟಲ್ಪಟ್ಟ ಕಚ್ಚೆಯುಳ್ಳವರಾಗಿ ಕೇಶವನ್ನು ಚನ್ನಾಗಿ ಕಟ್ಟಿಕೊಂಡು [ ಗಂಡೂಷಾನಂತರ ] ಬ್ರಾಹ್ಮಣಾದಿಗಳು ಆಚಮನವನ್ನ ಮಾಡುವದು. ಇಲ್ಲಿ ದ್ವಿಜಃ ಯೆಂಥು ಇದ್ದಾಗ್ಯೂ ಸರ್ವಸಾಧಾರಣವಾದ ಕಾರಣ ಬ್ರಾಹ್ಮಣಾದಿಗಳು ಯೆಂದು ಬರಬಿರುತ್ತೆ.

॥ ಯಾಜ್ಞವಲ್ಕ್ಯಃ ॥

ಅಂತಃಜಾನುಶ್ಶುಚೌದೇಶೇ । ಉಪವಿಶ್ಯಉದಙ್ಮುಖಃ ।
ಪ್ರಾಗ್ವಾಬ್ರಾಹ್ಮೇಣ ತೀರ್ಥೇನ । ದ್ವಿಜೋನಿತ್ಯಮುಪಸ್ಪೃ
ಶೇತ್ ॥

ಅರ್ಥ ॥ ಬ್ರಾಹ್ಮಣನು ಶುದ್ಧವಾದ ಪ್ರದೇಶದಲ್ಲಿ ಪೂರ್ವಾಭಿಮುಖನಾಗಿ ಅಥವಾ ಉತ್ತರಾಭಿಮುಖನಾಗಿ ಕುಳಿತುಕೊಂಡು ಮಂಡಿಗಳ ಮ

ಧ್ಯದಲ್ಲಿ ಕೈಗಳುಳ್ಳವನಾಗಿ ಬ್ರಾಹ್ಮತೀರ್ಥವಲ್ಲಿ ಸರ್ವದಾ ಆಚಮನವಂ ಮಾಡತಕ್ಕದ್ದು.

೩ ‖ ಭರದ್ವಾಜಃ ‖

ಜಂಘಾಂತಂಜಾನುಪರ್ಯಂತಂ । ಅಪಿವಾಚರಣದ್ವಯಂ ‖
ಕೂರ್ಪರಾಂತಂಕರೌಸಮ್ಯಕ್ ಕ್ಷಾಳಯೇ[illegible]
ಧಃ ‖ ಉಪವಿಶ್ಯಶುಚೌದೇಶೇ । ಪ್ರಾಗ್ಮು[illegible]
ಧೃತ್ ‖ ಸಪವಿತ್ರೇಣಹಸ್ತೇನ । ಕುರ್ಯಾದ[illegible]

ಅರ್ಥ ‖ ಮುಂಡಿಯು ಪರ್ಯಂತರ ಕಾಲುಗಳನ್ನು ಹಾಗೆಯೇ ಕೈಗಳನ್ನು ಅರ್ಧಮೊಳವರ್ಯಂತರವಾಗಿ ತೊಳೆದುಕೊಂಡು ಯಜ್ಞೋಪವೀತಧಾರಿಯಾಗಿ ಶುದ್ಧವಾದ ಪ್ರದೇಶದಲ್ಲಿ ಕುಳಿತು ಪವಿತ್ರಧಾರಿಯಾಗಿ ಪೂರ್ವಾಭಿಮುಖನಾಗಿ ಆಚಮನವನ್ನು ಮಾಡತಕ್ಕದ್ದು.

೪ ‖ ಕರ್ಮಾಂಗವ್ಯತಿರಿಕ್ತ ಆಚಮನವಿಷಯೇ ಭರದ್ವಾಜಃ ‖

ಸಗ್ರಂಥಿಕುಶಹಸ್ತಸ್ತು । ಸಕೃದಾಚಿದುಪಸ್ಪೃಶೇತ್ ‖ ಸ
ಪವಿತ್ರಸ್ಸದರ್ಭೋವಾ । ಕರ್ಮಾಂಗಾಚಮನಂಚರೇತ್ ‖

ಅರ್ಥ ‖ ಪವಿತ್ರದಿಂದೊಡಗೂಡಿ ಯಾವಾಗಲು ಆಚಮನ ಮಾಡಬಾರದು ಕರ್ಮಾಂಗವಾದ ಆಚಮನವನ್ನು ಪವಿತ್ರಪಾಣಿಯಾಗಿ ಮಾಡಬೇಕು.

೫ ‖ ಕೇವಲಾಚಮನವಿಷಯೇ ಸ್ಮೃತ್ಯಂತರೇ ‖

ಗ್ರಂಥಿಯುಕ್ತಪವಿತ್ರೇಣ । ಕುರ್ಯಾದಾಚಮನಂಯದಿ ‖ ತತ್ಪ
ವಿತ್ರಂಪರಿತ್ಯಜ್ಯ । ಪುನರಾಚಮ್ಯಶುಧ್ಯತಿ ‖

ಕರ್ಮಾಂಗವಲ್ಲದ ಕೇವಲಾಚಮನ ವಿಷಯದಲ್ಲಿ ಸ್ಮೃತ್ಯಂತರದಲ್ಲಿ ಹೇಳುವದೇನಂದರೆ ಗ್ರಂಥಿಯುಕ್ತವಾದ ಪವಿತ್ರಧಾರಿಯಾಗಿ ಆಚಮನವನ್ನು ಮಾಡಿದ್ದಾದರೆ ಆ ಪವಿತ್ರವನ್ನು ಪರಿತ್ಯಾಗಮಾಡಿ ಪುನರಾಚಮನದಿಂದ ಶುದ್ಧನಾಗುವನು.

೬ ‖ ಯಾಜ್ಞವಲ್ಕ್ಯಃ ‖

ಕನಿಷ್ಠಾದೇಶಿನ್ಯಂಗುಷ್ಠ । ಮೂಲಾನ್ಯಗ್ರಂಕರಸ್ಯತು ‖
ಪ್ರಜಾಪತಿಪಿತೃಬ್ರಹ್ಮ । ದೇವತೀರ್ಥಾನ್ಯನುಕ್ರಮಾತ್ ।

ನಮಾಡತಕ್ಕದ್ದು. ರಾತ್ರಿಕಾಲದಲ್ಲಿ ಮಾತ್ರ ನೋಡದೆ ಪಾನಮಾಡಿದರೂ ಪರಿಶುಧ್ಯಕ್ಕೆ ಕಮ್ಮಿಇಲ್ಲಾ.

೯ ॥ ಯಾಜ್ಞವಲ್ಕ್ಯಃ ॥

ಹೃತ್ಕಂಠತಾಲುಗಾಭಿಸ್ತು । ಯಥಾಸಂಖ್ಯಂದ್ವಿಜಾತಯಃ ।
ಶುಧ್ಯೇರನ್ಸ್ತ್ರೀಚಶೂದ್ರಶ್ಚ । ಸಕೃತ್ಸ್ಪೃಷ್ಟಾಭಿರಂತತಃ ।

ಅರ್ಥ ॥ ಬ್ರಾಹ್ಮಣ ಕ್ಷತ್ರಿಯ ವೈಶ್ಯರುಗಳು. ಯಥಾಕ್ರಮವಾಗಿ ಹೃದಯ, ಕಂಠ, ಪ್ರದೇಶ, ದವಡೆ, ಇವುಗಳನ್ನು ಹೊಂದಲ್ಪಟ್ಟ ಆಚಮನೋದಕಗಳಿಂದ ಶುದ್ಧರಾಗುವರು.

ಸ್ತ್ರೀಶೂದ್ರರು ದವಡೆಯನ್ನು ಆಚಮನೋದಕವು ಸ್ಪರ್ಶಮಾಡಿದ ಮಾತ್ರದಿಂದಲೇ ಪರಿಶುದ್ಧರಾಗುವರು. ಅಂದರೆ ಬ್ರಾಹ್ಮಣನು ಆಚಮನೋದಕವು ಹೃದಯವನ್ನು ಪ್ರವೇಶಿಸಿದ ನಂತರವೇ ಶುದ್ಧನಾಗುವನು. ಕ್ಷತ್ರಿಯನು ಕಂಠವನ್ನು ಪ್ರವೇಶಿಸಿದ ನಂತರವೇ ಶುದ್ಧನಾಗುವನು. ವೈಶ್ಯನು ದವಡೆಯನ್ನು ಪ್ರವೇಶಿಸಿದ ನಂತರವೇ ಶುದ್ಧನಾಗುವನು. ಸ್ತ್ರೀಶೂದ್ರರು ತಾಲುಸ್ಪರ್ಶಮಾತ್ರದಿಂದಲೇ ಆಚಮನೋದಕದಿಂದ ಶುದ್ಧರಾಗುವರು.

ಮುಖ್ಯತಾತ್ಪರ್ಯವೇನೆಂದರೆ ಮುಂದೆ ಹೇಳಲ್ಪಡುವ ಮಂತ್ರಗಳಿಂದ ಆಚಮನಮಾಡುವ ಕಾಲದಲ್ಲಿ ಪ್ರಣವ ಪೂರ್ವಕ ಮಂತ್ರವನ್ನು ಹೇಳಿ ಜಲಪ್ರಾಶನವನ್ನು ಮಾಡಿ ಆ ಆಚಮನೋದಕವು ಹೃದಯವನ್ನು ಹೊಂದಿದಬಳಿಕ ಎರಡನೇ ಮಂತ್ರದಿಂದ ಆಚಮನೋದಕವನ್ನು ಪ್ರಾಶನಮಾಡಬೇಕು. ಈ ರೀತ್ಯಾ ಕ್ಷತ್ರಿಯ ವೈಶ್ಯಾದಿಗಳಿಗೂ ಗ್ರಹಿಸತಕ್ಕದ್ದು.

೧೦ ॥ ವ್ಯಾಸಃ ॥

ಗೋಕರ್ಣಾಕೃತಿಹಸ್ತೇನ ॥ ಮಾಷಮಗ್ನಜಲಂಪಿಬೇತ್ ।
ತನ್ನ್ಯೂನಮಧಿಕಂಪೀತ್ವಾ । ಸುರಾಪಾನಸಮಂಭವೇತ್ ॥

ತತ್ರೈವ ಗೋಕರ್ಣಮಾಹ ವ್ಯಾಸಃ ॥

ಸಂಹತಾಂಗುಳಿನಾತೋಯಂ । ಗೃಹೀತ್ವಾಪಾಣಿನಾದ್ವಿಜಃ ।
ಮುಕ್ತಾಂಗುಷ್ಠಕನಿಷ್ಠೇನ । ಶಿಷ್ಟೇನಾಚಮನಂಚರೇ
ತ್ । [illegible] ॥

ಅರ್ಥ || ಗೋವಿನ ಕಿವಿಯೋಪಾದಿಯಲ್ಲಿ ಕೈಯನ್ನು ಮಾಡಿಕೊಂಡು ಉದ್ದಿನಕಾಳು ಮುಳುಗುವ ಪ್ರಮಾಣ ಮಾತ್ರ ವುಳ್ಳ ಉದಕವನ್ನ ಆಚಮನದಲ್ಲಿ ಪಾನವಮಾಡಬೇಕು. ಅಲ್ಲದೇ ಅಧಿಕನ್ಯೂನವಾಗಿ ಪಾನವಮಾಡಿದ್ದಾದರೆ ಸುರಾಪಾನಕ್ಕೆ ಸಮಾನವಾಗುವದು.

ಮಾಷಮಗ್ನೋದಕ ಪ್ರಮಾಣೋಪಾಯವನ್ನೂ ಅವರೇ ಹೇಳುವರು

ಬಲಗೈನ ಐಯಿದು ಬೆರಳುಗಳನ್ನೂ ಕೂಡಿಸಿ ನೀರನ್ನು ತೆಗೆದುಕೊಂಡು ದೊಡ್ಡ ಬೆರಳು ಎಂದರೆ ಅಂಗುಷ್ಠವನ್ನು ಚಿಕ್ಕ ಬೆರಳನ್ನೂ ಸಹಾ ಬಿಟ್ಟದ್ದಾರೆ ಅನಂತರ ನಿಲ್ಲುವ ನೀರೇ ಮಾಷಮಗ್ನ ಜಲವೆಂಬುವದು ಅದರಿಂದ ಆಚಮನ ಮಾಡತಕ್ಕದ್ದು.

೧೧ || ಸಂವರ್ತಃ ||

ಶಿರಃಪ್ರಾವೃತ್ಯ ಕಂಠಂವಾ । ತಿಷ್ಠನ್ಮುಕ್ತಶಿಖೋಪಿವಾ ||
ಅಕೃತ್ವಾಪಾದಯೋಶ್ಶೌಚ । ಮಾಚಾಂತೋಪ್ಯಶುಚಿರ್ಭವೇತ್

ಅರ್ಥ || ತಲೆಯನ್ನು ಅಥವಾ ಕಂಠವನ್ನು ಆಚ್ಛಾದನಮಾಡಿಕೊಂಡು ನಿಂತುಕೊಂಡು ಕೇಶಗಳನ್ನ ಕಟ್ಟದೇಯು ಕಾಲುಗಳನ್ನು ತೊಳಯದೇಯು ಆಚಮನವಮಾಡಬಾರದು. ಹಾಗೆ ಮಾಡಿದರೂ ಉಪಯೋಗವಿಲ್ಲವು ಅಪರಿಶುದ್ಧನಾಗುವನು.

೧೨ || ಹಾರೀತಃ ||

ಆರ್ದ್ರವಾಸಾಜಲೇಕುರ್ಯಾತ್ । ತರ್ಪಣಾಚಮನೇಜಪಂ ।
ಶುಷ್ಕವಾಸಾಃ ಸ್ಥಲೇಕುರ್ಯಾತ್ । ತರ್ಪಣಾಚಮನೇಜಪಂ ||
ಜಾನ್ವೋರೂರ್ಧ್ವಮಥಃ ಚಾಪೋ । ಜ್ಜಲೇತಿಷ್ಠನ್ಶುಚಿರ್ಭವೇತ್ || ಅಥಸ್ನಾತಶ್ಶತಕೃತ್ವೋಪಿ । ಸಮಾಚಾಂತೋನ ಶುಧ್ಯತಿ ||

ಅರ್ಥ || ಆರ್ದ್ರವಾದ ವಸ್ತ್ರವನ್ನು ಧರಿಸಿರುವ ಕಾಲದಲ್ಲಿ ತರ್ಪಣಾಚಮನ ಜಪಾದಿಗಳನ್ನು ಜಲದಲ್ಲಿ ನಿಂತುಕೊಂಡು ಮಾಡತಕ್ಕದ್ದು. ಒಣಗಿದ ಧೌತವಸ್ತ್ರವನ್ನ ಧರಿಸಿರುವ ಕಾಲದಲ್ಲಿ ತರ್ಪಣಾಚಮನ ಜಪಾದಿಗಳನ್ನ ಸ್ಥಳದಲ್ಲಿ ಮಾಡತಕ್ಕದ್ದು. ನೀರಿನಲ್ಲಿ ನಿಂತು ಆಚಮನ ಮಾಡ

ತಕ್ಕ ಸಂದರ್ಭದಲ್ಲಿ ಮೊಂಡಿಯುದ್ದ ನೀರಿನಲ್ಲಿ ನಿಂತು ಮಾಡತಕ್ಕದ್ದು ಇದಕ್ಕಿಂತಲೂ ಆಳವಾದ ನೀರಿನಲ್ಲಿ ನಿಂತುಕೊಂಡು ಆಚಮನವನ್ನ ನೂರುಬಾರಿ ಮಾಡಿದರೂ ಶುದ್ಧನಾಗಲಾರನು.

೧೩ ॥ ಭರದ್ವಾಜಃ ॥

ಉದಕೇತೂದಕಸ್ಥಸ್ತು ಸ್ಥಲಸ್ಥಃಸ್ಥಲಕೇಶುಚಿಃ ॥ ಪಾದೌ
ಕೃತ್ವೋಭಯತ್ರಾಪಿ ಹ್ಯಾಚಮ್ಯೋಭಯತಃಶುಚಿಃ ॥

ಅರ್ಥ ॥ ಉದಕದಲ್ಲಿ ನಿಂತು ಆಚಮನವನ್ನು ಮಾಡಿದರೆ ಜಲದಲ್ಲಿ ಮಾತ್ರ ಶುದ್ಧನಾಗುವನು. ಸ್ಥಲದಲ್ಲಿ ಕುಳಿತುಕೊಂಡು ಆಚಮನಮಾಡಿದರೆ ಸ್ಥಲಮಾತ್ರದಲ್ಲಿ ಪರಿಶುದ್ಧನಾಗುವನು. ವೊಂದು ಪಾದವನ್ನು ನೀರಿನಲ್ಲಿಯೂ ವೊಂದು ಪಾದವನ್ನು ಸ್ಥಲದಲ್ಲಿಯೂ ಇಟ್ಟುಕೊಂಡು ಆಚಮನಮಾಡಿದರೆ ಉಭಯತಃ ಪರಿಶುದ್ಧನಾಗುವನು.

೧೪ ॥ ಪೈಠೀನಸಿಃ ॥

ವಾ ॥ ಅಂತರುದಕಮಾಚಾಂತೋಽಪ್ಯಂತರೇವಶುಧ್ಯತಿ ।
ಬಹಿರುದಕಮಾಚಾಂತೋಬಹಿರೇವಶುಧ್ಯತಿ । ತಸ್ಮಾದಂತ
ರೇಕಂಬಹಿರೇಕಂಚಪಾದಂಕೃತ್ವಾ ! ಆಚಾಮೇತ್ಸರ್ವತ್ರ
ಶುದ್ಧೋಭವತಿ ॥

ಅರ್ಥ ॥ ಉದಕದೊಳಗೆ ನಿಂತು ಆಚಮನಮಾಡಿದರೆ ಅಂತಃಶುದ್ಧನಾಗುವನು. ಉದಕಾದ್ಬಹಿಃ ಆಚಮನಮಾಡಿದರೆ ಬಹಿಃಶುದ್ಧನಾಗುವನು. ಅದುಕಾರಣ ಜಲದೊಳಗೆ ವೊಂದು ಪಾದವನ್ನು ಬಹಿರ್ಭಾಗದಲ್ಲಿ ವೊಂದು ಪಾದವನ್ನು ಇಟ್ಟುಕೊಂಡು ಆಚಮನ ಮಾಡಿದ್ದಾದರೆ ಸರ್ವತ್ರ ಶುದ್ಧನಾಗುವನು.

೧೫ ॥ ದಕ್ಷಃ ॥

ಸ್ನಾತ್ವಾಚಾಮೇದ್ಯದಾವಿಪ್ರಃ । ಪಾದೌಕೃತ್ವಾಜಲೇಸ್ಥಲೇ।
ಉಭಯೋರಪ್ಯಸೌಶುದ್ಧಃ । ತತಃಕರ್ಮಕ್ಷಮೋಭವೇತ್ ।

ಅರ್ಥ ॥ ಸ್ನಾನಾನಂತರ ಬ್ರಾಹ್ಮಣನು ಆಚಮನ ಮಾಡತಕ್ಕ ಸಂದರ್ಭದಲ್ಲಿ ಪೂರ್ವೋಕ್ತರೀತಿಯಿಂದ ಜಲಸ್ಥಲಗಳಲ್ಲಿ ಪಾದಗಳನ್ನು ಇಟ್ಟುಕೊಂಡು ಆಚಮನಮಾಡಿದರೆ ಉಭಯತಃ ಶುದ್ಧನಾಗಿ ಅನಂತರ ಕರ್ಮ

ನ್ನೆ ತೊಳೆದುಕೊಂಡು ಮೌನವನ್ನ ಆಶ್ರಯಿಸಿದವನಾಗಿ ಬಲಗೈಯನ್ನ ಪೂರ್ವೋಕ್ತರೀತ್ಯಾ ಗೋಕರ್ಣಾಕಾರವಾಗಿ ಮಾಡಿಕೊಂಡು ಮಾಷಮಗ್ನ ಪ್ರಮಾಣ ಅಂದರೆ ಉದ್ದಿನಕಾಳು ಮುಳುಗುವಷ್ಟು ಜಲದಿಂದ ಆಚಮ ನೋದಕವನ್ನು ಹೃದಯವನ್ನು ಹೊಂದುವಂತೆ ಋಗ್ಗಿಜುಸ್ಸಾಮವೇದ ಗಳನ್ನು ಸ್ಮರಿಸಿಕೊಂಡು ನಿಶ್ಶಬ್ದವಾಗಿ ಪಾನಮಾಡಿ ಯಾವ ಬ್ರಾಹ್ಮ ತೀರ್ಥದಿಂದ ಆಚಮನೋದಕವನ್ನ ಪಾನಮಾಡಿದನೋ ಆ ಬ್ರಾಹ್ಮ ತೀರ್ಥದಿಂದಲೇ ಅಥರ್ವಣವೇದೇತಿಹಾಸ ಪುರಾಣಗಳನ್ನು ಧ್ಯಾನಮಾಡು ವನಾಗಿ ಓಷ್ಠಗಳನ್ನು ತೊಳೆದುಕೊಂಡು ಪುನಹಾ ಮಧ್ಯಮವಾದ ಮೂರು ಬೆರಳುಗಳಿಂದಾ ಓಷ್ಠಗಳನ್ನು ಸ್ಪರ್ಶಮಾಡಿ ಅಗ್ನಿಯನ್ನು ಧ್ಯಾನಿಸುವ ನಾಗಿ ಮುಖಸ್ಪರ್ಶ ಮಾಡತಕ್ಕದ್ದು. ಅನಂತರ ಬಲಗೈಯಿಂದ ಮ ತ್ತೊಂದು ಹಸ್ತವನ್ನ ಪ್ರೋಕ್ಷಿಸಿ ವಿಷ್ಣುವನ್ನು ಧ್ಯಾನಮಾಡುವನಾಗಿ ಪಾ ದಗಳನ್ನು ಪ್ರೋಕ್ಷಿಸುವದು, ಅನಂತರ ಶಿರಸ್ಸನ್ನ ಪ್ರೋಕ್ಷಿಸಿಕೊಂಡು ಅಂ ಗುಷ್ಠ ಅನಾಮಿಕಾ ಬೆರಳುಗಳಿಂದ ಚಂದ್ರಸೂರ್ಯರುಗಳನ್ನು ಧ್ಯಾನಮಾ ಡುವನಾಗಿ ನೇತ್ರಗಳನ್ನು ಸ್ಪರ್ಶಮಾಡುವದು, ಅನಂತರ ನೀರನ್ನು ಸ್ಪ ರ್ಶಮಾಡಿ ಪ್ರಾಣಗಳನ್ನು ಧ್ಯಾನಮಾಡುವನಾಗಿ ತರ್ಜನ್ಯಂಗುಷ್ಠಗ ಳಿಂದ ನಾಸಿಕದ ಎರಡು ಪಾರ್ಶ್ವಗಳನ್ನು ಸ್ಪರ್ಶಮಾಡುವದು, ಅನಂತರ ನೀರನ್ನು ಸ್ಪರ್ಶಮಾಡಿ ದಿಕ್ಕುಗಳನ್ನು ಧ್ಯಾನಮಾಡುವನಾಗಿ ಅಂಗುಷ್ಠ ಕನಿಷ್ಠಿಕಾ ಬೆರಳುಗಳಿಂದ ಕಿವಿಗಳನ್ನು ಸ್ಪರ್ಶಮಾಡುವದು, ಅನಂತರ ಉದಕವನ್ನು ಸ್ಪರ್ಶಮಾಡಿ ಇಂದ್ರನನ್ನು ಧ್ಯಾನಿಸುವನಾಗಿ ನಾಲ್ಕು ಬೆರ ಳುಗಳಿಂದ ಬಾಹುಗಳನ್ನು ಸ್ಪರ್ಶಮಾಡತಕ್ಕದ್ದು, ಅನಂತರ ಉದಕ ಸ್ಪ ರ್ಶಮಾಡಿ ಭೂಮಿಯನ್ನು ಧ್ಯಾನಮಾಡುವನಾಗಿ ಕೇವಲವಾದ ಅಂಗುಷ್ಠ ದಿಂದ ನಾಭಿಯನ್ನು ಸ್ಪರ್ಶಮಾಡುವದು, ಅನಂತರ ಜಲವನ್ನ ಸ್ಪರ್ಶಮಾ ಡಿ ಪರಮಾತ್ಮನನ್ನು ಧ್ಯಾನಮಾಡುವನಾಗಿ ಹಸ್ತತಲದಿಂದ ಹೃದಯವನ್ನು ಸ್ಪರ್ಶಮಾಡುವದು, ಅನಂತರ ಉದಕವನ್ನು ಸ್ಪರ್ಶಮಾಡಿ ಎಲ್ಲಾ ಅಂ ಗುಳಿಗಳಿಂದಲು ಲಕ್ಷ್ಮಿಯನ್ನು ಧ್ಯಾನಮಾಡುವನಾಗಿ ಶಿರಸ್ಸಿನಲ್ಲಿ ಪ್ರೋಕ್ಷಿ ಸಿಕೊಂಡು ಶೇಷವಾದ ಉದಕವನ್ನ ಸವ್ಯಹಸ್ತದಲ್ಲಿ ಪ್ರೋಕ್ಷಿಸುವದು॥೧೬॥

ಹಾರೀತಃ॥ ಅಪ್ರ್ಯವಾಸಾಸ್ಥಲಸ್ಥಸ್ತು । ಯದ್ಯಾಚಾಮೇನ್ನರಾಧ ಮಃ । ವಸ್ತ್ರನ್ನಿಷ್ಠ್ಯೇತನಂಪ್ರೀತಾ । ಅಪವಾದ್ಯಪಿಬಂತಿತೇ ॥

ಶುಷ್ಕೇಣಾಂತರ್ಜಲೇಽಪ್ಯೇವ। ಬಹಿರಾರ್ದ್ರೇಣವಾಸಸಾ । ಸ್ನಾನಂದಾನಂಜಪೋಹೋಮಃ । ಸರ್ವಂಭವತಿನಿಷ್ಫಲಂ ॥೧೭॥

ಅರ್ಥ॥ ಆರ್ದ್ರವಸ್ತ್ರದಿಂದ ಕೂಡಿದವನಾಗಿ ಯಾವ ಸಾಧಕನು ಸ್ಥಳದಲ್ಲಿ ಆಚಮನ ಮಾಡುವನೋ ಅವನ ವಸ್ತ್ರದ್ದೆಸೆಯಿಂದ ಬರುವ ಉದಕಧಾರೆಯನ್ನು (ಅವಕ್ಕೆ ಭಾಗಿಗಳಾದ ಪಿತೃಗಳನ್ನು ತಳ್ಳಿ) ಪ್ರೇತಗಳು ಪಾನಮಾಡುವವು, ಶುಷ್ಕವಸ್ತ್ರಧಾರಿಯಾಗಿ ಜಲಮಧ್ಯದಲ್ಲಿಯೂ, ಆರ್ದ್ರವಸ್ತ್ರಧಾರಿಯಾಗಿ ಸ್ಥಳದಲ್ಲಿಯೂ ಸ್ನಾನದಾನ ಜಪಹೋಮಾದಿಗಳನ್ನು ಮಾಡಬಾರದು. ಹಾಗೆ ಮಾಡಿದರೂ ನಿಷ್ಫಲವಾಗುವದು ॥೧೭॥

ಸ್ಮೃತ್ಯಂತರೇ॥ ಕರಪಾತ್ರೇಚಯತ್ತೋಯಂ ಯತ್ತೋಯಂತಾಮ್ರಭಾಜನೇ । ಸೌವರ್ಣೇರಾಜತೇಕಾಂಸ್ಯೇ । ನೈವಾಶುದ್ಧಂತುಕರ್ಹಿಚಿತ್ । ಉಪಸ್ಪೃಶೇತ್ಸ್ವಹಸ್ತಸ್ಥೈರೇತೈರಪಿವಿಚಕ್ಷಣಃ ... ... ॥೧೮॥

ಅರ್ಥ॥ ತಟಾಕಾದಿಗಳಲ್ಲಿ ಆಚಮನಾನುಕೂಲ ಕಾಲಗಳಲ್ಲಿ ವಿನಹ ಗೃಹಾದಿಗಳಲ್ಲಿ ಆಚಮನ ಮಾಡತಕ್ಕ ಸಂದರ್ಭದಲ್ಲಿ ಕಂಚು, ತಾಮ್ರ, ಬೆಳ್ಳಿ, ಸ್ವರ್ಣಪಾತ್ರಗಳನ್ನು ಸ್ವಹಸ್ತದಲ್ಲಿಟ್ಟುಕೊಂಡು ಆಚಮನ ಮಾಡಿದರೂ ಬಾಧಕವಿಲ್ಲ. ಅಂದರೆ, ತಾಮ್ರಪಾತ್ರೆಯೇ ಮೊದಲಾದ ಪಾತ್ರಗಳಲ್ಲಿ ಉದಕವು ಅಪರಿಶುದ್ಧವಲ್ಲವೆಂದು ಭಾವಿಸಬೇಕು ॥೧೮॥

ಸ್ಮೃತಿರತ್ನಾಕರೇ॥ ಯತ್ತ್ವಿದಂವಚನಂ॥ ಉಪವಿಶ್ಯಾಸನೇಶುದ್ಧೇ । ಕುರ್ಯಾದಾಚಮನಂಬುಧಃ । ಇತಿತತ್ಭುಕ್ತ್ವಾಚಮನವಿಷಯಂ । ಭುಕ್ತ್ವಾಸನಸ್ಥೋಽಪ್ಯಾಚಾಮೇನ್ನಾನ್ಯಕಾಲೇಕದಾಚನ ॥ ಇತಿವಚನಾದಿತಿ ... ... ॥೧೯॥

ಅರ್ಥ॥ ಭೋಜನಾನಂತರ ಆಚಮನದಲ್ಲಿ ಸ್ವಲ್ಪ ವ್ಯತ್ಯಾಸ ವುಂಟು. ಶುದ್ಧವಾದ ಆಸನದಲ್ಲಿ ಕುಳಿತುಕೊಂಡು ಆಚಮನ ಮಾಡಬೇಕು ಎಂಬುವದೇ. ... ... ॥೧೯॥

ಸ್ಮೃತಿರತ್ನಾಕರೇ॥ ಅತ್ರಮನ್ವಾದಿಭಿಸ್ತ್ರಿರಪಾಂಪ್ರಾಶನಮುಕ್ತಂ । ದ್ವಿಃಪರಿಮಾರ್ಜನಂ । ಸಕೃದುಪಸ್ಪರ್ಶನಂ । ತ್ರಿಶ್ಚತುರ್ವಾ ಅಪಆಚಾಮೇತ್ ತ್ರಿರೋಷ್ಠೌಪರಿಮೃಜೇತ್ ದ್ವಿರಿತ್ಯೇ

ತೇನ ಸಕೃದುಪಸ್ಪೃಶೇದಿತ್ಯಸ್ಯದ್ವಿರಿತ್ಯೇಕೇ ಇತಿ ಗೌತಮಾದಿ
ಭಿಃ ಪ್ರಕಾರಾಂತರಮುಕ್ತಂ ತಥಾಮೂರ್ಧಸ್ಪರ್ಶಾಂತಮಾ
ಚಮನಂ ಬಹುಸ್ಮೃತಿಸಿದ್ಧಂ— ಬಾಹ್ವಂತಂಕ್ವಚಿತ್ ಅತೋ
ಯಥೋಪದೇಶಮನುಷ್ಠೇಯಂಸದುಪದೇಶಾತ್ ॥೭೦॥

ಅರ್ಥ॥ ಆಚಮನವಿಷಯದಲ್ಲಿ ಮನ್ವಾದಿಗಳಿಂದ ಮೂರಾವರ್ತಿ ಉದಕಪ್ರಾಶನವೂ ಯೆರಡಾವರ್ತಿ ಪರಿಮಾರ್ಜನವೂ ಸಕೃತ್‌ಸ್ಪರ್ಶವೂ ಹೇಳಲ್ಪಟ್ಟಿರುವದು. (ಪರಿಮಾರ್ಜನ—ಬ್ರಾಹ್ಮತೀರ್ಥದಿಂದ ಓಷ್ಠವನ್ನು ತೊಡೆಯುವದು. ಸಕೃತ್ ಒಂದು ಬಾರಿ) ಗೌತಮಾದಿಗಳಿಂದ ತ್ರಿರಾವರ್ತಿ ಅಥವಾ ಚತುರಾವರ್ತಿ ಉದಕಪ್ರಾಶನವೂ, ದ್ವಿರಾವರ್ತಿ ಅಥವಾ ತ್ರಿರಾವರ್ತಿ ಓಷ್ಠಪರಿಮಾರ್ಜನವೂ ಸಕೃದುಪಸ್ಪರ್ಶನವೂ ಅಥವಾ ದ್ವಿರಾವರ್ತಿ ಉಪಸ್ಪರ್ಶನವೂ ಇತ್ಯಾದಿ ಪ್ರಕಾರಾಂತರಗಳಿಂದ ಹೇಳಲ್ಪಟ್ಟಿರುವದು. ಹಾಗೆಯೆ ಶಿರಸ್ಪರ್ಶಾಂತವಾಗಿ ಆಚಮನವು ಬಹುಸ್ಮೃತಿ ಸಿದ್ಧವಾಗಿರುವುದು. ಕೆಲ ಸ್ಮೃತಿಗಳಲ್ಲಿ ಬಾಹ್ವಂತವಾಗಿ ಸ್ಪರ್ಶವು ಹೇಳಿರುವುದು. ಆದಕಾರಣ ಹ್ಯಾಗೆ ಸದುಪದೇಶವೋ ಹಾಗೆ ಆಚಮನಾನುಷ್ಠಾನ ಮಾಡತಕ್ಕದ್ದು.

ಪೈಠೀನಸಿಃ॥ ವಾ॥ ಪಾದಪ್ರಕ್ಷಾಳನೋಚ್ಛೇಷೇಣನಾಚಾಮೇತ್।
ಯದ್ಯಾಭೂಮೌಸ್ರಾವಯಿತ್ವಾ ಆಚಮೇತ್। ನವರ್ಷಧಾರಾ
ಸ್ವಾಚಾಮೇತ್ ... ... ॥೭೧॥

ಅರ್ಥ—ಪಾದಪ್ರಕ್ಷಾಳನೋದಕ ಶೇಷದಿಂದ ಆಚಮನ ಮಾಡಬಾರದು. ಆಚಮನಕ್ಕೆ ಪಾತ್ರಾಂತರ ಸಂಭವವಿಲ್ಲದಪಕ್ಷ ಪಾದಪ್ರಕ್ಷಾಳನಾನಂತರ ಸ್ವಲ್ಪ ಉದಕವನ್ನು ಭೂಮಿಯಲ್ಲಿ ಬಿಟ್ಟು ಅನಂತರ ಮಾಡಬಹುದು. ಮಳೆಯ ಧಾರೆಗಳಲ್ಲಿ ಆಚಮನವನ್ನ ಮಾಡಬಾರದು.

ಸ್ಮೃತಿರತ್ನೇ॥ ಏಲಾಲವಂಗಕರ್ಪೂರಗಂಧಾದ್ಯೈರಧಿವಾಸಿತೈರ್ಜಲೈಃ।
ನಾಚಾಮೇದದ್ಭಿರುಷ್ಣಾಭಿಸ್ತಥಾಚಾಪರೀಕ್ಷಿತೈಃ ॥೭೨॥

ಅರ್ಥ—ಏಲಾ, ಲವಂಗ, ಪಚ್ಚಕರ್ಪೂರಾದಿ ಸುಗಂಧ ದ್ರವ್ಯಗಳಿಂದ ವಾಸಿತವಾದ ತೀರ್ಥದಿಂದಲೂ ಉಷ್ಣೋದಕದಿಂದಲೂ ಶೋಧಾಪರೀಕ್ಷಿತವಾದ ನೀರಿನಿಂದಲೂ ಆಚಮನ ಮಾಡಬಾರದು.

ಯಾಜ್ಞವಲ್ಕ್ಯಃ॥ ಅದ್ಭಿಸ್ತುಪ್ರಕೃತಿಸ್ಥಾಭಿಃಹೀನಾಭಿಃಫೇನಬು ದ್ಬುದೈಃ । ತ್ರಿಃಪ್ರಾಶ್ಯಾಪೋದ್ವಿರುನ್ಮೃಜ್ಯಖಾನ್ಯದ್ಭಿಃಸಮು ಪಸ್ಪೃಶೇತ್॥ ... ... ॥೨೩॥

ಅರ್ಥ—ನೊರೆಗಳಿಂದಲೂ ಗುಳ್ಳೆಗಳಿಂದಲೂ ಕೂಡದೇ ಇರುವ ಸ್ವಭಾವದಲ್ಲಿರುವ ಉದಕಗಳಿಂದ ತ್ರಿರಾವೃತ್ತಿ ಪ್ರಾಶನ ಮಾಡಿ ದ್ವಿರಾವೃತ್ತಿ ಓಷ್ಠಮಾರ್ಜನ ಮಾಡಿ ಅನಂತರ ತೀರ್ಥದಿಂದ ಇಂದ್ರಿಯಗಳನ್ನು ಸ್ಪರ್ಶ ಮಾಡತಕ್ಕದ್ದು.

ಭರದ್ವಾಜ॥ ಪಕ್ವಂಸಫೇನಂಕಲುಷಂಸದುರ್ಗಂಧಂಸಬುದ್ಬುದಂ । ಉಷ್ಣಂಸಮೃತ್ತಿಕಂಕ್ಷಾರಂತ್ಯಜೇದಾಚಮನೇಜಲಂ । ಅಂತರಿಕ್ಷಂನಖಸ್ಪೃಷ್ಟಂಭಿನ್ನರಂಧ್ರವಿನಿರ್ಗತಂ । ಏಕಹಸ್ತಾರ್ಪಿತಂ ವಾರಿತ್ಯಜೇದಾಚಮನೇಬುಧಃ॥ ... ॥೨೪॥

ಅರ್ಥ—ದುರ್ಗಂಧ ಉಳ್ಳ ಉದಕವನ್ನೂ ನೊರೆಗಳಿಂದಲೂ ಗುಳ್ಳೆಗಳಿಂದಲೂ ಕೂಡಿದ ನೀರನ್ನೂ ಉಷ್ಣೋದಕವನ್ನೂ ಕ್ಷಾರವಾದ ತೀರ್ಥವನ್ನೂ ಮಣ್ಣಿನಿಂದ ಕೂಡಿದ ಕಲುಷವಾದ ತೀರ್ಥಗಳನ್ನೂ ಭೂಸ್ಪರ್ಶವಿಲ್ಲದ ನೀರನ್ನೂ ನಖಸ್ಪರ್ಶವಾದ ತೀರ್ಥವನ್ನೂ ಭಿನ್ನವಾದ ರಂಧ್ರದ್ದೆಸೆಯಿಂದ ಬರುವ ನೀರನ್ನೂ ಪಕ್ವವಾದ ನೀರನ್ನೂ ಏಕಹಸ್ತದಿಂದ ಕೊಡಲ್ಪಟ್ಟ ಉದಕವನ್ನೂ ಆಚಮನಕ್ಕೆ ಉಪಯೋಗಿಸಬಾರದು.

ಭರದ್ವಾಜಃ॥ ಕಾಕಶ್ವಖರವಿಟ್ಕ್ರೋಡತಾಮ್ರಚೂಡರಜಸ್ವಲಾಃ॥ ವ್ರಾತ್ಯಾಂತ್ಯಪತಿತಾಃಪಶ್ಯೇತ್ ತತೋನೋಪಸ್ಪೃಶೇದ್ಬುಧಃ ॥ ಶಯಾನಃಪಾದುಕಾಸ್ಥಶ್ಚ ಬಹಿರ್ಜಾನುಕರೋನ್ಯಧೀಃ । ಉಷ್ಣೀಷೀಕಂಚುಕೀನಗ್ನಃನಕದಾಚಿದುಪಸ್ಪೃಶೇತ್ ॥೨೫॥

ಅರ್ಥ—ಕಾಗೆ, ನಾಯಿ, ಕತ್ತೆ, ಊರುಹಂದಿ, ಕೋಳಿ, ರಜಸ್ವಲೆಯಾದವಳು, ವ್ರಾತ್ಯ, ಚಂಡಾಲ, ಪತಿತ, ಇವರುಗಳನ್ನು ನೋಡುವವನಾಗಿ ಆಚಮನ ಮಾಡಬಾರದು. ಮತ್ತು ಮಲಗಿದವನಾಗಿಯೂ ಪಾದರಕ್ಷೆಯನ್ನು ಮೆಟ್ಟಿದವನಾಗಿಯು ಮಂಡಿಯ ಹೊರಗಿರುವ ಕೈಯುಳ್ಳವನಾಗಿಯೂ ಅನ್ಯಮನಸ್ಕನಾಗಿಯೂ ಶಿರೋವಸ್ತ್ರಧಾರಿಯಾಗಿಯೂ ಕವಚವನ್ನ ತೊಟ್ಟು ದಿಗಂಬರನಾಗಿಯೂ ಅನ್ಯಮನಸ್ಕನಾಗಿಯೂ ಆಚಮನ ಮಾಡಬಾರದು.

ಭರದ್ವಾಜ॥ ತಿಷ್ಠನ್ನನಮ್ರಹಸನ್ಜಲ್ಪನ್। ಶೃಣ್ವನ್ಅಂತ್ಯಜಭಾಷ
ಣಂ॥ ಅನ್ಯಂಸ್ಪೃಶನ್ದಿಶಃಪಶ್ಯನ್। ನಕದಾಚಿದುಪಸ್ಪೃಶೇತ್॥

ಅರ್ಥ—ನಿಂತೂ, ನಮ್ರ (ಬಗ್ಗಿದವ) ನಾಗಿಯೂ, ನಗುವಿನಿಂದಲೂ ಇತರರೊಡನೆ ಮಾತನಾಡುವನಾಗಿಯೂ, ಚಂಡಾಲಾದಿಗಳ ಮಾತನ್ನು ಕೇಳುವನಾಗಿಯೂ, ದಿಕ್ಕುಗಳನ್ನು ನೋಡುವನಾಗಿಯೂ, ಇತರರನ್ನು ಸ್ಪರ್ಶ ಮಾಡಿಕೊಂಡೂ ಒಂದುಕಾಲದಲ್ಲೂ ಆಚಮನ ಮಾಡಬಾರದು.

ಯಃಕ್ರಿಯಾಂಕುರುತೇಮೋಹಾದನಾಚಮ್ಯೈವನಾಸ್ತಿಕಃ। ಭವಂ
ತಿಹಿವೃಥಾತಸ್ಯಕ್ರಿಯಾಸ್ಸರ್ವಾನಸಂಶಯಃ ॥೨೭॥

ಅರ್ಥ—ಯಾವನು ಮೋಹದ್ದೆಸೆಯಿಂದ ಆಚಮನವನ್ನು ಮಾಡದೇ ಕ್ರಿಯೆಗಳನ್ನು ಮಾಡುವನೋ ಅವನು ಮಾಡುವ ಕ್ರಿಯೆಗಳೆಲ್ಲ ನಿಷ್ಫಲಗಳಾಗುವವು.

## ಇನ್ನು ಸಂಪ್ರದಾಯರೀತ್ಯಾ ಆಚಮನ ಪ್ರಯೋಗವು ಬರಿಯಲ್ಪಡುವದು.

ಶುದ್ಧವಾದ ಪ್ರದೇಶದಲ್ಲಿ ಪೂರ್ವಾಭಿಮುಖನಾಗಿ ಅಥವಾ ಉತ್ತರಾಭಿಮುಖನಾಗಿ ಕುಕ್ಕುಟಾಸನದಲ್ಲಿ ಕುಳಿತುಕೊಂಡು ಪೂರ್ವೋಕ್ತರೀತಿಯಿಂದ ಪಾಣಿ ಪಾದಪ್ರಕ್ಷಾಳನವನ್ನು ಮಾಡಿ ಜಾನುಪ್ರದೇಶದ ಒಳಭಾಗದಲ್ಲಿ ದಕ್ಷಿಣಹಸ್ತ ಉಳ್ಳವನಾಗಿ ಮೌನವನ್ನಾಶ್ರಯಿಸಿ ದಕ್ಷಿಣಹಸ್ತವನ್ನು ಪೂರ್ವೋಕ್ತರೀತಿಯಿಂದ ಗೋಕರ್ಣಾಕಾರವಾಗಿ ಮಾಡಿಕೊಂಡು ವಾಮಹಸ್ತದಲ್ಲಿ ಉದಕಸ್ಪರ್ಶಮಾಡುವನಾಗಿ ಬಲಗೈಯಲ್ಲಿ ದೇವತೀರ್ಥದಿಂದ ಆಚಮನೋದಕವನ್ನು ತೆಗದುಕೊಂಡು ಮಾಷಪ್ರಮಾಣೋದಕವು ನಿಲ್ಲುವಹಾಗೆ ಗೋಕರ್ಣಾಕಾರವಾದ ಹಸ್ತದಲ್ಲಿ ಅಂಗುಷ್ಟಕನಿಷ್ಟಿಕಾ ಬೆರಳುಗಳನ್ನು ಬಿಟ್ಟು ಅಚ್ಯುತಾಯನಮಃ-ಎಂದು ಮಂತ್ರವನ್ನು ಹೇಳಿ ಶಬ್ದವಾಗದಹಾಗೆ ಪ್ರಾಶನ ಮಾಡುವುದು, ಆ ಆಚಮನೋದಕವು ಹೃದಯವನ್ನು ಹೊಂದಿದನಂತರ ಅನಂತಾಯನಮಃ-ಎಂದು ಈ ಎರಡನೇ ಮಂತ್ರದಿಂದ ಪ್ರಾಶನ ಮಾಡತಕ್ಕದ್ದು. ಅನಂತರ ಗೋವಿಂದಾಯನಮಃ-ಎಂದು ಮೂರನೇ ಮಂತ್ರದಿಂದ ಪ್ರಾಶನ ಮಾಡತಕ್ಕದ್ದು. ಅನಂತರ

ವದನವನ್ನು ತೊಡದು ಉದಕವನ್ನು ಸ್ಪರ್ಶಮಾಡಿ ಅಂಗುಷ್ಠ ಬೆರಳಿನಿಂದ ಕೇಶವಾಯನಮಃ-ಎಂದು ಮಂತ್ರೋಚ್ಚಾರಣದಿಂದ ಬಲಕಪೋಲವನ್ನೂ, ನಾರಾಯಣಾಯನಮಃ-ಎಂದು ಎಡಕಪೋಲವನ್ನೂ ಸ್ಪರ್ಶಮಾಡುವದು. ಅನಂತರ ಅಂಗುಷ್ಠದಿಂದ ಕೂಡಿದ ಅನಾಮಿಕಾ ಬೆರಳಿನಿಂದ ಮಾಧವಾಯನಮಃ ಎಂದು ಬಲಗಣ್ಣನ್ನೂ, ಗೋವಿಂದಾಯನಮಃ-ಎಂದು ಎಡದ ಕಣ್ಣನ್ನೂ, ಸ್ಪರ್ಶಮಾಡುವದು. ಅನಂತರ ಅಂಗುಷ್ಠ ತರ್ಜನೀ ಬೆರಳುಗಳಿಂದ ವಿಷ್ಣವೇನಮಃ-ಎಂದು ನಾಸಿಕಾ ಬಲಭಾಗವನ್ನೂ, ಮಧುಸೂದನಾಯನಮಃ-ಎಂದು ನಾಸಿಕದ ಎಡಪಾರ್ಶ್ವವನ್ನೂ, ಅನಂತರ ಅಂಗುಷ್ಠದಿಂದ ಕೂಡಿರುವ ಚಿಕ್ಕ ಬೆರಳಿನಿಂದ ತ್ರಿವಿಕ್ರಮಾಯನಮಃ-ಎಂದು ದಕ್ಷಿಣಕಿವಿಯನ್ನೂ, ವಾಮನಾಯನಮಃ-ಎಂದು ಎಡಗಿವಿಯನ್ನೂ, ಅನಂತರ ಅಂಗುಷ್ಠ ಮಧ್ಯಮಾಂಗುಳಿಗಳಿಂದ ಶ್ರೀಧರಾಯನಮಃ-ಎಂದು ದಕ್ಷಿಣ ಬಾಹುಮೂಲವನ್ನೂ, ಹೃಷೀಕೇಶಾಯನಮಃ-ಎಂದು ಎಡಭುಜ ಶಿರಸ್ಸನ್ನೂ, ಪದ್ಮನಾಭಾಯನಮಃ-ಎಂದು ಕೇವಲಾಂಗುಷ್ಠದಿಂದ ನಾಭಿಯನ್ನೂ, ಅಂಗೈಯ್ಯಿನಿಂದ ಹೃದಯವನ್ನೂ, ಎಲ್ಲಾ ಬೆರಳುಗಳಿಂದಲೂ, ದಾಮೋದರಾಯನಮಃ-ಎಂದು ಶಿರಸ್ಸನ್ನೂ ಸ್ಪರ್ಶಮಾಡುವದು. ಪ್ರತ್ಯಂಗವನ್ನು ಸ್ಪರ್ಶಮಾಡುವಾಗ್ಯೆ ಉದಕಸ್ಪರ್ಶಪೂರ್ವಕವಾಗಿಯೇ ಮಾಡತಕ್ಕದ್ದು.

## ಅಥ ದ್ವಿರಾಚಮನವಿಧಿಃ.

ಸ್ಮೃತಿರತ್ನೆ॥ ದಾನೇಪ್ರತಿಗ್ರಹೇಹೋಮೇ। ಜಪೇಸಂಧ್ಯಾತ್ರಯೇ
ತಥಾ ॥ ಬಲಿಕರ್ಮಣಿಚಾಚಾಮೇ। ದಾದೌದ್ವಿಃಸಕೃದಂತತಃ॥
ಭೋಜನೇಚದ್ವಿರಾಚಾಮೇ। ದಾದಾವಂತೇಚನಿತ್ಯಶಃ ॥೧॥

ಅರ್ಥ—ದಾನವನ್ನ ಕೊಡತಕ್ಕ ಕಾಲದಲ್ಲಿಯೂ ದಾನವನ್ನ ತೆಗದು ಕೊಳ್ಳುವಕಾಲದಲ್ಲಿಯೂ ಹೋಮಕ್ಕೆ ಪ್ರಾರಂಭದಲ್ಲಿಯೂ ಜಪಪ್ರಾರಂಭದಲ್ಲಿಯೂ ಸಂಧ್ಯಾತ್ರಿತಯದಲ್ಲಿಯೂ ವಾಯಸಾದಿ ಬಲಿದಾನಗಳಲ್ಲಿಯೂ ಭೋಜನದಲ್ಲಿಯೂ ಪ್ರಾರಂಭದಲ್ಲಿ ದ್ವಿರಾವೃತ್ತಿ ಅನಂತರ ಏಕಾವೃತ್ತಿ ಆಚಮನ ಮಾಡತಕ್ಕದ್ದು.

ವಿಷ್ಣುಃ॥ ರಥ್ಯಾಕರ್ದಮಮೂತ್ರ ಪುರೀಷೋತ್ಸರ್ಜನಚಂಡಾಲ
ಮ್ಲೇಚ್ಛಭಾಷಣೇಷುದ್ವಿರಾಚಾಮೇತ್ ... ॥೨॥

ಅರ್ಥ॥ ರಾಜಬೀದಿಗಳಲ್ಲಿ ಸಂಚಾರವಲ್ಲಿಯೂ ಮಲಮೂತ್ರೋತ್ಸರ್ಜನವಲ್ಲಿಯೂ ಚಂಡಾಲ ತುರುಷ್ಕರ ಸಂಭಾಷಣದಲ್ಲಿಯೂ ದ್ವಿರಾವೃತ್ತಿ ಆಚಮನ ಮಾಡಬೇಕು.

ಶ್ಲೋಕ॥ ಓಷ್ಠಾವಿಲೋಮಕೌಸ್ಪೃಷ್ಟ್ವಾ। ವಾಸೋವಿಪರಿಧಾಯಚ। ರೇತೋಮೂತ್ರಪುರೀಷಾಣಾಂ। ಉತ್ಸರ್ಗೇಶೂದ್ರಭಾಷಣೇ॥ ಷ್ಠೀವಿತ್ವಾಧ್ಯಯನಾರಂಭೇ। ಕಾಸಶ್ವಾಸಾಗಮೇ ತಥಾ॥ ಚತ್ವರಂವಾಶ್ಮಶಾನಂವಾ। ಸಮಾಗಮ್ಯದ್ವಿಜೋತ್ತಮಃ। ಸಂಧ್ಯಯೋರುಭಯೋಸ್ತದ್ವ। ದಾಚಾಂತೋಪ್ಯಾಚಮೇತ್ಪುನಃ .. ... ।೭॥

ಅರ್ಥ॥ ಲೋಮೋತ್ಪತ್ತಿ ಇಲ್ಲದೇ ಇರುವ ಓಷ್ಠಪ್ರಾಂತ್ಯಗಳನ್ನು ಸ್ಪರ್ಶ ಮಾಡಿದರೂ, ವಸ್ತ್ರವನ್ನು ಉಟ್ಟುಕೊಂಡರೂ, ರೇತೋಮೂತ್ರ ಪುರೀಷೋತ್ಸರ್ಗಗಳಲ್ಲಿಯೂ, ಶೂದ್ರಸಂಭಾಷಣದಲ್ಲಿಯೂ, ಷ್ಠೀವನ (ಕ್ಯಾಕರಿಸಿ ಉಗಿಯುವದು)ದಲ್ಲಿಯೂ, ಅಧ್ಯಯನಾರಂಭದಲ್ಲಿಯೂ, ಕಾಸ (ಗುಮ್ಮು) ರೋಗ ಸಂಬಂಧವಾದ ಶ್ವಾಸದಲ್ಲಿಯೂ, ಚತ್ವರ (ನಾಲ್ಕುಬೀದಿ ಕೂಡಿದ ಸ್ಥಳ) ಸ್ಮಶಾನಾದಿಗಳನ್ನು ಪ್ರವೇಶ ಮಾಡಿಬಂದಾಗಲೂ ಸಂಧ್ಯಾಕಾಲಗಳಲ್ಲಿಯೂ ದ್ವಿರಾವೃತ್ತಿ ಆಚಮನ ಮಾಡತಕ್ಕದ್ದು.

## ಅಥ ಆಚಮನ ನಿಮಿತ್ತಾನಿ.

ಆಪಸ್ತಂಬಃ॥ ವಾ॥ ಸ್ವಪ್ನೇಕ್ಷವಥುಶಿಂಘಾಣಿಕಾಶ್ರುಲಾಲೋಹಿತರೇತಸ್ಪರ್ಶನಾನಾಂ ಅಗ್ನೇರ್ಗವಾಂ ಬ್ರಾಹ್ಮಣಸ್ಯ ಸ್ತ್ರಿಯಾಶ್ಚಾಲಂಭೇ ಮಹಾಪಥಂಗತ್ವಾ ಅಮೇಧ್ಯಂಚೋಪಸ್ಪೃಶ್ಯ ಅಪ್ರಯತಂಚ ಮನುಷ್ಯಂ ನೀವೀಂಚ ಪರಿಧಾಯ ಅಪ ಉಪಸ್ಪೃಶೇತ್ ।೧॥

ತಾತ್ಪರ್ಯ॥ ಮಲಗಿ ಎದ್ದನಂತರದಲ್ಲಿಯೂ, ಸೀನು ಬಂದಾಗಲೂ, ಸಿಂಬಳವನ್ನು ತೆಗೆದಕಾಲದಲ್ಲಿಯೂ, ಕಣ್ಣೀರಿನ ಸ್ಪರ್ಶದಲ್ಲಿಯೂ, ರಕ್ತವನ್ನು ಸ್ಪರ್ಶಮಾಡಿದಾಗಲೂ, ಕೇಶಪಾಶಗಳಿಗೆ ಮತ್ತು ಅಗ್ನಿ, ಗೋವು, ಬ್ರಾಹ್ಮಣ, ಸ್ತ್ರೀಯರು ಇವರುಗಳ ಸ್ಪರ್ಶದಲ್ಲಿಯೂ, ರಾಜಮಾರ್ಗಪ್ರವೇಶದಲ್ಲಿಯೂ ಅಮೇಧ್ಯ ಸ್ಪರ್ಶದಲ್ಲಿಯೂ, ಅಪವಿತ್ರನಾದ

ಮನುಷ್ಯನನ್ನ ಸ್ಪರ್ಶ ಮಾಡಿದರೂ, ಅಧೋವಸ್ತ್ರವನ್ನ ಉಟ್ಟುಕೊಂಡ ರೂ ಆಚಮನವನ್ನ ಮಾಡತಕ್ಕದ್ದು.

ಮಾರ್ಕಂಡೇಯಃ॥ ದೇವಾರ್ಚನಾದಿಕಾರ್ಯಾಣಿ । ತಥಾಗುರ್ವಭಿವಾದನಂ ॥ ಕುರ್ವೀತಸಮ್ಯಗಾಚಮ್ಯ । ತದ್ವದೇವಭುಜಿಕ್ರಿಯಾಂ ... ... ॥೨॥

ಅರ್ಥ॥ ದೇವತಾರಾಧನಾದಿ ಕಾರ್ಯಗಳನ್ನೂ ಆಚಾರ್ಯಾಭಿವಾದನವನ್ನೂ ಭೋಜನವನ್ನೂ ಸಹಾ ಆಚಮನಮಾಡಿಯೇ ಮಾಡತಕ್ಕದ್ದು.

ಶಾತಾತಪಃ॥ ಆಚಾಮೇಚ್ಚ ಸರ್ವತ್ರನಿತ್ಯಂ । ಮುಕ್ತ್ವಾತಾಂಬೂಲಚರ್ವಣಂ । ಉಪಕ್ರಮೇವಿಶಿಷ್ಟಸ್ಯ । ಕರ್ಮಣಃಪ್ರಯತೋಪಿಸನ್ ... ... ... ॥೩॥

ಅರ್ಥ॥ ತಾಂಬೂಲಚರ್ವಣವನ್ನು ಹೊರತು ಎಲ್ಲಾ ಭಕ್ಷಣದಲ್ಲಿಯೂ ಆಚಮನ ಮಾಡತಕ್ಕದ್ದು. ಅದರಂತೆ ಪರಿಶುದ್ಧನಾಗಿದ್ದಾಗ್ಯೂ ಸರ್ವ ಕರ್ಮೋಪಕ್ರಮದಲ್ಲಿಯೂ ಆಚಮನ ಮಾಡಬೇಕು.

ಬೃಹಸ್ಪತಿಃ॥ ಅಧೋವಾಯುಸಮುತ್ಸರ್ಗೇ । ತ್ವಾಕ್ರಂದೇಕ್ರೋಧಸಂಭವೇ । ಮಾರ್ಜಾರಮೂಷಿಕಾಸ್ಪರ್ಶೇ । ಪ್ರಹಾಸೇನೃತಭಾಷಣೇ ... ... ॥೪॥

ಅರ್ಥ—ಅಧೋವಾಯು ಸಂಚಾರದಲ್ಲಿಯೂ ಕೋಪಸಂಬಂಧವಾದ ಆಕ್ರೋಶದಲ್ಲಿಯೂ, ಮೂಷಿಕ (ಇಲಿ) ಮಾರ್ಜ್ಜಾರ (ಬೆಕ್ಕು) ಸ್ಪರ್ಶದಲ್ಲಿಯೂ, ನಗುವಿನಲ್ಲಿಯೂ ಅಬದ್ಧವನ್ನು ಹೇಳಿದಾಗಲೂ ಈ ನಿಮಿತ್ತಗಳಲ್ಲಿ ಕರ್ಮ ಮಾಡಲುಪಕ್ರಮಿಸುವನು. ಆಚಮನವನ್ನು ಮಾಡಬೇಕು.

ಪರಾಶರಃ॥ ಕ್ಷುತೇನಿಷ್ಠೀವನೇಚೈವ । ದಂತಸ್ಪರ್ಶೇತಥಾನೃತೇ ॥ ಪತಿತಾನಾಂತುಸಂಭಾಷೇ । ದಕ್ಷಿಣಂಶ್ರವಣಂಸ್ಪೃಶೇತ್ ॥ ಪ್ರಭಾಸಾದೀನಿತೀರ್ಥಾನಿ । ಗಂಗಾದ್ಯಾಸ್ಸರಿತಸ್ತಥಾ ॥ ವಿಪ್ರಸ್ಯದಕ್ಷಿಣೇಕರ್ಣೇ । ಸಂತೀತಿಮನುರಬ್ರವೀತ್ ॥ ಗಂಗಾದ್ಯಾಃ ದಕ್ಷಿಣೇಶ್ರೋತ್ರೇ । ನಾಸಿಕಾಯಾಂಹುತಾಶನಃ । ಉಭಾವಪಿಸಕೃತ್ಸ್ಪೃಷ್ಟ್ವಾ । ತತ್ಕ್ಷಣಾದೇವಶುಧ್ಯತಿ ॥ ವ್ಯಾ॥ ತಸ್ಮಾದಾಚಮನಾಸಂಭವೇನಾಸಿಕಾಕರ್ಣಸ್ಪರ್ಶಃಕಾರ್ಯಃ ॥೫॥

ಅರ್ಥ॥ ಶೀನು ಬಂದರೂ ಕ್ಯಾಕಾರಾದಿಗಳಿಂದ ಉಗಿದಾಗ್ಯೂ ಅಬದ್ಧ ವನ್ನ ಆಡಿವರೂ ಪತಿತಾದಿಗಳೊಡನೆ ಸಂಭಾಷಣ ಮಾಡಿದಾಗಲೂ ದಕ್ಷಿಣ ಶ್ರೋತ್ರವನ್ನಾದರೂ ಸ್ಪರ್ಶ ಮಾಡತಕ್ಕದ್ದು. ಪ್ರಭಾಸಾದಿ (ಕ್ಷೇತ್ರ ವಿಶೇಷ) ತೀರ್ಥಗಳೂ, ಗಂಗಾದಿ ನದಿಗಳೂ, ಬ್ರಾಹ್ಮಣನ ಬಲಗಿವಿ ಯಲ್ಲಿರುವದಾಗಿ ಮನುಸ್ಮೃತಿಯಲ್ಲಿ ಹೇಳಿಯಿದೆ. ಹೀಗೆ ಬಲಗಿವಿಯಲ್ಲಿ ಗಂಗಾದಿ ನದಿಗಳೂ ನಾಸಿಕದಲ್ಲಿ ಅಗ್ನಿಯೂ ಇರುತ್ತೆಂದು ಶಾಸ್ತ್ರವು ಹೇ ಳುವದಾಗಿ ನಾಸಿಕಾಕರ್ಣ ಸ್ಪರ್ಶವನ್ನ ಮಾಡಿದ್ದಾದರೆ ತತ್‌ಕ್ಷಣದಲ್ಲಿ ಶುದ್ಧನಾಗುವನು. ಆದಕಾರಣ ಆಚಮನಕ್ಕೆ ಸಂದರ್ಭವಿಲ್ಲದಿದ್ದರೆ ನಾ ಸಿಕಾ ದಕ್ಷಿಣಕರ್ಣ ಸ್ಪರ್ಶ ಮಾಡತಕ್ಕದ್ದು.

ಸ್ಮೃತ್ಯಂತರೇ॥ ಸತ್ಯಮಾಚಮನಾಶಕ್ತಾ । ಅಭಾವೇಸಲಿಲಸ್ಯವಾ।
ಪೂರ್ವೋಕ್ತೇಷುನಿಮಿತ್ತೇಷು। ದಕ್ಷಿಣಂಶ್ರವಣಂಸ್ಪೃಶೇತ್॥
ಮುಹೂರ್ತಮಪ್ಯಪ್ರಯತಃ । ನಭವೇದನುಪಸ್ಪೃಶೇ ॥೬॥

ಅರ್ಥ॥ ಆಚಮನಕ್ಕೆ ಶಕ್ತಿ ಇಲ್ಲದಿದ್ದರೂ ಉದಕವು ಲಭಿಸದೇ ಇದ್ದ ರೂ ಪೂರ್ವೋಕ್ತವಾದ ನಿಮಿತ್ತಗಳಲ್ಲಿ ದಕ್ಷಿಣ ಶ್ರವಣ ಸ್ಪರ್ಶ ಮಾಡತ ಕ್ಕದ್ದು. ಸರ್ವಥಾ ಒಂದು ಮುಹೂರ್ತವೂ ಅಪರಿಶುದ್ಧನಾಗಿರಬಾರದು.

## ಅಥ ಆಚಮನಾಪವಾದಃ (ಅಚಮನವಿಲ್ಲದ ಸಂಭವಗಳು)

ಅತ್ರಿಃ॥ ಮಧುಪರ್ಕೇಚಸೋಮೇಚ।ಹ್ಯಪ್ಸುಪ್ರಾಣಾಹುತೀಷುಚ॥
ನೋಚ್ಛಿಷ್ಟಸ್ತುಭವೇದ್ದೋಷಃ । ಅತ್ರೇಸ್ತುವಚನಂಯಥಾ
ತಥಾಫಲೇಷುಚ ... ... ... ॥೧॥

ಅರ್ಥ॥ ಮಧುಪರ್ಕದಲ್ಲಿಯೂ ಯಾಗದಲ್ಲಿ ಮಾಡುವ ಸೋಮಪಾನದ ಲ್ಲಿಯೂ ಆಪೋಶನದಲ್ಲಿಯೂ ಪಂಚಪ್ರಾಣಾಹುತಿಗಳಲ್ಲಿಯೂ ಉಚ್ಛಿಷ್ಟ ದೋಷವಿಲ್ಲವೆಂದು ಅತ್ರಿಮಹರ್ಷಿಗಳು ಹೇಳುವರು. ಅಂದರೆ— ಪ್ರಾಣಾ ಹುತಿಗಳಲ್ಲಿ ಉತ್ತರೋತ್ತರ ಮಂತ್ರೋಚ್ಚಾರಣದಲ್ಲಿಯೂ ಪಾತ್ರದಲ್ಲಿರು ವ ಅನ್ನದಲ್ಲಿಯೂ ಉಚ್ಛಿಷ್ಟ ದೋಷವಿಲ್ಲವು. ಹಾಗೆ ಫಲಾಹಾರಗಳಲ್ಲಿ ಯೂ ಇಲ್ಲವು.

ಯಮಃ॥ ಆಮ್ರೇಕ್ಷುಖಂಡತಾಂಬೂಲ । ಚರ್ವಣೇಸೋಮಪಾನ
ಕೇ ॥ ವಿಷ್ಣ್ವಂಘ್ರಿತೋಯಪಾನೇಚ । ನಾದ್ಯಂತಾಚಮನಂ

ಸ್ಮೃತಂ | ವಿಷ್ಣುಪಾದೋದ್ಭವಂ ತೀರ್ಥಂ | ಪೀತ್ವಾ ಸಕ್ಷಾಳ ಯೇತ್ಕರಂ || ಕ್ಷಾಳಯೇದ್ಯದಿ ಮೋಹೇನ | ಪಂಚಪಾತಕ ಮಾಪ್ನುಯಾತ್ ... ... ||೧||

ಅರ್ಥ|| ಮಾವು, ಇಕ್ಷುಖಂಡ, ತಾಂಬೂಲ, ಸೋಮಪಾನ ಇವುಗಳಲ್ಲಿಯೂ ವಿಷ್ಣುಪಾದೋದಕದ ಪಾನದಲ್ಲಿಯೂ ಅನ್ಯಂತಾಚಮನವು ಅನವಶ್ಯಕವು. ವಿಷ್ಣುಪಾದೋದಕವನ್ನ ಪಾನಮಾಡಿದನಂತರ ಹಸ್ತಪ್ರಕ್ಷಾಳನ ಮಾಡಬಾರದು. ಯಾವನು ಮೋಹದಿಂದ ಕೈತೊಳೆಯುವನೋ ಅವನು ಪಂಚಮಹಾಪಾತಕವನ್ನು ಹೊಂದುವನು.

ಹಾರೀತಃ|| ಶ್ರೌತಸ್ಮಾರ್ತೇಷು ಗೃಹ್ಯೇಷು | ಕೃತ್ಯೇಷು ವಿಧಿವದ್ಬುಧಃ | ದ್ವಿರಾಚಾಮೇತ್ತು ಸರ್ವತ್ರ | ವಿಣ್ಮೂತ್ರೋತ್ಸರ್ಜನೇ ತ್ರಯಂ ... .. ... ||೨||

ಅರ್ಥ|| ಹಾರೀತರು ಆಚಮನದಲ್ಲಿ ಸ್ವಲ್ಪ ವಿಶೇಷವನ್ನು ಹೇಳುವರು. ಶ್ರೌತಸ್ಮಾರ್ತಾದಿ ಸಕಲ ಕರ್ಮಗಳಲ್ಲಿಯೂ ಆಚಮನದ್ವಯ ಮಾಡತಕ್ಕದ್ದು. ಮಲಮೂತ್ರೋತ್ಸರ್ಜನಗಳಲ್ಲಿ ಮಾತ್ರ ಮೂರು ಆಚಮನವನ್ನ ಮಾಡಬೇಕು.

ಗೌತಮಃ || ವಾ || ನಮುಖ್ಯಾವಿಪ್ರುಷಉಚ್ಛಿಷ್ಟಂಕುರ್ವಂತಿ | ನಚೇದಂಗೇನಿಪತಂತಿ | ಮಂತ್ರಬ್ರಾಹ್ಮಣಮುಚ್ಚಾರಯತೋಯಆಸ್ಯಾದ್ಬಿಂದವಃ | ಶರೀರಉಪಲಭ್ಯಂತೇನತೇಷ್ವಾಚಮನಂ ವಿಹಿತಂ ... ... ||೪||

ಅರ್ಥ|| ಶರೀರದಲ್ಲಿ ಬೀಳದೇ ಇದ್ದರೆ ಬಾಯಿನಿಂದ ಬರುವ ಬಿಂದುಗಳು ಉಚ್ಛಿಷ್ಟ (ಎಂಜಲು)ಗಳಲ್ಲವು. ಮತ್ತು ಮಂತ್ರ ಬ್ರಾಹ್ಮಣ (ವೇದಭಾಗಾ)ದಿಗಳನ್ನು ಉಚ್ಚಾರಣ ಮಾಡುವ ಕಾಲದಲ್ಲಿ ಆಸ್ಯದ್ದೆಸೆಯಿಂದ ಬಿಂದುಗಳು ಶರೀರದಲ್ಲಿ ಬಿದ್ದಾಗ್ಯೂ ಆಚಮನವು ಅನವಶ್ಯಕವು.

## ಅಥ ದಂತಧಾವನವಿಧಿಃ.

ವ್ಯಾಸಃ|| ಪ್ರಕ್ಷಾಳ್ಯಪಾದೌಹಸ್ತೌಚ|ಮುಖಂಚಾದ್ಭಿಸ್ಸಮಾಹಿತಃ||

ದಕ್ಷಿಣಂಬಾಹುಮುಧೃತ್ಯ । ಕೃತ್ವಾಜಾನ್ವಂತರಾತತಃ ‖ ಆಚ
ಮ್ಯಪ್ರಾಙ್ಮುಖಃಪಶ್ಚಾ । ದ್ದಂತಧಾವನಮಾಚರೇತ್ ‖೧‖

ಅರ್ಥ‖ ಕೈಕಾಲುಗಳನ್ನು ತೊಳೆದುಕೊಂಡು ಗಂಡೂಷವನ್ನು ಮಾಡಿ ದನಂತರ ದಕ್ಷಿಣಬಾಹುವನ್ನು ಮಂಡಿಯ ಮಧ್ಯದಲ್ಲಿ ಇಟ್ಟುಕೊಂಡು ಆಚಮನ ಮಾಡಿ ಪೂರ್ವಾಭಿಮುಖನಾಗಿ ಸಮಾಹಿತಚಿತ್ತನಾಗಿ ದಂತ ಧಾವನವನ್ನು ಮಾಡುವದು.

ಅಂಗಿರಾಃ‖ ಆಮ್ರಪುನ್ನಾಗಬಿಲ್ವಾನಾಂ । ಅಪಾಮಾರ್ಗಶಿರೀಷ
ಯೋಃ ‖ ಭಕ್ಷಯೇತ್ಪ್ರಾತರುತ್ಥಾಯ । ವಾಗ್ಯತೋದಂತ
ಧಾವನಂ ‖ ಪ್ರಕ್ಷಾಳ್ಯಭಕ್ಷಯೇತ್ಪೂರ್ವಂ । ಪ್ರಕ್ಷಾಳ್ಯೈವ
ತುಸಂತ್ಯಜೇತ್ ... ... ‖೨‖

ಅರ್ಥ‖ ಮಾವು, ಪುನ್ನಾಗ (ಸುರಗಿ, ಅಥವಾ ಸುರಹೊನ್ನೆ) ಬಿಲ್ವ (ಬೆಲ್ಲಪತ್ರ, ಅಥವಾ ಬಿಲ್ವಪತ್ರಿ) ಉತ್ತರಣೆ, ಶಿರೀಷ (ಬಾಗೆ) ಇವುಗಳ ಕೊನೆಯಿಂದ ಮೌನವನ್ನಾಶ್ರಯಿಸಿ ದಂತಧಾವನ ಮಾಡತಕ್ಕದ್ದು. ದಂತ ಧಾವನ ಪ್ರಾರಂಭದಲ್ಲಿ ದಂತಕಾಷ್ಠವನ್ನ ಚನ್ನಾಗಿ ತೊಳೆದು ದಂತಧಾವನ ಮಾಡಿ ಅನಂತರ ಚೆನ್ನಾಗಿ ತೊಳೆದು ಹೊರಗೆ ಹಾಕಬೇಕು. ಇಲ್ಲಿ ವದನ ಪ್ರವೇಶಮಾತ್ರದಿಂದಲೇ ಉಪಚಾರವಾಗಿ "ಭಕ್ಷಯೇತ್" ಎಂದು ಬರದಿ ರುತ್ತಾರೆಂದು ತಿಳಿಯತಕ್ಕದ್ದು.

ವಿಷ್ಣುಃ‖ ಸುಸೂಕ್ಷ್ಮಂಸೂಕ್ಷ್ಮದಂತಸ್ಯ । ಸಮದಂತಸ್ಯಮಧ್ಯಮಂ ।
ಸ್ಥೂಲಂವಿಷಮದಂತಸ್ಯ । ತ್ರಿವಿಧಂದಂತಧಾವನಂ ‖ ದ್ವಾದಶಾಂ
ಗುಲಕಂವಿಪ್ರೇ । ಕಾಷ್ಠಮಾಹುರ್ಮನೀಷಿಣಃ । ಕ್ಷತ್ರವಿಟ್
ಶೂದ್ರಜಾತೀನಾಂ । ನವಷಟ್ಚತುರಂಗುಲಂ ‖೩‖

ಅರ್ಥ‖ ಸೂಕ್ಷ್ಮವಾದ ದಂತವುಳ್ಳವನು ಸೂಕ್ಷ್ಮವಾದ ದಂತಕಾಷ್ಠ ದಿಂದಲೂ ಮಧ್ಯಮದು ಸ್ಥೂಲವಾದ ದಂತವುಳ್ಳವರು, ಮಧ್ಯಮ ಸ್ಥೂಲವಾ ದ ದಂತಕಾಷ್ಠಗಳಿಂದಲೂ ದಂತಧಾವನ ಮಾಡತಕ್ಕದ್ದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರಿಗೆ ಕ್ರಮವಾಗಿ ಹನ್ನೆರಡು, ಒಂಭತ್ತು, ಆರು, ನಾಲ್ಕು ಅಂಗುಲವುಳ್ಳ ದಂತಕಾಷ್ಠವೇ ಆಗಬೇಕು.

ಕಾತ್ಯಾಯನೋಪಿದಂತಧಾವನಸ್ಯ। ಕಾಷ್ಠಾಭಿಮಂತ್ರಣಮಂತ್ರಂ ದರ್ಶಯತಿ ॥ ಆಯುರ್ಬಲಂಯಶೋವರ್ಚಃ। ಪ್ರಜಾಃಪಶುವ ಸೂನಿಚ। ಬ್ರಹ್ಮಪ್ರಜ್ಞಾಂಚಮೇಧಾಂಚ। ತ್ವನ್ನೋದೇಹಿ ವನಸ್ಪತೇ ... ... ॥೪॥

ಅರ್ಥ॥ ಆಯುಸ್ಸನ್ನೂ, ಬಲವನ್ನೂ, ಕೀರ್ತಿಯನ್ನೂ, ಕಾಂತಿಯ ನ್ನೂ, ಪುತ್ರರನ್ನೂ, ಪಶುಗಳನ್ನೂ, ದ್ರವ್ಯಗಳನ್ನೂ, ಪ್ರಜ್ಞೆಯ ನ್ನೂ, ಬುದ್ಧಿಯನ್ನೂ ನಮ್ಮಗಳಿಗೆ ವನಸ್ಪತಿಯೇ ನೀನು ಕೊಡುವ ನಾಗು ಎಂಬ ದಂತಧಾವನ ಕಾಷ್ಠಾಭಿಮಂತ್ರಣ ಮಂತ್ರವನ್ನು ಕಾತ್ಯಾ ಯನ ಮಹರ್ಷಿಗಳು ಹೇಳುವರು.

ಉಶನಾಃ॥ ನಭಕ್ಷಯೇತ್ಪಾಲಾಶಂ। ಕಾರ್ಪಾಸಂಕಾಶಮೇವಚ॥ ಏತಾನಿಭಕ್ಷಯೇದ್ಯಸ್ತು ಕ್ಷೀಣಪುಣ್ಯಸ್ಸಜಾಯತೇ ॥೫॥

ಅರ್ಥ॥ ಮುತ್ತುಗ, ಹತ್ತಿ, ಕಾಶ (ದರ್ಭೆ ಕಡ್ಡಿ, ಆಂಧ್ರದಲ್ಲಿ, ರೆಳ್ಳು ಕಸುವು ಅನ್ನುವರು.) ಇವುಗಳಲ್ಲಿ ದಂತಧಾವನ ಮಾಡಬಾರದು, ಮಾಡಿ ದ್ದಾದರೆ ಪುಣ್ಯಕ್ಷಯವಾಗುವದು.

ಅಸ್ಯಪ್ರಜಾಪತಿಋಷಿಃ॥ ಛಂದೋನುಷ್ಟುಪ್‌ವನಸ್ಪತಿಃ। ದೇವ ತೇತಿಹೃದಿಸ್ಮೃತ್ವಾ। ಮಂತ್ರಾರಂಭೇವದೇದ್ಬುಧಃ ॥೬॥

ಅರ್ಥ॥ ಈ ಆಯುರ್ಬಲಂ ಎಂಬ ಅಭಿಮಂತ್ರಣ ಮಂತ್ರಕ್ಕೆ ಮಂ ತ್ರಾರಂಭದಲ್ಲಿ ಋಷಿ ಛಂದೋದೇವತೆಗಳನ್ನು ಹೃದಯದಲ್ಲಿ ಸ್ಮರಿಸಿ ಹೇಳ ತಕ್ಕದ್ದು. ಈ ಮಂತ್ರಕ್ಕೆ ಪ್ರಜಾಪತಿಯು ಋಷಿಯು ಅನುಷ್ಟುಪ್ ಛಂದಸ್ಸು, ವನಸ್ಪತಿಯು ದೇವತೆಯು.

ಅಭಿಮಂತ್ರ್ಯಹೃತಾಂಶುಚಿಃ। ಮಂತ್ರೇಣಾನೇನವೈದ್ವಿಜಃ। ಅತಊರ್ಧ್ವಂಕ್ರಮೇಣೈವ। ಧಾವಯೇತ್‌ಶಾಖಯಾತಯಾ। ವಾಮಭಾಗಂಸಮಾರಭ್ಯ। ಪ್ರಾದಕ್ಷಿಣ್ಯಾಕ್ರಮೇಣತು। ಶಾ ಖಾಂವಿದಾರ್ಯತಸ್ಯೈವ। ಭಾಗೇನೈಕೇನಮಾರ್ಜಯೇತ್॥ ಜಿಹ್ವಾಂತತೋದ್ವಿತೀಯೇನ। ಗೃಹಸ್ಥಶ್ಚಯತಿಸ್ತಥಾ। ಪ್ರ ಕ್ಷಾಳ್ಯದಂತಕಾಷ್ಠಂತು। ಶುಚಾದೇಶೇತತಃತ್ಯಜೇತ್ ॥೭॥

ಅರ್ಥ॥ ಪೂರ್ವೋಕ್ತವಾದ ಮಂತ್ರಾಭಿಮಂತ್ರಣದಿಂದ ತರಲ್ಪಟ್ಟ ಶಾಖೆಯನ್ನು ಅದೇಮಂತ್ರದಿಂದ ಅಭಿಮಂತ್ರಣ ಮಾಡಿ ಅನಂತರ ಕ್ರಮವಾಗಿ ವಾಮಭಾಗಾರಭ್ಯ ಪ್ರದಕ್ಷಿಣವಾಗಿ ದಂತಧಾವನ ಮಾಡಿ ದಂತದಿಂದಲೇ ಶಾಖೆಯನ್ನು ಎರಡುಪಾಲು ಮಾಡಿ ಒಂದುಭಾಗದಿಂದ ದಂತಮಾರ್ಜನವನ್ನೂ, ಇನ್ನೊಂದು ಭಾಗದಿಂದ ಜಿಹ್ವಾನಿರ್ಲೇಖನವನ್ನೂ, (ನಾಲಿಗೆಯನ್ನು ಹೆರಿಯುವದು) ಮಾಡಿ ಎರಡು ಭಾಗಗಳನ್ನೂ ತೊಳೆದು ಶುದ್ಧವಾದ ಪ್ರದೇಶದಲ್ಲಿ ಹಾಕತಕ್ಕದ್ದು.

ಕಾತ್ಯಾಯನಃ॥ ಪೂರ್ವಾಮುಖೋಧೃತಿಂವಿಂದ್ಯಾತ್ । ಶರೀರಾರೋಗ್ಯಮೇವಚ । ದಕ್ಷಿಣೇಚತಥಾಕ್ರೌರ್ಯಂ । ಪಶ್ಚಿಮೇತು ಪರಾಜಯಂ । ಉತ್ತರೇತುಗವಾಂನಾಶಂ । ಸ್ತ್ರೀಣಾಂಪರಿಜನಸ್ಯಚ । ಪೂರ್ವೋತ್ತರೇತುದಿಗ್ಭಾಗೇ । ಸರ್ವಾನ್ಕಾಮಾನವಾಪ್ನುಯಾತ್ ... ... ॥೭॥

ಅರ್ಥ॥ ದಂತಧಾವನವನ್ನ ಪೂರ್ವಾಭಿಮುಖನಾಗಿ ಮಾಡಿದರೆ ಧೈರ್ಯವನ್ನೂ, ಶರೀರಾರೋಗ್ಯವನ್ನೂ ಹೊಂದುವನು. ದಕ್ಷಿಣಾಭಿಮುಖನಾಗಿ ಮಾಡಿದರೆ ಕ್ರೌರ್ಯವನ್ನು ಹೊಂದುವನು. ಪಶ್ಚಿಮಾಭಿಮುಖನಾಗಿ ಮಾಡಿದರೆ ಪರಾಜಯವನ್ನು ಹೊಂದುವನು. ಉತ್ತರಾಭಿಮುಖನಾಗಿ ಮಾಡಿದರೆ ಸ್ತ್ರೀಪರಿಜನ ಗೋನಾಶವಾಗುವದು. ಈಶಾನ್ಯಾಭಿಮುಖನಾಗಿ ಮಾಡಿದರೆ ಸಕಲ ಇಷ್ಟಾರ್ಥಗಳೂ ಕೈಕೂಡುವವು.

ವೃದ್ಧಯಾಜ್ಞವಲ್ಕ್ಯಃ॥ ಇಷ್ಟಕಾಲೋಷ್ಟಪಾಷಾಣೈ ರಿತರಾಂಗುಳಿಭಿಸ್ತಥಾ ॥ ಮುಕ್ತ್ವಾಚಾನಾಮಿಕಾಂಗುಷ್ಠೌ ವರ್ಜಯೇದ್ದಂತಧಾವನಂ ॥ ... ... ॥೮॥

ಅರ್ಥ॥ ಇಟ್ಟಿಗೆಯಿಂದಲೂ, ಮಣ್ಣುಹೆಂಟೆಯಿಂದಲೂ, ಕಲ್ಲಿನಿಂದಲೂ, ಅನಾಮಿಕಾ ಅಂಗುಷ್ಠಗಳನ್ನು ವಿನಹಾ ಇತರ ಬೆರಳುಗಳಿಂದಲೂ ದಂತಧಾವನೆ ಮಾಡಬಾರದು.

ಪೈಠೀನಸಿಃ॥ ತೃಣಪರ್ಣೋದಕೇನಅಂಗುಳನಾವಾದಂತಾನ್ಧಾವಯೇತ್ ॥ ಪ್ರದೇಶಿನೀವರ್ಜಂ॥ ವ್ಯಾ॥ ಅಂಗುಳ್ಯಾಅಂಗುಷ್ಠಾನಾಮಿಕಾಭ್ಯಾಂ ॥ ... ... ॥೯॥

ಅರ್ಥ॥ ಮಾವು, ನೇರ್ಲ್, ಇತ್ಯಾದಿ ಅನಿಷಿದ್ಧವಾದ ಎಲೆಗಳಿಂದಲೂ, ಹುಲ್ಲಿನಿಂದಲೂ, ಅಂಗುಷ್ಠಾನಾಮಿಕಾ ಬೆರಳುಗಳಿಂದಲೂ, ದಂತಧಾವನ ಮಾಡತಕ್ಕದ್ದು.

ವ್ಯಾಸಃ॥ ಪ್ರತಿಪತ್ಪರ್ವಷಷ್ಠೀಷು । ನವಮ್ಯಾಂದಂತಧಾವನಂ ।
ಪರ್ಣೈರನ್ಯತ್ರಕಾಷ್ಠೈಸ್ತು ।ಜಿಹ್ವೋಲ್ಲೇಖಃಸದೈವತು ॥೧೦॥

ಅರ್ಥ॥ ಪಾಡ್ಯ ಪಂಚಪರ್ವಗಳು (ಕೃಷ್ಣಾಷ್ಟಮಿ, ಚತುರ್ದಶೀ, ಅಮಾವಾಸ್ಯಾ, ಪೂರ್ಣಿಮಾ, ಸಂಕ್ರಮಣಗಳು) ಷಷ್ಠೀ, ನವಮಿ, ಈ ತಿಥಿಗಳಲ್ಲಿ ಎಲೆಗಳಿಂದಲೇ ದಂತಧಾವನ ಮಾಡಬೇಕು. ಇತರವಾದ ಅನಿಷಿದ್ಧ ದಿವಸಗಳಲ್ಲಿ ಕಾಷ್ಠದಿಂದ ಮಾಡತಕ್ಕದ್ದು. ಜಿಹ್ವಾನಿರ್ಲೇಪವನ್ನ (ನಾಲಿಗೆ ಹೆರಿಯುವದು) ಸರ್ವಕಾಲದಲ್ಲಿಯೂ ಕಾಷ್ಠದಿಂದಲೇ ಮಾಡಬಹುದು.

ಅಂಗಾರವಾಲುಕಾಪರ್ಣ । ತೃಣವಸ್ತ್ರನಖಾದಿಭಿಃ । ನಕುರ್ಯಾದ್ದಂ
ತಧಾವಂತು । ಭಸ್ಮಲೋಷ್ಟೇಷ್ಟಕಾದಿಭಿಃ ॥೧೧॥

ಅರ್ಥ॥ ಆರಿದ ಕೆಂಡದಿಂದಲೂ, (ಕರಿಯಿಂದ) ಮಳಲಿನಿಂದಲೂ, ನಿಷಿದ್ಧವಾದ ಎಲೆ ಹುಲ್ಲುಗಳಿಂದಲೂ, ಪಲಾಶ ಅಶ್ವತ್ಥಾದಿ ಎಲೆಗಳಿಂದಲೂ, ದರ್ಭೆಯೇ ಮೊದಲಾದ ಹುಲ್ಲಿನಿಂದಲೂ, ವಸ್ತ್ರದಿಂದಲೂ, ಉಗುರಿನಿಂದಲೂ, ಬೂದಿಯಿಂದಲೂ, ಮಣ್ಣಿನ ಹೆಂಟೆಯಿಂದಲೂ, ಇಟ್ಟಿಗೆಯಿಂದಲೂ ದಂತಧಾವನ ಮಾಡಬಾರದು.

ಅಲಾಭೇದಂತಕಾಷ್ಠಾನಾಂ । ಪ್ರತಿಷಿದ್ಧದಿನೇಷ್ವಪಿ । ಅಪಾಂದ್ವಾ
ದಶಗಂಡೂಷೈಃ । ಮುಖಶುದ್ಧಿರ್ಭವಿಷ್ಯತಿ ॥೧೨॥

ಅರ್ಥ। ದಂತಕಾಷ್ಠಗಳು ಸಿಕ್ಕದಿದ್ದರೆ ಅನಿಷಿದ್ಧವಾದ ದಿವಸಗಳಲ್ಲಿಯೂ ಹನ್ನೆರಡು ಗಂಡೂಷದಿಂದ ಶುದ್ಧನಾಗುವನು.

ಭರದ್ವಾಜಃ॥ ದಕ್ಷಿಣಾಭಿಮುಖಸ್ತಿಷ್ಠನ್ । ಶಂಖಾನಸ್ಥವಿಡಙ್ಮು
ಖಃ । ಗಚ್ಛನ್‌ಪ್ರತ್ಯಙ್ಮುಖೋಭೂತ್ವಾ । ನಾಚರೇದ್ದಂತಧಾವ
ನಂ ॥ ಕೃಷ್ಣಚರ್ಮಜಗೋಃಕೃತ್ವಾ । ಯಜ್ಞವೃಕ್ಷತ್ವಚೇ
ಷುಚ। ಉಪವಿಶ್ಯಸಕುರ್ವೀತ। ವಕ್ತ್ರಶುದ್ಧಿಮನಾಸನಃ॥೧೪॥

ಅರ್ಥ॥ ದಕ್ಷಿಣಾಭಿಮುಖನಾಗಿಯೂ ಮಲಗಿಕೊಂಡು ಈಶಾನ್ಯವನ್ನ ವಿನಾ ವಿದಿಜ್ಮುಖನಾಗಿಯೂ, ನಡಿಯುವವನಾಗಿಯೂ, ಪಶ್ಚಿಮಾಭಿಮುಖನಾಗಿಯೂ, ದಂತಧಾವನ ಮಾಡಬಾರದು.

ಕೃಷ್ಣಾಜಿನ ವ್ಯಾಘ್ರಾಜಿನಗಳ ಮೇಲೆ ಕುಳಿತುಕೊಂಡು ಹಾಗೆ ಯಾಜ್ಞಿಕ ವೃಕ್ಷಾದಿಗಳು ಹುಲ್ಲುಗಳು ಇವುಗಳ ಮೇಲೆ ಕುಳಿತುಕೊಂಡು ದಂತಧಾವನ ಮಾಡಬಾರದು. ಆಸನವಿಲ್ಲದೇನೇ ಮಾಡಬೇಕೆಂದು ತಾತ್ಪರ್ಯವು.

ಗಾರ್ಗ್ಯಃ॥ ಶನ್ಯರ್ಕಶುಕ್ರವಾರೇಷು । ಕುಜಾಹೇವ್ರತವಾಸರೇ ।
ಜನ್ಮಭೇಶ್ರಾದ್ಧದಿವಸೇದಂತಕಾಷ್ಠಂವಿವರ್ಜಯೇತ್ ॥೧೪॥

ಅರ್ಥ॥ ಶನಿವಾರ, ಭಾನುವಾರ, ಶುಕ್ರವಾರ, ಮಂಗಳವಾರಗಳಲ್ಲಿಯೂ, ಜನ್ಮನಕ್ಷತ್ರದಲ್ಲಿಯೂ, ಶ್ರಾದ್ಧದಿನದಲ್ಲಿಯೂ, ವ್ರತೋಪವಾಸಾದಿ ದಿನಗಳಲ್ಲಿಯೂ ಕಾಷ್ಠದಿಂದ ದಂತಧಾವನ ಮಾಡಬಾರದು.

ಶಾಂಡಿಲ್ಯಃ॥ ಬಾಹೂಜಾನ್ವಂತರಾಕೃತ್ವಾಕುಕ್ಕುಟಾಸನಸಂಸ್ಥಿತಃ।
ತರ್ಪಣಾಚಮನೋಲ್ಲೇಖ್ಯದಂತಶುದ್ಧೀಸ್ಸಮಾಚರೇತ್ ।೧೫॥

ಅರ್ಥ॥ ಎರಡು ತೋಳುಗಳನ್ನು ಮಂಡಿಯ ಒಳಭಾಗದಲ್ಲಿಟ್ಟುಕೊಂಡು ಕುಕ್ಕುಟಾಸನದಲ್ಲಿ (ಕುಂಗುರುಗಾಲು) ಕೂತು ತರ್ಪಣಾಚಮನ, ಉಲ್ಲೇಖನ, ದಂತಧಾವನಗಳನ್ನು ಮಾಡಬೇಕು.

ಭರದ್ವಾಜಃ॥ ಯಾವಂತೋನಿಯಮಾಃಪ್ರೋಕ್ತಾಃ । ದ್ವಿಜಶ್ರೇಷ್ಠಸ್ಯಭುಂಜತಃ । ಪ್ರೇಕ್ಷಾಪ್ರೇಕ್ಷ್ಯೇಷುಕರ್ತವ್ಯಾ । ದಂತಧಾವನಕರ್ಮಣಿ । ಮುಖಶುದ್ಧಿಂಪ್ರಯತ್ನೇನ । ಕೃತ್ವೈವಾಚಾರವಿದ್ದ್ವಿಜಃ । ಪ್ರಾತಸ್ಸಂಧ್ಯಾಮುಪಾಸೀತ । ತಾಂವಿನಾನ ಶುಚಿರ್ಭವೇತ್ ... ... ॥೧೬॥

ಅರ್ಥ॥ ಭೋಜನಕಾಲದಲ್ಲಿ, ಇತರ ದರ್ಶನಾದಿ ವಿಷಯದಲ್ಲಿ, ಬ್ರಾಹ್ಮಣನಿಗೆ ಎಷ್ಟು ನಿಯಮಗಳು ಹೇಳಲ್ಪಟ್ಟಿರುವವೊ, ದಂತಧಾವನದಲ್ಲಿಯೂ, ಆ ನಿಯಮಗಳು ಹೇಳಲ್ಪಟ್ಟಿರುವ ಕಾರಣ ಪ್ರಯತ್ನದಿಂದಲಾದರೂ ಮಾಡಿಯೇ ಅನಂತರ ಪ್ರಾತಸ್ಸಂಧ್ಯಾದಿಗಳನ್ನ ಮಾಡಬೇಕು. ಅನ್ಯಥಾ ಶುಚಿಯಾಗಲಾರನು.

## ಸಂಪ್ರದಾಯರೀತ್ಯಾ ಇನ್ನು ದಂತಧಾವನ ಪ್ರಯೋಗವು ಬರಿಯಲ್ಪಡುವದು.

ಕೈಕಾಲುಗಳನ್ನು ತೊಳೆದುಕೊಂಡು ಆಚಮನಪೂರ್ವಕ ವಸ್ತ್ರದಿಂದ ಶಿರಸ್ಸನ್ನ ಆಚ್ಛಾದನ ಮಾಡಿಕೊಂಡು ಪೂರ್ವಾಭಿಮುಖನಾಗಿ ಅಥವಾ ಈಶಾನ್ಯಾಭಿಮುಖನಾಗಿ ಕುಕ್ಕುಟಾಸನದಲ್ಲಿ ಕುಳಿತುಕೊಂಡು ಮಂಡಿಗಳ ಒಳಭಾಗದಲ್ಲಿ ಕೈಯುಳ್ಳವನಾಗಿ, ಉತ್ತರಣೆ, ಬೇವು, ನೇರ್ಲ, ಮಾವು, ಇದೇ ಮೊದಲಾದ ಮುಳ್ಳುಗಳುಳ್ಳ ವೃಕ್ಷಗಳಲ್ಲಿ ಹನ್ನೆರಡು ಅಂಗುಲ ಪ್ರಮಾಣವುಳ್ಳ ಕನಿಷ್ಠಿಕಾ ಬೆರಳಿನ ಪ್ರಮಾಣದಿಂದ ಕೂಡಿರುವ ದಂತಕಾಷ್ಠದಿಂದ (ಕೊನೆಯಿಂದ) ಇಂತಹ ಕಾಷ್ಠವು ಶಿಕ್ಕದಿದ್ದರೂ ನಿಷೇಧವಾಗಿ ಮುಂದೆ ಹೇಳಲ್ಪಡುವ ದಿವಸಗಳಲ್ಲಿಯೂ, ಆಯಾಯ ವೃಕ್ಷಗಳ ಎಲೆಗಳಿಂದ ಕೆಳಭಾಗದಲ್ಲಿ ಎಡಭಾಗವನ್ನ ಆರಂಭಿಸಿ ಪ್ರದಕ್ಷಿಣವಾಗಿ

ಶ್ಲೋ॥ ಆಯುರ್ಬಲಂಯಶೋವರ್ಚಃ । ಪ್ರಜಾಃಪಶುವಸೂನಿಚ ।
ಬ್ರಹ್ಮಪ್ರಜ್ಞಾಂಚಮೇಧಾಂಚ! ತ್ವನ್ನೋದೇಹಿವನಸ್ಪತೇ॥

ಎಂಬ ಈ ಮಂತ್ರದಿಂದ ದಂತಧಾವನವನ್ನ ಮಾಡಿ ದಂತದಿಂದ ಕಾಷ್ಠವನ್ನ ಎರಡಾಗಿ ಪೊಡದು ಒಂದು ಭಾಗದಿಂದ ಜಿಹ್ವಾನಿರ್ಲೇಖನವನ್ನ (ನಾಲಿಗೆ ಹೆರಿಯುವದು) ಮಾಡಿ ಮತ್ತೊಂದು ಭಾಗದಿಂದ ದಂತಗಳನ್ನು ತೊಡೆದು ಎರಡು ಭಾಗವನ್ನೂ ಚನ್ನಾಗಿ ತೊಳೆದು ದೂರದಲ್ಲಿ ಶುದ್ಧವಾದ ಪ್ರದೇಶದಲ್ಲಿ ಹಾಕಿ ಹದಿನಾರು ಗಂಡೂಷಗಳನ್ನು ಮಾಡಿ ದ್ವಿರಾವೃತ್ತಿ ಆಚಮನ ಮಾಡತಕ್ಕದ್ದು. ಶ್ರಾದ್ಧದಿನ, ಚತುರ್ದಶ್ಯಷ್ಟಮಿಾ, ನವಮಿಾ, ಪ್ರತಿಪತ್-ಏಕಾದಶಿ, ಪೂರ್ಣಿಮಾಸ್ಯಾ, ಅಮಾವಾಸ್ಯಾ, ಸಂಕ್ರಮಣ, ವ್ಯತೀಪಾತ-ಮಂಗಳವಾರ, ಶುಕ್ರವಾರ, ಶನಿವಾರ, ಭಾನುವಾರ, ಜನ್ಮನಕ್ಷತ್ರವೇ ಮೊದಲಾದ ನಿಷಿದ್ಧದಿನಗಳಲ್ಲಿಯೂ, ಕಾಷ್ಠದಿಂದ ದಂತಧಾವನ ಮಾಡಬಾರದು. ಆ ನಿಷಿದ್ಧ ದಿನಗಳಲ್ಲಿಯೂ, ತೃಣಗಳಿಂದಲೂ, ಎಲೆಗಳಿಂದಲೂ ದಂತಧಾವನ ಮಾಡಬಹುದು.

ಶ್ರಾದ್ಧದಿನದಲ್ಲಿ ತೃಣಪರ್ಣಗಳಿಂದಲೂ ಮಾಡಬಾರದು. ಶ್ರಾದ್ಧದಿನದಲ್ಲಿಯೂ, ತೃಣಪರ್ಣಗಳು ಶಿಕ್ಕದ ದಿನಗಳಲ್ಲಿಯೂ, ಹನ್ನೆರಡು ಗಂಡೂಷಗಳನ್ನು ಮಾಡತಕ್ಕದ್ದು. ಗಂಡೂಷ ಸಮಯದಲ್ಲಿ ತರ್ಜನೀ ಬೆರಳಿನಿಂದ ದಂತಶೋಧನೆಯನ್ನು ಮಾಡಬಾರದು. ಗಂಡೂಷೋದಕವನ್ನ ಪಾನ ಮಾಡಬಾರದು.

ಸ್ಮೃತಿರತ್ನಾಕರೇ॥ ಗುಣಾದಶಸ್ನಾನಪರಸ್ಯಪುಂಸೋರೂಪಂಚತೇ
ಜಶ್ಚಯಶಶ್ಚಶೌಚಂ॥ಆಯುಷ್ಯಮಾರೋಗ್ಯಮಲೋಲುಪತ್ವಂ
ದುಸ್ಸ್ವಪ್ನನಾಶಶ್ಚತಪಶ್ಚಮೇಧಾ ... ॥೫॥

ಅರ್ಥ॥ ಪ್ರಾತಸ್ಸ್ನಾನವಂ ನಿಯತವಾಗಿ ಆಚರಿಸುವವನಿಗೆ ರೂಪವು, ತೇಜಸ್ಸು, ಕೀರ್ತಿಯು, ಪರಿಶುದ್ಧತ್ವವು, ದೀರ್ಘವಾದ ಆಯುಸ್ಸು, ದೇಹಾರೋಗ್ಯವು, ಸ್ಥಿರಬುದ್ಧಿಯು, ದುಸ್ಸ್ವಪ್ನ ದೋಷನಾಶವು, ತಪಸ್ಸು, ಬುದ್ಧಿಯೂ ಎಂಬ ಹತ್ತು ಗುಣಗಳು ಸಂಭವಿಸುವವು.

ಸ್ನಾನಮೂಲಾಃಕ್ರಿಯಾಸ್ಸರ್ವಾಃಶ್ರುತಿಸ್ಮೃತ್ಯುದಿತಾನೃಣಾಂ।
ತಸ್ಮಾತ್ಸ್ನಾನಂನಿಷೇವೇತಶ್ರೀಪುಷ್ಟ್ಯಾರೋಗ್ಯವರ್ಧನಂ॥೬॥

ಅರ್ಥ॥ ಶ್ರೌತಸ್ಮಾರ್ತಾದಿ ಸಕಲ ಕರ್ಮಗಳೂ ಸ್ನಾನಮೂಲಗಳಾದ ಪ್ರಯುಕ್ತ, ಐಶ್ವರ್ಯ, ದೇಹಪುಷ್ಟಿ ಆರೋಗ್ಯವರ್ಧಕವಾದ ಪ್ರಾತಸ್ಸ್ನಾನವನ್ನು ಅವಶ್ಯಕ ಮಾಡಬೇಕು.

ಸ್ಮೃತಿರತ್ನಾಕರೇ॥ ಪ್ರಾತಸ್ಸ್ನಾನಂಪ್ರಶಂಸಂತಿದೃಷ್ಟಾದೃಷ್ಟಕ
ರಂಹಿತತ್ ॥ ಸರ್ವಮರ್ಹತಿಶುದ್ಧಾತ್ಮಾಪ್ರಾತಸ್ಸ್ನಾಯೀಜ
ಪಾದಿಕಂ ... ... ।೭॥

ಅರ್ಥ॥ ಪ್ರಾತಸ್ಸ್ನಾನವು ದೃಷ್ಟಾದೃಷ್ಟ ಸಕಲ ಫಲಪ್ರದವೆಂದು ಋಷಿಗಳು ಶ್ಲಾಘಿಸುವರು, ಪ್ರಾತಸ್ಸ್ನಾನದಿಂದ ಶುದ್ಧನಾದವನು ಜಪಾದಿಗಳನ್ನು ಆಚರಿಸಲರ್ಹನಾಗುವನು.

## ಅಥ ಸ್ನಾನಾರ್ಹ ಜಲಾನಿ.

ವಿಷ್ಣುಃ॥ ಪಾ॥ ಉದ್ಧೃತಾತ್ಪುಣ್ಯಂಭೂಮಿಷ್ಠಮುದಕಂತಸ್ಮಾನ್ನಾ
ದೇಯಂ।ತಸ್ಮಾದಪಿಸಾಧುಪರಿಗೃಹೀತಂಸರ್ವತಏವಗಾಂಗಂ ॥೧॥

ಅರ್ಥ॥ ಭಾವಿಯೇ ಮೊದಲಾದ ಜಲಾಧಾರಗಳಿಂದ ಎತ್ತಲ್ಪಡುವ ಉದಕಕ್ಕಿಂತಲೂ, ಭೂಮಿಯಲ್ಲಿರುವ ಉದಕವು ಶ್ರೇಷ್ಠವು. ಅದಕ್ಕಿಂತಲೂ ನದೀಜಲವು ಶ್ರೇಷ್ಠವು, ತದಪೇಕ್ಷೆಯೂ ಶಿಷ್ಟಪರಿಗೃಹೀತವಾದ ತೀರ್ಥವು ಶ್ರೇಷ್ಠವಾದುದು, ಸರ್ವಾಪೇಕ್ಷೆಯೂ ಗಂಗೋದಕವು ಶ್ರೇಷ್ಠವಾದದ್ದು.

ಸ್ಕಾಂದೇ॥ ಯತ್ರಭಾಗವತಾಸ್ಸ್ನಾನಂಕುರ್ವಂತಿವಿಮಲಾಶಯಾಃ । ತತ್ತೀರ್ಥಮಧಿಕಂವಿದ್ಧಿಸರ್ವಪಾಪಪ್ರಣಾಶನಂ ॥೨॥

ಅರ್ಥ॥ ಯಾವ ತೀರ್ಥದಲ್ಲಿ ಭಗವದ್ಭಕ್ತರುಗಳು ನಿರ್ಮಲವಾದ ಮನಸ್ಸುಳ್ಳವರಾಗಿ ಸ್ನಾನವಂ ಮಾಡುವರೋ, ಆ ತೀರ್ಥವನ್ನು ಸರ್ವಪಾಪ ಪ್ರಣಾಶಕವೆಂದೂ ಶ್ರೇಷ್ಠವಾದುದೆಂದೂ ತಿಳಿಯುತಕ್ಕದ್ದು.

ಅಶ್ವತ್ಥಸ್ತವೇ॥ ಅಶ್ವತ್ಥಸ್ಯಜಲೇಯತ್ರಛಾಯಾಭವತಿಕುತ್ರಚಿತ್ ॥ ತತ್ಪ್ರಯಾಗಸಮಂತೀರ್ಥಂತತ್ರಸನ್ನಿಹಿತೋಹರಿಃ॥೩॥

ಅರ್ಥ॥ ಅಶ್ವತ್ಥದ ನೆರಳು ಯಾವ ತೀರ್ಥದಲ್ಲಿ ಬೀಳುವದೋ ಅಲ್ಲಿ ಭಗವಂತನು ಸನ್ನಿಹಿತನೆಂದೂ, ಆ ತೀರ್ಥವು ಪ್ರಯಾಗಕ್ಕೆ ಸಮಾನವಾದುದೆಂದೂ ಅರಿಯುತಕ್ಕದ್ದು.

ಪಾದ್ಮೇ॥ ಜಲಂಶುದ್ಧಮಶುದ್ಧಂವಾವಿಷ್ಣ್ವಾಸ್ತಸಮೀಪತಃ । ವಿಷ್ಣುಗಂಗಾಸಮಂತೋಯಂಮಹಾಪಾತಕನಾಶನಂ ॥೪॥

ಅರ್ಥ॥ ವಿಷ್ಣ್ವಾಲಯದ ಸಮೀಪದಲ್ಲಿರುವ ತೀರ್ಥವು ಗಂಗಾತೀರ್ಥಕ್ಕೆ ಸಮಾನವಾದದ್ದು. ಶುದ್ಧಾಶುದ್ಧ ವಿಚಾರಾರ್ಹವಾದುದಲ್ಲ, ಮಹಾಪಾತಕಾದಿಗಳನ್ನು ಹೋಗಲಾಡಿಸುವುದು.

ಮನುಃ॥ ಪರಕೀಯನಿಪಾನೇಷುನಸ್ನಾಯಾತ್ಕದಾಚನ ॥ ನಿಪಾನಕರ್ತುಸ್ಸ್ನಾತ್ವಾತುದುಷ್ಕೃತಾಂಶೇನಲಿಪ್ಯತೇ ॥೫॥

ಅರ್ಥ॥ ನದ್ಯಾದಿಗಳು ಇಲ್ಲದಿರತಕ್ಕ ಸಂಭವದಲ್ಲಿಯೂ, ಪತಿತಾದಿಗಳಿಂದ ಕಟ್ಟಿಸಲ್ಪಟ್ಟ ವಾಪೀಕೂಪಾದಿಗಳಲ್ಲಿ ಸ್ನಾನ ಮಾಡಬಾರದು. ಸ್ನಾನಮಾಡಿದ್ದಾದರೆ ಕಟ್ಟಿಸಿದವನ ದುಷ್ಕೃತ್ಯಕ್ಕೆ ಭಾಗಿಯಾಗುವನು.

ಮಾರ್ಕಂಡೇಯಃ॥ ಪುರಾಣಾನಾಂನರೇಂದ್ರಾಣಾಂಋಷೀಣಾಂಚಮಹಾತ್ಮನಾಂ । ಸುನ್ನಂಕೂಪತಟಾಕೇಷು ದೇವತಾನಾಂಸಮಾಚರೇತ್॥ ... ... ॥೬॥

ಅರ್ಥ॥ ನದಿಯೇ ಮೊದಲಾದ ಪುಣ್ಯತೀರ್ಥಗಳು ಇಲ್ಲದಿರುವ ಸಂದರ್ಭ, ಪೂರ್ವಿಕರಾದ ರಾಜರುಗಳಿಂದಲೂ, ಋಷಿಗಳಿಂದಲೂ, ಮಹಾ

ನುಭಾವರಾದ ಇತರರಿಂದಲೂ ಕಟ್ಟಲ್ಪಟ್ಟ ಜಲಾಧಾರಗಳಲ್ಲಿಯೂ. ದೇವಖಾತ(ಪುಷ್ಕರಣಿ) ಗಳಲ್ಲಿಯೂ ಸ್ನಾನ ಮಾಡಬಹುದು.

ಶೌನಕಃ॥ ವಾಪೀಕೂಪತಟಾಕೇಷು ಯದಿಸ್ನಾಯಾತ್ಕಥಂಚನ ।
ಉದ್ಧೃತ್ಯಮೃತ್ತಿಕಾಪಿಂಡಾನ್ ದಶಪಂಚಾಥವಾಕ್ಷಿಪೇತ್ ॥ ಅನುದ್ಧೃತ್ಯತುಯಸ್ಸ್ನಾಯಾತ್ಪರಕೀಯೇಜಲಾಶಯೇ । ವೃಥಾಭವತಿತತ್ಸ್ನಾನಂಕರ್ತುರ್ಪಾಪೇನಲಿಪ್ಯತೆ । ಅತ್ರವಿಶೇಷಃ ॥
ಅನುತ್ಸೃಷ್ಟೇಷುನಸ್ನಾಯಾತ್ತಥೈವಾಸಂಸ್ಕೃತೇಷುಚ ॥೭॥

ಅರ್ಥ॥ ಸ್ನಾನಾರ್ಹವಾದ ತೀರ್ಥಾಭಾವದಿಂದ ಪರಕೀಯವಾದ ಭಾವಿ ಮೊದಲಾದುವುಗಳಲ್ಲಿ ಸ್ನಾನ ಮಾಡಲು ಅವಶ್ಯಕ ಬಂದಲ್ಲಿ ನೀರೊಳಗಿನಿಂದ ೫ ಅಥವಾ ೧೦ ಮುಷ್ಟಿ ಮಣ್ಣನ್ನು ಹೊರಗೆ ಹಾಕಿ ಸ್ನಾನ ಮಾಡತಕ್ಕದ್ದು. ಹಾಗಿಲ್ಲದೆ ಮಾಡಲ್ಪಟ್ಟ ಸ್ನಾನವು ವ್ಯರ್ಥವಾಗುವುದು. ಅಲ್ಲದೇ ಜಲಾಧಾರ ಕರ್ತೃವಿನ ಪಾಪದಿಂದಲೂ ಲಿಪ್ತನಾಗುವನು. ಮತ್ತೊಂದು ವಿಶೇಷವು—ಮಹಾತ್ಮರುಗಳಿಂದ ಸಪ್ರೋಕ್ಷಣವಾಗಿ ಕಟ್ಟಲ್ಪಟ್ಟು ಪ್ರತಿಷ್ಠಿತವಾಗಿರುವ ವಾಪೀಕೂಪಾ (ಕೆರೆ, ಭಾವಿ) ದಿಗಳಲ್ಲಿ ಯಾವದೋಷವೂ ಇಲ್ಲವು. ನೀರೊಳಗಿನ ಮಣ್ಣನ್ನು ಹೊರಗೆ ತೆಗೆದು ಹಾಕಬೇಕಾದುದಿಲ್ಲವು.

ಯಮಃ॥ ಆದಿತ್ಯಕಿರಣೈಃಪೂತಂ ಪುನಃಪೂತಂತುವಹ್ನಿನಾ ।
ಆಮ್ನಾತಮಾತುರಸ್ನಾನೇಪ್ರಶಸ್ತಂತುಶೃತೋದಕಂ ॥೮॥

ಅರ್ಥ॥ ಸೂರ್ಯಕಿರಣಗಳಿಂದ ಶುದ್ಧವಾಗಿ ಪುನಃ ಅಗ್ನಿಜ್ವಾಲೆಯಿಂದ ಪರಿಶುದ್ಧವಾದ ಉಷ್ಣೋದಕದಲ್ಲಿ ರೋಗಿಗಳಿಗೆ ಸ್ನಾನವು ಪ್ರಶಸ್ತವಾಗಿರುವದು.

ಶ್ಲೋ॥ ಪಾಂಚರಾತ್ರರಕ್ಷಾಯಾಂನಿಗಮಾಂತಗುರುವರ್ಯೈಃ । ಶೀತೋದಕಸ್ನಾನಾಸಮರ್ಥಸ್ಯಉಷ್ಣೋದಕಸ್ನಾನಂ । ತಚ್ಚಾನುಪಹತಸ್ಯಅಪ್ರತಿಷಿದ್ಧದಿವಸೇಷ್ವೇವ ... ॥೯॥

ಅರ್ಥ॥ ಶೀತೋದಕದಲ್ಲಿ ಸ್ನಾನಮಾಡಲು ಶಕ್ತಿ ಇಲ್ಲದವನು ಉಷ್ಣೋದಕದಲ್ಲಿ ಸ್ನಾನಮಾಡಬಹುದು. ಸ್ತ್ರೀಸಂಗಾದ್ಯುಪ ಘಾತಗಳಲ್ಲಿ

ಯೂ, ನಿಷಿದ್ಧ ದಿವಸಗಳಲ್ಲಿಯೂ ಉಷ್ಣೋದಕ ಸ್ನಾನವಂ ಮಾಡ ಬಾರದು.

ವೃದ್ಧಮನುಃ॥ ಮೃತೇಜನ್ಮನಿಸಂಕ್ರಾಂತ್ಯಾಂಶ್ರಾದ್ಧೇಜನ್ಮದಿನೇ
ತಥಾ। ಅಸ್ಪೃಶ್ಯಸ್ಪರ್ಶನೇಚೈವನಸ್ನಾಯಾದುಷ್ಣವಾರಿಣಾ॥
ಸಂಕ್ರಾಂತ್ಯಾಂಭಾನುವಾರೇಚಸಪ್ತಮ್ಯಾಂರಾಹುದರ್ಶನೇ। ಪೂ
ರ್ಣಮಾಸ್ಯಾಂತಥಾದರ್ಶೇನಸ್ನಾಯಾದುಷ್ಣವಾರಿಣಾ ॥೧೦॥

ಅರ್ಥ॥ ಮರಣದಲ್ಲಿಯೂ, (ಮೃತಿಸ್ನಾನವನ್ನು) ಜನ್ಮನಕ್ಷತ್ರದಲ್ಲಿ ಯೂ, ಸಂಕ್ರಮಣಗಳಲ್ಲಿಯೂ, ಶ್ರಾದ್ಧ ದಿನಗಳಲ್ಲಿಯೂ, ವರ್ಷವರ್ಧಂತಿ ಯಲ್ಲಿಯೂ, ಸ್ವಭಾವತಃ ಸ್ಪರ್ಶಕ್ಕೆ ಅನರ್ಹರಾದ ಚಂಡಾಲಾದಿಗಳ ಸ್ಪ ರ್ಶದಲ್ಲಿಯೂ, ಭಾನುವಾರದಲ್ಲಿಯೂ, ಸಪ್ತಮಿಯಲ್ಲಿಯೂ, ಗ್ರಹಣ ಕಾಲದಲ್ಲಿಯೂ, ಪೌರ್ಣಮಿಯಲ್ಲಿಯೂ, ಅಮಾವಾಸ್ಯೆಯಲ್ಲಿಯೂ ಸಹಾ ಉಷ್ಣೋದಕ ಸ್ನಾನ ಮಾಡಬಾರದು.

ವ್ಯಾಸಃ॥ ಶೀತಾಸ್ವಪ್ಸುನಿಷಿಚ್ಯೋಷ್ಣಾಃಮಂತ್ರಸಂಭಾರಸಂಭೃತಾಃ।
ಗೇಹೇಷಿಕಸ್ಯತೇಸ್ನಾನಂತದ್ಧೀನಮಫಲಂಬಹಿಃ ॥೧೧॥

ಅರ್ಥ॥ ಉಷ್ಣೋದಕದಲ್ಲಿ ಸ್ನಾನ ಮಾಡುವ ಸಂದರ್ಭದಲ್ಲಿ ಶೀತೋ ದಕದಲ್ಲಿ ಉಷ್ಣೋದಕವನ್ನು ಸೇಚನ ಮಾಡಿ, ಮಂತ್ರಪೂತವಾದ ಉದ ಕದಲ್ಲಿ ಸ್ನಾನಮಾಡತಕ್ಕದ್ದು. ಬಹಿಃಸ್ನಾನದಲ್ಲಿಯೂ ಮಂತ್ರಸಂಭಾರಗ ಳಿಲ್ಲದ ಪಕ್ಷ ಆ ಸ್ನಾನವು ನಿಷ್ಫಲವಾಗುವದು.

ಕಾತ್ಯಾಯನಃ॥ ಯಾಶ್ಚೋಷಮುಪಗಚ್ಛಂತಿಗ್ರೀಷ್ಮೇಕುಸರಿತಶ್ಚ
ಯಾಃ। ತಾಸುಪ್ರಾವೃಷಿನಸ್ನಾಯಾದಪ್ರೋಷಿತೋದಕಾಸದೇ॥

ಅರ್ಥ॥ ಕುನದಿ, ಹಳ್ಳ, ಕೆರೆಕಟ್ಟೆ, ಮುಂತಾದ ಯಾವವುಗಳು ಗ್ರೀ ಷ್ಮ ಋತುವಿನಲ್ಲಿ ಬೊಣಗಿರುವವೋ, ಅವುಗಳು ವರ್ಷಋತುವಿನಲ್ಲಿ ತುಂ ಬಿದಾಗ್ಯೂ ಹತ್ತು ದಿನಗಳ ಪರಿಯಂತರ ಸ್ನಾನ ಮಾಡಬಾರದು.

## ಅಥ ಸಂಕಲ್ಪ ವಿಧಿಃ.

ಮನುಃ॥ ಪ್ರಕ್ಷಾಳ್ಯಪಾದೌಹಸ್ತೌಚಸ್ವಾಚಾಂತೋವಾಗ್ಯತಶ್ಶು
ಚಿಃ। ತಿಥಿವಾರಾದಿಕಂಸ್ಮೃತ್ವಾಸಂಕಲ್ಪಯೇದ್ಯಥಾವಿಧಿ ॥೧೨॥

ಅರ್ಥ॥ ಕೈಕಾಲುಗಳನ್ನು ಚನ್ನಾಗಿ ತೊಳೆದುಕೊಂಡು ಆಚಮನವಂ

ಮಾಡಿ, ಶುದ್ಧನಾಗಿ, ಮೌನವಂ ಆಶ್ರಯಿಸಿ, ತತ್ಕಾಲೀನವಾದ ತಿಥಿವಾರಾ
ದಿಗಳನ್ನ ಸ್ಮರಿಸಿ, ಯಥಾವಿಧಿಯಾಗಿ ಸಂಕಲ್ಪ ಮಾಡುವದು.

ಭರದ್ವಾಜಃ॥ ಸದರ್ಭಹಸ್ತೌ ಜಾನೂರ್ಧ್ವೌದಕ್ಷಿಣೇದಕ್ಷಿಣೋತ್ತರೌ
ಕೃತ್ವಾಜಾನುನಿಕರ್ತವ್ಯಮೇತತ್ಕರ್ಮಕರೋಮ್ಯಹಂ। ಸ್ವ
ಮಾನಸೇನಸ್ಮರಣಂತತ್ಸಂಕಲ್ಪಇತಿಸ್ಮೃತಃ ॥೧॥

ಅರ್ಥ॥ ಬಲಮಂಡಿಯ ಮೇಲೆ ದರ್ಭಗಳಿಂದ ಕೂಡಿರುವ ಹಸ್ತಗಳ
ನ್ನ ದಕ್ಷಿಣೋತ್ತರವಾಗಿ ಇಟ್ಟುಕೊಂಡು ಮಾಡತಕ್ಕ ಕರ್ಮವನ್ನ ತನ್ನ
ಮನಸ್ಸಿನಿಂದ ತಾನು ಸ್ಮರಿಸುವದೇ ಸಂಕಲ್ಪವೆನಿಸುವದು.

ಅತ್ರಿಃ॥ ಸಂಕಲ್ಪಸೂಕ್ತಪಠನಂಮಾರ್ಜನಂಚಾಘಮರ್ಷಣಂ।
ದೇವರ್ಷಿತರ್ಪಣಂಚೈವಸ್ನಾನಂಪಂಚಾಂಗಮಿಷ್ಯತೇ ॥೨॥

ಅರ್ಥ॥ ಸಂಕಲ್ಪ, ಸೂಕ್ತಪಠನ, ಪ್ರೋಕ್ಷಣ, ಅಘಮರ್ಷಣಸ್ನಾನ,
ದೇವ ಋಷಿತರ್ಪಣ ಎಂಬ ಐದು ಅಂಗಗಳಿಂದ ಸ್ನಾನವು ಕೂಡಿರುವದು.

## ಪ್ರಾತಃಸ್ನಾನ ಪ್ರಯೋಗ.

ಅವತಾರಿಕಾ॥ ಪ್ರಾತಃಸ್ನಾನವು ದೃಷ್ಟಾದೃಷ್ಟ ಫಲಪ್ರದವಾದು
ದು. ಇದರಲ್ಲಿ ದೃಷ್ಟಫಲವೇನೆಂದರೆ, ರಾತ್ರಿ ಮಲಗುವಕಾಲದಲ್ಲಿ ಶರೀರ
ದಲ್ಲಿ ಬೀಳುವ ಜೊಲ್ಲು, ಅವಯವಗಳಲ್ಲಿ ಸಂಭವಿಸುವ ಬೆವರು ಮುಂತಾ
ದುದನ್ನ ನಿಶ್ಶೇಷವಾಗಿ ತೊಳೆಯುವದರಿಂದ ಪ್ರಾಪ್ತವಾಗುವ ಮನೋ ನೈ
ರ್ಮಲ್ಯ, ದೇಹಾರೋಗ್ಯವೇ ಮೊದಲಾದ ಗುಣಾತಿಶಯಗಳು ಸಾಮಾನ್ಯ
ವಾಗಿ ತಿಳಿದಿರುವ ಪ್ರಯುಕ್ತ, ಈ ವಿಚಾರವಾಗಿ ಬರೆಯಬೇಕಾದ ಪ್ರ
ಕೃತವಿಲ್ಲವು.

ಅಪಿತು ಅದೃಷ್ಟಫಲವಿಚಾರವಾಗಿ ಬರೆಯಬೇಕಾಗಿರುವದು, ಮುಂ
ದೆ ಬರೆಯಲ್ಪಡುವಂತೆ (ಯಥಾವಿಧಿ) ಅಘಮರ್ಷಣ ಸ್ನಾನವಂ ಮಾಡಿ
ದ್ದಾದರೆ, ಮನೋವಾಕ್ಕಾಯಗಳಿಂದ ಮಾಡಲ್ಪಡುವ ಸಕಲವಾದ ಪಾ
ಪಗಳೂ ನಾಶಹೊಂದಿ, ಪಾಪಕರ್ಮದಲ್ಲಿ ಆಸಕ್ತಿಯೂ ನಷ್ಟವಾಗಿ, ಮ
ನೋ ನೈರ್ಮಲ್ಯದ್ವಾರಾ ಪರಮಾತ್ಮನಲ್ಲಿ ಭಕ್ತಿಯು ಅಭಿವೃದ್ಧಿಯಾಗಿ,

ತಮ್ಮ ಗಳ ಅಭಿಲಾಷಾನುಸಾರ ಮೋಕ್ಷಪರ್ಯಂತವಾದ ಇಷ್ಟಾರ್ಥಗಳು ಕೈಗೊಡುವನು.

ಮುಂದೆ ಬರೆಯಲ್ಪಡುವ ಸ್ನಾನ ಮಂತ್ರಾರ್ಥಗಳಲ್ಲಿ ಈ ವಿಚಾರಗಳನ್ನು ಯಥಾವತ್ತಾಗಿ ತಿಳಿಯಬಹುದಾಗಿ ಇಲ್ಲಿ ವಿಸ್ತರಿಸಲಿಲ್ಲವು.

ಧರ್ಮಶಾಸ್ತ್ರದಲ್ಲಿ ಅಘಮರ್ಷಣ ಸ್ನಾನವೇ ಮುಖ್ಯವೆಂದು ಹೇಳಲ್ಪಟ್ಟಿರುವದು. ಶ್ರೀ ಪರಾಶರಭಟ್ಟಾರಕ ವಿರಚಿತವಾದ ಕ್ರಿಯಾದೀಪದಲ್ಲಿ (ಅಘಮರ್ಷಣಸೂಕ್ತೇನ ಸ್ನಾನಂಕುರ್ಯಾದ್ಯಥಾವಿಧಿ) ಎಂಬದಾಗಿಯೂ, ನಿಗಮಾಂತಾಚಾರ್ಯರವರಿಂದ ವಿರಚಿತವಾದ ಪಾಂಚರಾತ್ರ ರಕ್ಷೆಯಲ್ಲಿ, (ತತ್ರ-ಶಕ್ತಸ್ಯವಾರುಣಮೇವಸ್ನಾನಂ) ಎಂಬದಾಗಿಯೂ ಹೇಳಲ್ಪಟ್ಟಿರುವದು. ಈ ಅಘಮರ್ಷಣ ಸ್ನಾನದಲ್ಲಿ ಶಕ್ತಿಇಲ್ಲದವರಿಗೆ ಪೂರ್ವಾಚಾರ್ಯರುಗಳಿಂದ (ಶ್ರೀ ಭಾಷ್ಯಕಾರರ ನಿತ್ಯಗ್ರಂಥದಲ್ಲಿ, ಮತ್ತು ಶ್ರೀ ವಂಗಿ ವಂಶೇಶ್ವರರ ಕಾರಿಕೆಯಲ್ಲಿಯೂ) ಉಕ್ತವಾಗಿರುವ ಸ್ನಾನವು ಎಂದು ಭಾವಿಸಿ. ಅನೇಕ ಆಹ್ನಿಕ ಗ್ರಂಥಗಳಲ್ಲಿ ಪೂರ್ವಾಚಾರ್ಯೋಕ್ತಸ್ನಾನವಿಧಿಯನ್ನೇ ಬರೆದು, ಅನಂತರ ಪ್ರಸಂಗಾದ್ಧರ್ಮಶಾಸ್ತ್ರೋಕ್ತ ಸ್ನಾನವಿಧಿಃ ಲಿಖ್ಯತೇ, ಎಂಬದಾಗಿ ಬರೆಯಲ್ಪಟ್ಟಿರುವದು. ಈ ವಿಷಯದಲ್ಲಿ ಕೆಲ ಆಚಾರ್ಯರುಗಳು ಅಘಮರ್ಷಣ ಸ್ನಾನವು ಶ್ರೌತವು, ಆಚಾರ್ಯೋಕ್ತಸ್ನಾನವು ಪಾಂಚರಾತ್ರೋಕ್ತವಾದುದು, ಈ ಎರಡುವಿಧಿಯೂ ತುಲ್ಯಬಲವುಳ್ಳದ್ದಾದಕಾರಣ ವಿಕಲ್ಪವಾಗಿರುವದು. ಆದಕಾರಣ ಇಷ್ಟಾನುಸಾರ ನಡಿಸಬಹುದೆಂದು ಹೇಳುವರು. ಇವರಮೇಲೆ ಕೆಲವರು ಪಾಂಚರಾತ್ರಸಂಹಿತೋಕ್ತಪ್ರಕಾರವಾಗಿ ಸ್ನಾನಾದಿಗಳನ್ನು ನಡಿಸುವದು ಪಾರಮೈಕಾಂತ್ಯವುಳ್ಳವರಿಗೆ ಮಾತ್ರ ಸಾಧ್ಯವೇ ವಿನಹಾ, ಸರ್ವಸಾಧಾರಣವಲ್ಲ. ಅದುಕಾರಣ ಧರ್ಮಶಾಸ್ತ್ರೋಕ್ತ ಸ್ನಾನವೇ ಅನುಕೂಲವೆಂದು ಹೇಳುವರು.

ಈ ವಿಷಯದಲ್ಲಿ ತೋರುವದೇನೆಂದರೆ, ಅಘಮರ್ಷಣ ಸ್ನಾನದಲ್ಲಿ ಪ್ರಧಾನಾಂಗವನ್ನು ಹೊರತು, ಪ್ರೋಕ್ಷಣ ಮಂತ್ರಗಳಲ್ಲಿ ಅನೇಕ ಮಂತ್ರಗಳು ಉಪಹರಿಸಿರುವರು. ಜಲಮಧ್ಯದಲ್ಲಿ ನಿಂತು ಅಷ್ಟ ಮಂತ್ರಾವೃತ್ತಿಯನ್ನು ಮಾಡುವದೇನೋ ಅಸಾಧ್ಯವೇ ಸರಿ, ಪ್ರಧಾನಾಂಗದಲ್ಲಿ ಆವೃತ್ತಿಯನ್ನು ಮಾಡದೆ, ಪ್ರೋಕ್ಷಣಮಂತ್ರದಲ್ಲಿ ಮಾತ್ರ "ಆಪೋಹಿ

ಧ್ಯಾನ್ಯಕುರ್ಯಾಚ್ಚೇತ್ತತ್ರಾಯಂವಿಧಿರುಚ್ಯತೇ ॥ ಸ್ನಾನವಂ ತರ್ಜಲೇಚೈವಮಾರ್ಜನಾಚಮನೇತಥಾ । ಜಲಾಭಿಮಂತ್ರ ಣಂಚೈವತೀರ್ಥಸ್ಯಪರಿಕಲ್ಪನಂ॥ ಅಘಮರ್ಷಣಸೂಕ್ತೇನತ್ರಿ ರಾವೃತ್ತೇನನಿತ್ಯಶಃ । ಸ್ನಾನಾಚರಣಮಿತ್ಯೇತತ್ಸಮುದ್ದಿಷ್ಟಂಮ ನೀಷಿಭಿಃ ॥ ... ... ॥೧॥

ಅರ್ಥ॥ ವಿಸ್ತಾರವಾಗಿ ಹೇಳಲ್ಪಟ್ಟಿರುವ ಈ ಸ್ನಾನವಿಧಿಯ ಪ್ರಕಾರ, ಅನುಷ್ಠಿಸಲಶಕ್ತರಾದವರಿಗೆ, ಸ್ನಾನ, ಪ್ರೋಕ್ಷಣ, ಆಚಮನ, ಜಲಾಭಿ ಮಂತ್ರಣ, ತೀರ್ಥಪರಿಕಲ್ಪನ, ತ್ರಿರಾವೃತ್ತವಾದ ಅಘಮರ್ಷಣ ಸೂಕ್ತ ದಿಂದ ಸ್ನಾನಾಚರಣ ಎಂಬ ಪ್ರಧಾನಾಂಶಗಳನ್ನೇ ಅನುಕಲ್ಪವಾಗಿ ಹೇಳಿ ರುವದರಿಂದ ಮುಖ್ಯಾಂಶಗಳೇ ಇಲ್ಲಿ ತಾತ್ಪರ್ಯದೊಡನೆ ಬರೆಯಲ್ಪಡುವವು.

## ಅಥ ಧರ್ಮಶಾಸ್ತ್ರೋಕ್ತ ಸ್ನಾನವಿಧಿ ಪ್ರಯೋಗ.

ಚೆನ್ನಾಗಿ ತೊಳೆಯಲ್ಪಟ್ಟ ಕೈಕಾಲುಗಳುಳ್ಳವನಾಗಿ ಪೂರ್ವಾಭಿ ಮುಖನಾಗಿ ಕುಳಿತುಕೊಂಡು ಆಚಮನವಂಮಾಡಿ ಪ್ರಾಣಾಯಾಮವಂ ಮಾಡಿ (ಪ್ರಾಣಾಯಾಮ ಸ್ವರೂಪವು ಸಂಧ್ಯಾವಂದನ ಪ್ರಕರಣದಲ್ಲಿ ಬರೆಯಲ್ಪಡುವದು) ಸಂಪ್ರದಾಯಾನುಗುಣವಾಗಿ ಸಂಕಲ್ಪ ಮಾಡುವದು ಶ್ರೀಮಾನ್ವೇಂಕಟನಾಥಾರ್ಯಃಕವಿತಾರ್ಕಿಕಕೇಸರೀ । ವೇದಾಂತಾಚಾರ್ಯ ವರ್ಯೋಮೇಸನ್ನಿಧತ್ತಾಂಸದಾಹೃದಿ ॥ ಗುರುಭ್ಯಸ್ತದ್ಗುರುಭ್ಯಶ್ಚನಮೋ ವಾಕಮಧೀಮಹೇ । ವೃಣೀಮಹೇಚತತ್ರಾದ್ಯಾವಂಪತೀಜಗತಾಂಪತೀ ॥ ಶ್ರೀಮನ್ನಭೀಷ್ಟವರದತ್ವಾಮಸ್ಮಿ ಶರಣಂಗತಃ। ಸ್ವಶೇಷಭೂತೇನಮಯಾ ಸ್ವೀಯೈಸ್ಸರ್ವಪರಿಚ್ಛದೈಃ। ವಿಧಾತುಂಪ್ರೀತಮಾತ್ಮಾನಂಶ್ರೀಮಾನ್ಪ್ರ ಕ್ರಮತೇಸ್ವಯಂ ॥ ಶುಕ್ಲಾಂಬರಧರಂವಿಷ್ಣುಂಶಶಿವರ್ಣಂಚತುರ್ಭುಜಂ । ಪ್ರಸನ್ನವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ಯಸ್ಯದ್ವಿರದವ ಕ್ತ್ರಾದ್ಯಾಃಪಾರಿಷದ್ಯಾಃಪರಶ್ಶತಂ । ವಿಘ್ನಂನಿಘ್ನಂತಿಸತತಂವಿಷ್ವಕ್ಸೇನಂತ ಮಾಶ್ರಯೇ । ಹರಿರೋಂ ತತ್ (ಸತ್) ಶ್ರೀಗೋವಿಂದ ಗೋವಿಂದ ಅಸ್ಯ ಶ್ರೀಭಗವತೋಮಹಾಪುರುಷಸ್ಯ ಮಹಾಪುರುಷಸ್ಯ ಮಹಾವಿಷ್ಣೋರಾಜ್ಞ ಯಾ ಪ್ರವರ್ತಮಾನಸ್ಯ ಅ (ಆ)ದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ವೇ ತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ

ಜಂಬೂದ್ವೀಪೇ ಭರತವರ್ಷೇ ಭರತಖಂಡೇ ಶಕಾಬ್ದೇ ಮೇರೋಃ ದಕ್ಷಿಣೇಪಾರ್ಶ್ವೇ ಅಸ್ಮಿನ್ ವರ್ತಮಾನೇ ವ್ಯಾವಹಾರಿಕೇ ಚಾಂದ್ರಮಾನೇನ ಪ್ರಭವಾದಿ ಷಷ್ಟಿ ಸಂವತ್ಸರಾಣಾಂ ಮಧ್ಯೇ........ಸಂವತ್ಸರೇ...... ಅಯನೇ........ಋತೌ...... ..ಮಾಸೇ........ಪಕ್ಷೇ...... ತಿಥೌ......ವಾಸರೇ........ನಕ್ಷತ್ರೇ........ಯೋಗೇ ........ ಕರಣೇ........ಅಸ್ಮಿನ್ ಶುಭಮುಹೂರ್ತೇ ಅಥವಾ ಏವಂಗುಣವಿಶಿಷ್ಟಾಯಾಂ ಅಸ್ಯಾಂ ಶುಭತಿಥೌ ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಕರ್ಮಣ್ಯತಾ ಸಿದ್ಧ್ಯರ್ಥಂ (ಅಸ್ಮಿನ್...... ತೀರ್ಥೇ...... ಅಸ್ಯಾಂ ನದ್ಯಾಂ ವಾ ಪ್ರಾತಃಸ್ನಾನ ಮಹಂಕರಿಷ್ಯೇ) ಎಂದು ಸಂಕಲ್ಪಮಾಡಿ,

ಶ್ಲೋ॥ ಸಮಸ್ತಜಗದಾಧಾರಶಂಖಚಕ್ರಗದಾಧರ। ದೇಹಿದೇವಮಮಾನು
ಜ್ಞಾಂಯುಷ್ಮತ್ತೀರ್ಥನಿಷೇವಣೇ॥ ... ॥೧॥

ಅರ್ಥ॥ ಸಮಸ್ತ ಜಗತ್ತಿಗೂ ಆಧಾರಭೂತನಾದ ಶಂಖಚಕ್ರ ಗದಾಧಾರಿಯಾದ ಸ್ವಾಮಿಯೇ ನಿನ್ನ (ಶ್ರೀಪಾದ) ತೀರ್ಥಸ್ನಾನದಲ್ಲಿ ಅನುಜ್ಞೆಯನ್ನು ಕೊಡು, ಎಂದು ಅನುಜ್ಞೆಯಂ ಪಡೆದು ಜಲವನ್ನು ಪ್ರವೇಶಿಸಿ, ಹರಿಃ ಹರಿಃ ಹರಿಃ ಎಂದು (ತ್ರಿರಾವೃತ್ತಿ) ಸ್ನಾನಮಾಡಿ ಉದುತ್ತಮಂ ಸ್ಯಾಮ, ಅಪ್ಸುಭ್ಯಾನ್ದ್ಯಾಂ ಪ್ರತಾನಿ, ಯತ್ಕಿಂಚೇದಂ ಪ್ರಿಯಮಾಣಃ, ಅಪಕ್ರೀತಾನಿ, ತತ್ವಾಯಾಮಿ ಪ್ರಮೋಷೀಃ, ಎಂಬ ವರುಣ ಸೂಕ್ತವನ್ನು ಜಪಿಸಿ,

ಶ್ರು॥ ಹಿರಣ್ಯಶೃಂಗಂವರುಣಂಪ್ರಪದ್ಯೇ ತೀರ್ಥಂಮೇದೇಹಿಯಾ
ಚಿತಃ। ಯನ್ಮಯಾಭುಕ್ತಮಸಾಧೂನಾಂಪಾಪೇಭ್ಯಶ್ಚಪ್ರತಿ
ಗ್ರಹಃ॥ ಯನ್ಮೇಮನಸಾವಾಚಾಕರ್ಮಣಾವಾದುಷ್ಕೃತಂ
ಕೃತಂ। ತನ್ನ ಇಂದ್ರೋವರುಣೋಬೃಹಸ್ಪತಿಸ್ಸವಿತಾಚಪು
ನಂತುಪುನಃಪುನಃ॥ ಇತಿದ್ವಾಭ್ಯಾಮುಪಗಾದ್ಯ,

ಅರ್ಥ! ಅಶ್ವಕ್ರಾಂತಾ, ಎಂಬದಾಗಿ ಪ್ರತಿಪಾದಿತೆಯಾದ ಭೂದೇವಿಯಿಂದಲೂ, ಗಂಧದ್ವಾರಾಂ, ಎಂಬದಾಗಿ ಪ್ರತಿಪಾದಿತೆಯಾದ ಲಕ್ಷ್ಮಿಯಿಂದಲೂ, ಇಂದ್ರಾದಿ ಪರಿವಾರದಿಂದಲೂ ಸಮೇತನಾದ ಪುರುಷೋತ್ತಮನನ್ನ ಸರ್ವಪಾಪ ಶಾಂತ್ಯರ್ಥವಾಗಿಯೂ, ಸಕಲ ಮಂಗಳ ಪ್ರಾಪ್ತ್ಯರ್ಥವಾಗಿಯೂ, ಹಿರಣ್ಯಶೃಂಗಂ, ಎಂಬ ಎರಡು ಮಂತ್ರದಿಂದ ಶರಣ ಹೊಂದುವದು.

ಹಿತವಾಗಿಯೂ, ರಮಣೀಯವಾಗಿಯೂ ಇರುವ ಕಾಂತಿಯಿಂದ ಕೂಡಿರುವ (ಸರ್ವಪಾಪ ನಿವಾರಕನಾದ ಪ್ರಯುಕ್ತ) ವರುಣಶಬ್ದವಾಚ್ಯನಾದ ಭಗವಂತನನ್ನ ಸಕಲ ಪಾಪನಾಶಾರ್ಥವಾಗಿ ಆಶ್ರಯಿಸುವೆನು. (ತನ್ನಲ್ಲಿ ವಿಮುಖರಾದವರನ್ನ ಸಂಸಾರಪಾಶಗಳಿಂದ ಕಟ್ಟುವನಾದ ಪ್ರಯುಕ್ತ)ವರುಣಶಬ್ದವಾಚ್ಯನಾದ ನೀನು ನನ್ನಿಂದ ಯಾಚಿಸಲ್ಪಟ್ಟವನಾಗಿ ಶರಣಾಗತನಾದ ನನಿಗೆ ನಿನ್ನನ್ನುಹೊಂದುವದಕ್ಕೆ ಯೋಗ್ಯವಾದ ಶುದ್ಧಿಯನ್ನು ಕೊಡು, (ಭಗವದ್ವಿಮುಖರಾದ ಪ್ರಯುಕ್ತ) ಅನರ್ಹರಾದವರ ಸಂಬಂಧವಾದ ಯಾವದು ನನ್ನಿಂದ ಭಕ್ಷಿಸಲ್ಪಟ್ಟಿರುವದೋ, ಯಾವ ಧನಧಾನ್ಯಾದಿಗಳು ಪ್ರತಿಗ್ರಹಿಸಲ್ಪಟ್ಟಿರುವವೋ, ತನ್ಮೂಲಕವಾಗಿ ಪ್ರಾಪ್ತವಾದ ಪಾಪಗಳ ದೆಸೆಯಿಂದ ಶುದ್ಧನನ್ನಾಗಿ ಮಾಡು.

ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಕರ್ಮದಿಂದಲೂ, ಯಾವಯಾವ ದುಷ್ಕೃತಗಳು ನನ್ನಿಂದ ಮಾಡಲ್ಪಟ್ಟಿರುವವೋ ಅವುಗಳನ್ನು, ಇಂದ್ರ, ವರುಣ, ಬೃಹಸ್ಪತಿ, ಸೂರ್ಯಾದಿಗಳು, ನಾಶಮಾಡಲಿ. (ಮನಸ್ಸಿನಿಂದ ಪರದುಃಖ ಧ್ಯಾನಾದಿಗಳು, ವಾಕ್ಕಿನಿಂದ ಕ್ರೂರಾನೃತ ಭಾಷಣಗಳೂ, ಕರ್ಮದಿಂದ ಅದತ್ತಸ್ವೀಕಾರಾದಿಗಳು ಮಾಡಲ್ಪಡುವವೆಂದು ಭಾವವು) ಈ ಎರಡು ಮಂತ್ರಗಳಿಂದ ಸ್ನಾನಮಾಡಿ,

ಉಪನಿಷತ್! ಸುಮಿತ್ರಾನ ಆಪಓಷಧಯಸ್ಸಂತು, (ಎಂದು ತನ್ನನ್ನ ಅಭಿಷೇಕ ಮಾಡಿ)

ಅರ್ಥ! ಪರಮಪುರುಷನಿಗೆ ಶರೀರಭೂತಗಳಾದ ಉದಕ ಮತ್ತು ಓಷಧಿಗಳೇ! ಶೇಷಭೂತರಾದ ನಮಗೆ ಶೋಭನವು ಮಾಡಿರಿ.

ಉ॥ ದುರ್ಮಿತ್ರಾಸ್ತಸ್ಮೈ ಭೂಯಾಸುರ್ಯೋಸ್ಮಾನ್ ದ್ವೇಷ್ಟಿಯಂಚ
ವಯಂದ್ವಿಷ್ಮಃ (ಎಂದು ಉದಕವನ್ನು ಬೊಗಸೆಯಿಂದ ತೀ
ದಲ್ಲಿ ಹಾಕಿ)

ಅರ್ಥ॥ ಯಾವನು ನಮ್ಮನ್ನ ದ್ವೇಷಿಸುವನೋ ನಾವು ಯಾರಲ್ಲಿ
ವಿರೋಧವುಳ್ಳವರಾಗಿರುವೆವೋ ಅವನಿಗೆ ದುರ್ಮಿತ್ರರಾಗಿರಿ.

ಉ॥ ನಮೋಗ್ನಯೇಪ್ಸುಮತೇನಮ ಇಂದ್ರಾಯನಮೋವರುಣಾಯ
ನಮೋ ವಾರುಣ್ಯೈನಮೋದ್ಭ್ಯಃ (ಎಂದು ತೀರ್ಥಾಧಿದೇವತೆ
ಯಾದ ಶ್ರೀಯಃಪತಿಯನ್ನ ನಮಸ್ಕರಿಸಿ,)

ಅರ್ಥ॥ ಅಂತರ್ಯಾಮಿಯಾದ ಭಗವಂತನನ್ನು ಭಗವದ್ವಿಭೂತಿಭೂತ
ರಾದ, ಉದಕಪತಿಗಳಾದ, ಅಗ್ನಿ, ಇಂದ್ರ, ವರುಣ, ತತ್ಪತ್ನಿ ಉದಕ
ಗಳನ್ನುವಂದಿಸುವೆನು.

ಉ॥ ಯದಪಾಂಕ್ರೂರಂಯದಮೇಧ್ಯಂ ಯದಶಾಂತಂತದಪಗಚ್ಛತಾತ್
(ಎಂದು ಜಲಸ್ಥವಾದ ಅಪರಿಶುದ್ಧಾಂಶವನ್ನು ದಕ್ಷಿಣಕ್ಕೆ ತಳ್ಳಿ.)

ಅರ್ಥ॥ ಉದಕಸಂಬಂಧಿಯಾದ ಹಿಂಸಕವಾದ ದುಷ್ಟಸತ್ವಾದಿಗಳು,
ಅಶುದ್ಧವಾದ ವಸ್ತುವು, ಇತರ ಆಭಿಚಾರಾದಿಗಳಿಂದ ಇರುವ ಉಪದ್ರವ
ವೂ ಈ ಸಕಲವೂ ಉದಕದ್ದೆಸೆಯಿಂದ ನಾಶವಾಗಲಿ.

ಉ॥ ಅತ್ಯಾಶನಾದ ತೀಪಾನಾದ್ಯಚ್ಚ ಉಗ್ರಾತ್ಪ್ರತಿಗ್ರಹಾತ್। ತನ್ಮೇ
ವರುಣೋರಾಜಾಪಾಣಿನಾಹ್ಯವಮರ್ಶತು। ಸೋಹಮಪಾಪೋ
ವಿರಜೋನಿರ್ಮುಕ್ತೋಮುಕ್ತಕಿಲ್ಬಿಷಃ। ನಾಕಸ್ಯಪೃಷ್ಠಮಾ
ರುಹ್ಯಗಚ್ಛೇದ್ಬ್ರಹ್ಮಸಲೋಕತಾಂ॥

(ಎಂದು ನೀರನ್ನು ಮೂರುಬಾರಿ ಆಲೋಡನೆ ಮಾಡಿ, ಒಂದುಮೊಳ ಪ್ರಮಾಣಕ್ಕೆ ಚತುರಶ್ರವಾಗಿ ತೀರ್ಥದಲ್ಲಿ ಪೀಠವನ್ನು ಕಲ್ಪಿಸಿ (ಓಂ) ಎಂದು ಬರೆದು).

ಅರ್ಥ। ಏಕಾಂತದಲ್ಲಿ ಮಾಡಲ್ಪಟ್ಟ ಅತಿ ಭೋಜನದ್ದೆಸೆಯಿಂದಲೂ, ಶಾಸ್ತ್ರಮರ್ಯಾದೆಯನ್ನುಲ್ಲಂಘಿಸಿ ಮಾಡಲ್ಪಟ್ಟ ಅಭೋಜ್ಯಾ ಭೋಜನದಿಂದಲೂ, ಶಾಸ್ತ್ರ ನಿಷಿದ್ಧಾಪೇಯ ಪಾನದಿಂದಲೂ, ನೀಚರುಗಳ ದೆಸೆಯಿಂದ ಅಂಗೀಕರಿಸಲ್ಪಟ್ಟ ದಾನಗಳ ದೆಸೆಯಿಂದಲೂ, ಪ್ರಾಪ್ತವಾದ ಪಾತಕೋಪ ಪಾತಕಗಳು ನನ್ನಲ್ಲಿ ಸೇರದಹಾಗೆ ವರುಣಶಬ್ದವಾಚ್ಯನಾದ ಭಗವಂತನು ಮಾಡಲಿ. ಉತ್ತರೋತ್ತರ ನಾನು ಪಾಪಕೃತ್ಯಗಳಂ ಮಾಡದಹಾಗೆ ಹಸ್ತದಿಂದ ನನ್ನನ್ನು ಸಂಭಾವಿಸಲಿ. ಸರ್ವೇಶ್ವರನ ಸರ್ವಪಾಪಹಾರಿ ಹಸ್ತದಿಂದ ಸ್ಪೃಷ್ಟನಾದ ನಾನು ರಜಸ್ತಮೋ ಗುಣಗಳಿಂದಲೂ, ತದ್ದ್ವಾರಾ ವಾಸನಾರುಚಿ ಪ್ರಕೃತಿ ಸಂಬಂಧದಿಂದಲೂ ಬಿಡಲ್ಪಟ್ಟವನಾಗಿ, ಭಗವತ್ಪ್ರಾಪ್ತಿ, ವಿರೋಧಿ ಸಕಲ ಪುಣ್ಯಪಾಪಗಳಿಂದಲೂ, ಸಮಸ್ತ ಪ್ರತಿಬಂಧಕದಿಂದಲೂ ಬಿಡಲ್ಪಟ್ಟ ದುಃಖಾಸಂಭಿನ್ನವಾದ ಸ್ವರ್ಗವನ್ನು (ವೈಕುಂಠವನ್ನು) ಹೊಂದಿ ಸರ್ವೇಶ್ವರನ ಸಾಲೋಕ್ಯವನ್ನು ಹೊಂದುವೆನು.

ಶ್ಲೋ॥ ಆವಾಹಯಾಮಿತ್ವಾಂದೇವಿಸ್ನಾನಾರ್ಥಮಿಹಸುಂದರಿ। ಏಹಿಗಂಗೇ ನಮಸ್ತುಭ್ಯಂಸರ್ವತೀರ್ಥಸಮನ್ವಿತೇ (ಎಂದು ಗಂಗೆಯನ್ನು ಉದಕಾಂಜಲಿಯಿಂದ ಆವಾಹನ ಮಾಡಿ.)

ಅರ್ಥ॥ ಸುಂದರಿಯಾದ ಗಂಗಾದೇವಿಯೇ, ಸ್ನಾನಾರ್ಥವಾಗಿ ನಿನ್ನಂ ಇಲ್ಲಿಗೆ ಆವಾಹನೆ ಮಾಡುವೆನು, ಸರ್ವತೀರ್ಥಗಳೊಂದಿಗೆ ಕೂಡಿದ ಗಂಗೆಯೇ ಇಲ್ಲಿ ದಯಮಾಡು.

ಶ್ಲೋ॥ ವಿಷ್ಣುಪಾದಾಬ್ಜಸಂಭೂತೇಗಂಗೇತ್ರಿಪಥಗಾಮಿನೀ।ಧರ್ಮದ್ರವೇತಿವಿಖ್ಯಾತೇಪಾಪಂಮೇಹರಜಾಹ್ನವಿ॥ ಇತಿಗಂಗಾಂಸಂಪ್ರಾರ್ಥ್ಯ॥

ಅರ್ಥ॥ ನಾರಾಯಣನ ಪಾದಕಮಲದ್ದೆಸೆಯಿಂದ ಉತ್ಪನ್ನೆಯಾದ, ತ್ರಿಮಾರ್ಗಗಾಮಿನಿಯಾದ, ಧರ್ಮದ್ರವಾ, ಎಂಬದಾಗಿ ಪ್ರಸಿದ್ಧಿ ಹೊಂದಿದ ಗಂಗೆಯೇ, ನನ್ನ ಪಾಪವಂ ಹೋಗಲಾಡಿಸು, ಎಂದು ಪ್ರಾರ್ಥಿಸಿ,

ಶ್ಲೋ॥ ವಿಷ್ಣುಪಾದಪದಾಬ್ಜಸ್ಥನಖಸ್ರೋತೋವಿನಿಸ್ಸೃತೇ । ತ
ಕ್ತಿವಿಘ್ನರೂಪಾತ್ವಂಗಂಗೇನಾಂಪಾಹಿಚ ಸರ್ವಶಃ॥

ಅರ್ಥ॥ ನಾರಾಯಣನ ವಾಮಪಾದಾಂಬುಜಸ್ಥ ನಖಕಾಂತಿ (ಎಂಬಂತೆ
ಯೊಡನೆ ಪ್ರವಹಿಸಿದ ಗಂಗೆಯೇ ಭಗವದ್ಭಕ್ತಿ ವಿಘ್ನರೂಪವಾಗಿರು
ನನ್ನ ಪಾಪವಂ ಹೋಗಲಾಡಿಸು, ಎಂದು ಉದಕಾಂಜಲಿಯಿಂದ ಅರ್ಘ್ಯ
ವಂ ಕೊಟ್ಟು,

ಶ್ಲೋ॥ ನಂದಿನೀ ನಳಿನೀ, ಸೀತಾ, ಮಾಲತೀಚ ಮಲಾಪಹಾ । ವಿಷ್ಣುಪ
ದಾಬ್ಜಸಂಭೂತಾ, ಗಂಗಾ, ತ್ರಿಪಥಗಾಮಿನೀ, । ಭಾಗೀರಥೀ
ಭೋಗವತೀ, ಜಾಹ್ನವೀ, ತ್ರಿದಶೇಶ್ವರೀ ॥
(ಎಂದು ಹನ್ನೆರಡು ಗಂಗಾನಾಮಗಳಂ ಸಂಕೀರ್ತನೆ ಮಾಡಿ.)

ಶ್ಲೋ॥ ಗಂಗೇಚ, ಯಮುನೇ, ಚೈವಗೋದಾವರಿ, ಸರಸ್ವತಿ, । ನರ್ಮ
ದೇ, ಸಿಂಧು, ಕಾವೇರಿ, ಜಲೇಸ್ಮಿನ್ಸನ್ನಿಧಿಂಕುರು ॥
(ಎಂದು ಸಾನ್ನಿಧ್ಯವಂ ಪ್ರಾರ್ಥಿಸಿ,)

ಉ॥ ಇಮಮ್ಮೇಗಂಗೇಯಮುನೇ ಸರಸ್ವತಿಶುತುದ್ರಿಸ್ತೋಮಂಗಂ

ಸಚತಾಪರುಷ್ಣಿಯಾ । ಅಸಿಕ್ನಿಯಾಮರುದ್ವೃಧೆ ವಿತಸ್ತಯಾ

ಜೀಕೀಯೆ ಶೃಣುಹ್ಯಾಸುಷೋಮಯಾ ॥

ಅರ್ಥ॥ ಶ್ರೇಯಃಪ್ರದಾನಶೀಲೆಯಾದ ಗಂಗೆಯೇ, ಪಾಪನಾಶಕಾರಿ
ಯಾದ ಯಮುನೆಯೆ, ವಿಚಿತ್ರಗಮನವುಳ್ಳ ಸರಸ್ವತಿಯೇ, ಶೀಘ್ರವೇಗ
ವುಳ್ಳ ಶುತುದ್ರಿಯೇ, ಉಷ್ಣರಹಿತೆಯಾದ ಪರೋಷ್ಣಿಯೇ, ನೀಲವರ್ಣ
ಯಾದ ಅಸಿಕ್ನಿಯೇ, ವಾಯುವಿನಿಂದ ಅಭಿವೃದ್ಧಿ ಹೊಂದುವ ಕಾವೇರಿ
ಯೆ, ಉಪಕ್ಷೆಯುಹನೆಯಾದ ವಿತಸ್ತೆಯೇ, ಯಜ್ಞೇಕದೇಶೋತ್ಪನ್ನೆಯಾದ
ಆರ್ಜೀಕೀಯೆಯೇ, ತೀರಗಳಲ್ಲಿ ಶೋಭನವಾದ ಸೋಮಲತೆಗಳುಳ್ಳ
ಸುಷೋಮಾನದಿಯೇ ನೀವುಗಳು ಇತರ ನದಿಗಳೊಡನೆ ಇಲ್ಲಿಬಂದು ಈ
ತೀರ್ಥದಲ್ಲಿ ಸೇರಿದವರಾಗಿ ನನ್ನಿಂದ ಮಾಡಲ್ಪಡುವ ಸ್ತೋತ್ರವಂ ಕೇಳಿ
ನನ್ನಂ ಶುದ್ಧನನ್ನಾಗಿ ಮಾಡಿರಿ. ಎಂದು ಪುಣ್ಯತೀರ್ಥಗಳನ್ನು ಸ್ಮರಿಸಿ,

ಶ್ಲೋ॥ ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾಸ್ಸರಿತಸ್ತಥಾ । ಆಗಚ್ಛಂತು ಮಹಾಭಾಗಾ । ಸ್ನಾನಕಾಲೇ ಸದಾ ಮಮ ॥ ಇತ್ಯುಕ್ತ್ವಾ ॥

ಅರ್ಥ॥ ಪುಷ್ಕರಾದಿ ತೀರ್ಥಗಳೇ, ಗಂಗಾನದಿಗಳೇ, ಮಹಾಭಾಗ್ಯಶಾಲಿಗಳಾದ ನೀವು ಸ್ನಾನಕಾಲಗಳಲ್ಲಿ ನನಿಗೆ ಸಾನ್ನಿಧ್ಯವಂ ಕೊಡಿರಿ.

ಋ॥ ಆಪೋ ಅಸ್ಮಾನ್ಮಾತರಶ್ಶುಂಧಂತು ಘೃತೇನ ನೋ ಘೃತಪ್ವಃ

ಪುನಂತು ವಿಶ್ವಮಸ್ಮತ್ಪ್ರವಹಂತು ರಿಪ್ರಮುದಾಭ್ಯಶ್ಶುಚಿರಾ

ಪೂತ ಏಮಿ ॥ ಎಂದು ಸ್ನಾನಮಾಡಿ,

ಆಪೋಹಿಷ್ಠಾ ಮಯೋ ॥ ಹಿರಣ್ಯವರ್ಣಾಃ ಶುಚಯಃ ॥ ಪವಮಾನಸ್ಸುವರ್ಜನಃ ಪುನಾತು ॥ ಈ ಮಂತ್ರಗಳಿಂದ ಪ್ರೋಕ್ಷಿಸಿಕೊಂಡು.

(ಇದರಲ್ಲಿ ಆಪೋಹಿಷ್ಠಾ ಎಂಬ ಮಂತ್ರವು, ಸಂಧ್ಯಾವಂದನದಲ್ಲಿಯೂ, ಹಿರಣ್ಯವರ್ಣಾಃ ಎಂಬ ಮಂತ್ರವು ವಿವಾಹ ಪ್ರಕರಣದಲ್ಲಿಯೂ, ಪವಮಾನಸ್ಸುವರ್ಜನಃ ಎಂಬುವದು ಪುಣ್ಯಾಹದಲ್ಲಿಯೂ ಬರೆಯಲ್ಪಡುವದು.)

ಶ್ಲೋ॥ ಅಘಮರ್ಷಣಸೂಕ್ತಸ್ಯ ಅಘಮರ್ಷಣ ಋಷಿಃ । ಅನುಷ್ಟುಪ್ ಛಂದಃ । ಭಾವವೃತ್ತೋ ದೇವತಾ । ಅಘಮರ್ಷಣಜಪೇ ವಿನಿಯೋಗಃ ।
(ಎಂದು ಹೇಳಿ ತೀರ್ಥದಲ್ಲಿ ಮುಳುಗಿ.)

ಋ॥ ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ । ತತೋ ರಾತ್ರ್ಯ

ಜಾಯತ ತತಸ್ಸಮುದ್ರೋ ಅರ್ಣವಃ ಸಮುದ್ರಾದರ್ಣವಾದ

ಧಿ ಸಂವತ್ಸರೋ ಅಜಾಯತ, ಅಹೋರಾತ್ರಾಣಿ ವಿದಧದ್ವಿಶ್ವಸ್ಯ

ಮಿಷತೋ ವಶೀ । ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮ

ಕಲ್ಪಯತ್ । ದಿವಂ ಚ ಪೃಥಿವೀಂ ಚಾಂತರಿಕ್ಷಮಥೋ ಸುವಃ ॥

ಎಂಬ ಈ ಆರು ವಾಕ್ಯಗಳನ್ನ (೧-೨-೪-೩ ಈ ಸಂಖ್ಯಾವೃತ್ತಿ) ಯ
ಥಾಶಕ್ತಿ ಆವರ್ತನೆ ಮಾಡಿ,

ಅರ್ಥ॥ ಮಹಾಮಹಿಮೆಯುಳ್ಳ, ಸಂಕಲ್ಪ ಜ್ಞಾನೋದ್ದೀಪ್ತನಾದ
ತತ್ತತ್ಪದಾರ್ಥ ಸ್ವರೂಪಲಕ್ಷಣ ಜ್ಞಾನವುಳ್ಳ (ಯಾವ) ಪರಮಾತ್ಮನ ದೆಸೆ
ಯಿಂದ ಪ್ರಧಾನಾದ್ಯ ಪರಪರ್ಯಾಯವಾದ ಅಚೇತನನ ಭೂತಸಮಷ್ಟಿ ತತ್ತ್ವ
ವೂ, ವಿಕಾರ ದೂರೀಭೂತವಾದ, ಜಗತ್ಕಾರಣ ಭೂತವಾದ, ಚೇತನ
ಸಮಷ್ಟಿ ಭೂತತತ್ವವೂ, ಉತ್ಪನ್ನವಾದುದೋ, ಅನಂತರ (ಅಂಧಕಾರ
ದೋಷಾದಿಯಲ್ಲಿ) ಆತ್ಮಗುಣ ಪ್ರಚ್ಛಾದಕಗಳಾದ ಮಹದಾದಿಗಳು ಉ
ತ್ಪನ್ನವಾದವೋ, ಉದಕವು ಉತ್ಪನ್ನವಾಯಿತೋ, ಆ ಪರಮಾತ್ಮನ
ಸಂಕಲ್ಪದಿಂದ ಜಲಗರ್ಭ ಭೂತವಾದ ಅಖಂಡದ್ದೆಶೆಯಿಂದ ಹಿರಣ್ಯಗರ್ಭ
ನೆಂಬ ಚತುರ್ಮುಖನು ಉತ್ಪನ್ನನಾದನು. ಅನಂತರ ಆ ಪರಮಾತ್ಮ
ನು ಅಹೋರಾತ್ರ ಜೀವಿಗಳಾದ ಪ್ರಾಣಿಗಳನ್ನು ತತ್ತತ್ಕರ್ಮಾನುರೂಪ
ವಾಗಿ ನಾನಾ ಯೋನಿಗಳಲ್ಲಿ ನಿಯಮಿಸುವನಾಗಿ ತನ್ನಿಂದ ಸೃಷ್ಟಿಸಲ್ಪಟ್ಟ
ಭೂತಸಮೂಹಕ್ಕೆ ನಿಯಂತಾವಾದನು. ಸೂರ್ಯಚಂದ್ರರೇ ಮೊದಲಾದವ
ರನ್ನು ಪೂರ್ವಕರ್ಮಾನುಸಾರವಾಗಿ ಕಲ್ಪಿಸಿದನು. ಅನಂತರ ತನ್ನಿಂದ
ಸೃಷ್ಟರಾದವರಿಗೆ ಭೋಗಸ್ಥಾನಗಳಂ ಕಲ್ಪಿಸಿದನು. (ಜ್ಯೋತಿಷ್ಟೋಮಾ
ದಿ ಕರ್ಮಗಳಿಗೆ ಫಲಭೂತವಾದ ದುಃಖಸಂಬಂಧವಿಲ್ಲದೆಯೂ, ಸುಖಪ್ರ
ಚುರವಾಗಿಯೂ, ಇರುವ ಸ್ವರ್ಗಾದಿ ಲೋಕಗಳಂ ನಿರ್ಮಿಸಿದನು)

ವರ್ಣಾಶ್ರಮಾಚಾರಗಳಿಂ ವಿಭಕ್ತರಾದ ಮನುಷ್ಯರಿಗೂ, ತಿರ್ಯಕ್ಕು
ಗಳಿಗೂ, ಭೋಗಸ್ಥಾನವಾದ ಸುಖದುಃಖ ಮಿಶ್ರವಾದ ಭೂಮಿಯನ್ನೂ,
ಪಕ್ಷಿಗಳಿಗೂ, ವಿದ್ಯಾಧರ ಗಂಧರ್ವಾದಿಗಳಿಗೂ, ವಿಹಾರಸ್ಥಾನವಾದ ಆಕಾ
ಶವನ್ನೂ ಕಲ್ಪಿಸಿದನು. ಇದಕ್ಕೆ ಮೇಲ್ಭಾಗದಲ್ಲಿ ಕಲ್ಪವಾಸಿಗಳಾದವರಿಗೆ
ಭೋಗಸ್ಥಾನವಾದ ಮಹರ್ಲೋಕಾದಿಗಳನ್ನು ಸೃಷ್ಟಿಸಿದನು. ಇಂತಹ
ಪರಮಾತ್ಮನು, ಸ್ವಸಂಕಲ್ಪ ಮಾತ್ರದಿಂದ ನನ್ನನ್ನು ಶುದ್ಧಸ್ವಭಾವನ
ನ್ನಾಗಿ ಮಾಡಲಿ. ಎಂದು ಭಗವಂತನಾದ ನಾರಾಯಣನನ್ನು ಧ್ಯಾನಿಸಿ,
ನಾರಾಯಣನ ಪಾದಕಮಲದ್ದೆಶೆಯಿಂದ ತನ್ನ ಶಿರಸ್ಸಿನಲ್ಲಿ ಗಂಗೆಯು ಬೀ
ಳುವದಾಗಿ ಧ್ಯಾನಿಸಿ,

ಋ॥ ಯತ್ಪೃಥಿವ್ಯಾಗ್ಂರಜಸ್ಸ್ವಮಾನ್ತರಿಕ್ಷೇವಿರೋದಸೀಇಮಾಗ್ಂ

ಸ್ತದಾಪೋವರುಣಃ ಪುನಾತ್ವಘಮರ್ಷಣಃ । ವಿಷಭೂತಸ್ಯ

ಭವ್ಯೇಭುವನಸ್ಯಗೋಪ್ತಾ ವಿಷಪುಣ್ಯಕೃತಾಂಲೋಕಾ ನೇಷ

ಮೃತ್ಯೋರ್ಹಿರಣ್ಮಯಂ, ದ್ಯಾವಾಪೃಥಿವ್ಯೋ ರ್ಹಿರಣ್ಮಯ

ಗ್ಂಸಗ್ಂಶ್ರಿತಗ್ಗ್ಂಸುವಃ । ಸನಸ್ಸುವಸ್ಸಗ್ಂಶಿಶಾಧಿ ॥

ಎಂದು ಅಂಜಲಿ (ಬೊಗಸೆ) ಯಿಂದ ಉದಕವನ್ನು ಶಿರಸ್ಸಿನಲ್ಲಿ ಅಭಿಷೇಕ ಮಾಡಿಕೊಂಡು.

ಅರ್ಥ॥ ಭೂಮಿಷ್ಠರಾದ ನಮ್ಮಿಂದ ಯಾವ ಭಗವದಪಚಾರ ಭಾಗವತಾಪಚಾರರೂಪವಾದ ಪಾಪಗಳು ಮಾಡಲ್ಪಟ್ಟಿರುವವೋ, ಅಂತರಿಕ್ಷವಾಸಿಗಳಾಗಿದ್ದ ಕಾಲದಲ್ಲಿ ಯಾವ ಪಾಪವು ಮಾಡಲ್ಪಟ್ಟಿರುವದೋ, ದ್ಯಾವಾಪೃಥಿವಿಗಳಲ್ಲಿ ಯಾವ ಪಾಪವು ಮಾಡಲ್ಪಟ್ಟಿರುವದೋ, ಆ ಸಕಲವಾದ ಪಾಪಪ್ರದೇಶದಿಂದಲೂ, ಪಾಪಾಚರಣೋದ್ಯುಕ್ತರಾದ ನಮ್ಮನ್ನು ಜಲಗಳೂ, ಜಲಾಧಿಪತಿಯಾದ ವರುಣನೂ, ವರುಣನಿಗೂ ರಾಜನಾದ ಸರ್ವಪಾಪನಾಶಕನಾದ ಪುರುಷೋತ್ತಮನೂ, ಪರಿಶುದ್ಧರನ್ನಾಗಿ ಮಾಡಲಿ.

ಈ ಪಾಪನಾಶಕರನಾದ ಪುರುಷೋತ್ತಮನು, ದೇವ, ತಿರ್ಯಕ್ ಮನುಷ್ಯ, ಸ್ಥಾವರಾತ್ಮಕವಾದ ಈ ಪ್ರಪಂಚವಂ ರಕ್ಷಿಸುವದಕ್ಕೋಸ್ಕರವೇ ನಿತ್ಯವಾದ ಪರಮಪದದಲ್ಲಿ ವಾಸಮಾಡುವನು, ಸುಕೃತವಂಮಾಡಿದ ಧಾರ್ಮಿಕರನ್ನು ರಕ್ಷಿಸುವ ಉದ್ದೇಶ್ಯವಾಗಿ ಸ್ವರ್ಗಾದಿಲೋಕಗಳಲ್ಲಿ ವಾಸಮಾಡುವನು.

ಮರಣಹೇತು ಭೂತನಾದ ಯಮಧರ್ಮರಾಯನ ಹಿತ್ತಲಿನಾಗಿಯೂ ಯಿರುವ ಲೋಕದಲ್ಲಿ ತಲ್ಲೋಕವಾಸಿಗಳ ರಕ್ಷಣಕ್ಕಾಗಿ ವಾಸಮಾಡುವನು.

ಈ ಪ್ರಕಾರವಾಗಿಯೂ ದ್ಯಾವಾಪೃಥಿವಿಗಳಲ್ಲಿ ಸರ್ವ ರಕ್ಷಣಾರ್ಥವಾಗಿ,

ಹಿತರಮಣೀಯ ರೂಪನಾಗಿ ಸನ್ನಿಹಿತನಾದ ಪುರುಷೋತ್ತಮನೇ ನೀನು
ನಿನ್ನ ಪರಿಚಾರಕರಾದ ನಮ್ಮನ್ನು ಸುಖರೂಪನಾಗಿ ಚೆನ್ನಾಗಿ ಅನುಗ್ರ
ಹಿಸು. (ಸರ್ವಪಾಪಗಳ ದೆಸೆಯಿಂದಲೂ ಶುದ್ಧರನ್ನಾಗಿ ಮಾಡಿ ಮಂಗ
ಳಾಚರಣಗಳಲ್ಲಿ ಶಿಕ್ಷಿಸು.)

ಶ್ರು॥ ಅರ್ದ್ರಂಜ್ವಲತಿಜ್ಯೋತಿ ರಹಮಸ್ಮಿ ಜ್ಯೋತಿರ್ಜ್ವಲತಿಬ್ರಹ್ಮಾಹ

ಮಸ್ಮಿಯೋಽಹಮಸ್ಮಿ ಬ್ರಹ್ಮಾಹಮಸ್ಮಿ ಅಹಮೇವಾಹಮ್ಮಾಂಜ್ಜು

ಹೋಮಿಸ್ವಾಹಾ ॥

ಎಂದು (ಆಚಮನದೋಪಾದಿಯಲ್ಲಿ ಉದಕವನ್ನು ತೆಗೆದುಕೊಂಡು)
ಜಲಪಾನಮಾಡಿ.

ಅರ್ಥ॥ ಆಹ್ಲಾದಕರವಾದ ಯಾವ ಪರಂಜ್ಯೋತಿಸ್ಸ್ವರೂಪದಿಂದ
ಪ್ರಕಾಶಿಸುವದೋ (ಸ್ವಧರ್ಮ ಭೂತಜ್ಞಾನದಿಂದ ಸರ್ವವಂ ತಿಳಿಯುವ
ದೋ) ಅನ್ಯಶರೀರವಲ್ಲಿ ಪ್ರಿಯಾದಿಗಳನ್ನು ಕರತಲಾಮಲಕದೋಪಾದಿ
ಯಲ್ಲಿ (ಸರ್ವಜ್ಞತ್ವವುಳ್ಳೀಣವರಿಂದ) ನೋಡುವುದೋ ಆ ಬ್ರಹ್ಮಪೇ
ನಾನು (ತಚ್ಛರೀರತ್ವದಿಂದ ಶೇಷಭೂತನಾದೆನೆಂದು ಅನುಸಂಧಾನಮಾಡು
ವೆನೆಂದು ಭಾವವು) ಪೂರ್ವೋಕ್ತ ಪರಬ್ರಹ್ಮನ್ಯನಾಗಿಯೂ ದೇಹೇಂ
ದ್ರಿಯಾದಿವಿಲಕ್ಷಣನಾಗಿಯೂ ಇರುವ ನಾನು ಬ್ರಹ್ಮಾತ್ಮಕನೆಂದು ಅನು
ಸಂಧಾನಮಾಡುವೆನು.

ಶರೀರಾದಿ ವ್ಯತಿರಿಕ್ತನಾಗಿಯೂ ಜ್ಞಾನಸ್ವರೂಪನಾಗಿಯೂ ಇರುವ
ನಾನು ನನ್ನನ್ನು ಪರಂಬ್ರಹ್ಮನಾದ ನಾರಾಯಣನಲ್ಲಿ ಪ್ರಕ್ಷೇಪಮಾಡುವೆ
ನು (ಸುಹುತಾಹುತಿಯನ್ನೋಪಾದಿಯಲ್ಲಿ ಪ್ರಕ್ಷೇಪಮಾಡಿ ಸ್ವರೂಪಾಭಿನಿ
ಷ್ಪತ್ತಿಯಿಂದ ಕೃತಾರ್ಥನಾಗುವೆನೆಂದು ಭಾವವು)

ಈ ಮಂತ್ರದಲ್ಲಿ ಆಚಮನವ್ಯಾಜದಿಂದ ತನ್ನನ್ನು ಪರಂಬ್ರಹ್ಮನಲ್ಲಿ ಸ
ಮರ್ಪಿಸುವದೆಂಬದಾಗಿ ಸ್ನಾನಕ್ಕೆ ಪರಮಶುದ್ಧ್ಯರ್ಥವಾಗಿ ಆತ್ಮಯೋ
ಗರೂಪವಾದ ಮಾನಸಸ್ನಾನವು ಹೇಳಲ್ಪಟ್ಟಂತಾದುದು.

ಶೃ॥ ಅಕಾರ್ಯಕಾರ್ಯವಕೀರ್ಣೀ ಸ್ತೇನೋಭ್ರೂಣಹಾಗುರುತಲ್ಪಗಃ । ವರುಣೋಽಪಾಮಘಮರ್ಷಣಸ್ತಸ್ಮಾತ್ಪಾಪಾತ್ಪ್ರಮುಚ್ಯತೇ। ರಜೋಭೂಮಿಸ್ತ್ವಮಾಗ್‌ಂರೋದಯಸ್ವಪ್ರವದಂತಿ ಧೀರಾಃ । ಪುನಂತ್ವೃಷಯಃಪುನಂತುವಸವಃಪುನಾತುವರುಣಃಪುನಾತ್ವಘಮರ್ಷಣಃ ।

ಎಂದು ಎರಡು ಮಂತ್ರಗಳಿಂದ ಪ್ರೋಕ್ಷಿಸಿಕೊಂಡು ಆಚಮನವಂ ಮಾಡಿ ಪ್ರಾಣಾಯಾಮವ್ಯು.

ಅರ್ಥ॥ (ರಹಸ್ಯಕೃತ ಪಾಪಪ್ರಾಯಶ್ಚಿತ್ತವು ಹೇಳಲ್ಪಡುವುದು)

ನಿಷಿದ್ಧಾಚಾರವುಳ್ಳವನು, ಬ್ರಹ್ಮಚರ್ಯವ್ರತಹೀನನು, ಬ್ರಾಹ್ಮಣಸ್ವರ್ಣಾಪಹಾರಿಯು, ವೇದವಿದಗ್ರೇಸರ ಸಂಹಾರಕನು, ಗುರುಭಾರ್ಯಾಗಾಮಿಯು ಇವರೆಲ್ಲರೂ ಈ ಮಂತ್ರಪ್ರಭಾವದಿಂದ (ಸ್ವಕೃತಪಾಪಗಳೆಲ್ಲವೂ ದಹನವಾಗುವ ಪ್ರಯುಕ್ತ) ಪಾಪಗಳ ದೆಸೆಯಿಂದ ಬಿಡಲ್ಪಡುವರು.

ಈ ಮಂತ್ರ ಪ್ರತಿಪಾದ್ಯನಾದ ವರುಣನು ಆ ವರುಣನಿಗೆ ಅಂತರಾತ್ಮಕನಾದ ಪಾಪನಾಶಕನಾದ ನಾರಾಯಣನೂ ಸಹ ಅನಾದಿಕಾಲದಿಂದಲೂ ಈ ಪ್ರಕಾರವಾದ ಮಹಾಪಾತಕಪ್ರಸನ್ನಿಯಾದ ನನ್ನನ್ನು ಸಕಲ ಪಾಪದ ದೆಸೆಯಿಂದಲೂ ಮುಕ್ತನನ್ನಾಗಿ ಮಾಡಲಿ.

ಅಘಮರ್ಷಣಸ್ನಾನ ಮಾಡದವ ನನ್ನ ಕರ್ಮಭೂಮಿಯು ರೋದನ ಪಡಿಸುವದಾದಪ್ರಯುಕ್ತ ಅಘಮರ್ಷಣ ಸ್ನಾನವೇ ಮಾಡತಕ್ಕದ್ದೆಂದು ಮಹರ್ಷಿಯರು ಹೇಳುವರು, ಈ ಕರ್ಮಭೂಮಿಯು ಈ ಸ್ನಾನ ಮಂತ್ರದಿಂದ ಸ್ನಾನ ಮಾಡದಿರುವವರನ್ನ ದುಃಖಪಡಿಸಲಿ, ಈ ಮಂತ್ರದಿಂದ ಸ್ನಾನಮಾಡುವ ನನ್ನನ್ನ ಪುಣ್ಯಭೂಮಿಯು ಆನಂದಪಡಿಸಲಿ, ಅಘಮರ್ಷಣ ಸ್ನಾನದಿಂದ ಪರಿಶುದ್ಧನಾಗುವ ನನ್ನನ್ನ ಋಷಿಗಳು, ವಸುಗಳು,

ವರುಣನು, ಇವರುಗಳಿಗೆ ಅಂತರಾತ್ಮನಾದ ನಾರಾಯಣನೂ ಅನುವು
ಯಿಂದ ಶುದ್ಧನನ್ನಾಗಿ ಮಾಡಲಿ.

ಪ್ರಾಣಾಯಾಮಾನಂತರ ಶ್ರೀ ಭಗವದಾಜ್ಞಯಾ ಭಗವತ್ಪ್ರೀತ್ಯ
ರ್ಥಂ ಸ್ನಾನಾಂಗ ದೇವರ್ಷಿ ಪಿತೃ ತರ್ಪಣಂಕರಿಷ್ಯೇ (ಎಂದು ಸಂಕಲ್ಪ
ಮಾಡಿ ದೇವತೆಗಳನ್ನೂ ಋಷಿಗಳನ್ನೂ ಪಿತೃಗಳನ್ನೂ ಭಗವದಾತ್ಮಕ
ನ್ನಾಗಿ ಧ್ಯಾನಮಾಡಿ) ಓಂ ಬ್ರಹ್ಮಾದಯೋ ಯೇದೇವಾ ಸ್ತಾಂದೇವಾಂಸ್ತ
ರ್ಪಯಾಮಿ, ಓಂ ಸರ್ವಾನ್‌ದೇವಾಂಸ್ತರ್ಪಯಾಮಿ, ಓಂ ಸರ್ವದೇವಗಣಾ
ಸ್ತರ್ಪಯಾಮಿ, ಓಂ ಸರ್ವದೇವಪತ್ನೀಸ್ತರ್ಪಯಾಮಿ, ಓಂ ಸರ್ವದೇವ
ಗಣ ಪತ್ನೀಸ್ತರ್ಪಯಾಮಿ, (ಎಂದು ದೇವತೀರ್ಥದಿಂದ ಉದಕಧಾರೆಯ
ನ್ನು ಬಿಡುವುದು. ದೇವತೀರ್ಥಾದಿ ಲಕ್ಷಣಗಳು ಹಿಂದೆಯೇ ಬರಿಯಲ್ಪ
ಟ್ಟಿರುವುವು) ಅನಂತರ ಯಜ್ಞೋಪವೀತವನ್ನ ನಿವೀತವಾಗಿ ಮಾಡಿಕೊಂ
ಡು ಉತ್ತರಾಭಿಮುಖನಾಗಿ, ಓಂ ಕೃಷ್ಣದ್ವೈಪಾಯನಾದಯೋ ಯೇಋ
ಷಯಸ್ತಾನ್ ಋಷೀಂಸ್ತರ್ಪಯಾಮಿ, ಓಂ ಸರ್ವಾನ್‌ಋಷೀಂಸ್ತರ್ಪಯಾಮಿ,
ಓಂ ಸರ್ವಋಷಿಗಣಾಂಸ್ತರ್ಪಯಾಮಿ, ಓಂ ಸರ್ವಋಷಿಪತ್ನೀಸ್ತರ್ಪಯಾ
ಮಿ, ಓಂ ಸರ್ವಋಷಿಗಣ ಪತ್ನೀಸ್ತರ್ಪಯಾಮಿ, (ಎಂದು ಋಷಿತೀರ್ಥ
ದಿಂದ ಉದಕವನ್ನು ಬಿಡುವದು.) ಅನಂತರ ಯಜ್ಞೋಪವೀತವನ್ನು ಪ್ರಾ
ಚೀನಾವೀತವಾಗಿ ಮಾಡಿಕೊಂಡು, ದಕ್ಷಿಣಾಭಿಮುಖನಾಗಿ ಓಂ ಸೋಮಃ
ಪಿತೃಮಾನ್ಯಮೋಙ್ಗಿರಸ್ವಾನಗ್ನಿಃ ಕವ್ಯವಾಹನ ಇತ್ಯಾದಯೋ ಯೇ
ಪಿತರಸ್ತಾನ್ ಪಿತೄಂಸ್ತರ್ಪಯಾಮಿ, ಓಂ ಸರ್ವಾನ್ ಪಿತೄಂಸ್ತರ್ಪಯಾಮಿ,
ಓಂ ಸರ್ವಪಿತೃಗಣಾಂಸ್ತರ್ಪಯಾಮಿ, ಓಂ ಸರ್ವಪಿತೃಪತ್ನೀಸ್ತರ್ಪಯಾಮಿ,
ಓಂ ಸರ್ವಪಿತೃಗಣಪತ್ನೀಸ್ತರ್ಪಯಾಮಿ. (ಎಂದು ಪಿತೃತೀರ್ಥದಿಂದ ಉದ
ಕಧಾರೆಯಂ ಬಿಡುವುದು) "ಊರ್ಜಂವಹನ್ತೀರಮೃತಙ್ಘೃತಮ್ಪಯಃ ಕೀ
ಲಾಲಮ್ಪರಿಸ್ರುತಂ ಸ್ವಧಾಸ್ಥ ತರ್ಪಯತಮೇಪಿತೄನ್" ಎಂಬದಾಗಿ ಜಲವನ್ನು
ಅಂಜಲಿಯಿಂದ ತ್ರಿರಾವೃತ್ತಿ ಪ್ರದಕ್ಷಣಮಾಡಿ ಬಲಪಾರ್ಶ್ವದಲ್ಲಿ ದಡವನ್ನು
ಶೋಧಿಸಿ, "ತೃಪ್ಯತ, ತೃಪ್ಯತ, ತೃಪ್ಯತ," ಎಂಬದಾಗಿ ತ್ರಿರಾವೃತ್ತಿ ಉದ
ಕಾಂಜಲಿಯನ್ನ ಬಿಟ್ಟು ಆ ತೀರವಂ ಪುನಃ ಶೋಧಿಸಿ ಉಪವೀತವ
ಮಾಡಿಕೊಂಡು ಸ್ಥಲದಲ್ಲಿ ಒಂದು ಪಾದವನ್ನು ಜಲದಲ್ಲಿ ಒಂದು ಪಾದವ
ನ್ನು ಇಟ್ಟುಕೊಂಡು ದ್ವಿರಾವೃತ್ತಿ ಆಚಮನವಂ ಮಾಡಿ ನಿವೀತವಂ ಮಾ
ಡಿಕೊಂಡು ಉತ್ತರೀಯವನ್ನ ಚತುರ್ಗುಣವನ್ನಾಗಿ ಮಾಡಿಕೊಂಡು.

ಶ್ಲೋ॥ ಏಕೇಚಾಸ್ಮತ್ಕುಲೇಜಾತಾಃ ಅಪುತ್ರಾಗೋತ್ರಜಾಮೃತಾಃ ।
ತೇಗೃಹ್ಣಂತುಮಯಾದತ್ತಂ ವಸ್ತ್ರನಿಷ್ಪೀಡನೋದಕಂ ॥

ಅರ್ಥ॥ ನಮ್ಮ ಕುಲದಲ್ಲಿ ಅಥವಾ ಗೋತ್ರದಲ್ಲಿ ಯಾರು ಉತ್ಪನ್ನರಾದವರಾಗಿ ಸಂತಾನಹೀನರಾಗಿ ಮೃತರಾಗಿರುವರೋ ಅವರುಗಳು ನನ್ನಿಂದ ಕೊಡಲ್ಪಟ್ಟ ವಸ್ತ್ರೋದಕವಂ ಗ್ರಹಿಸಲಿ ಎಂಬ ಈ ಮಂತ್ರದಿಂದ ಅಪ್ರದಕ್ಷಿಣವಾಗಿ ಸ್ಥಲದಲ್ಲಿ ಹಿಂಡಿ, ಹಿಂಡಿದ ಆ ವಸ್ತ್ರವನ್ನು ಎಡಗೈಯ ಮಣಿಕಟ್ಟಿನಲ್ಲಿಟ್ಟುಕೊಂಡು ಉಪವೀತವಂ ಮಾಡಿ ಕೂತುಕೊಂಡು ಆಚಮನವಂ ಮಾಡಿ ಮುಂಭಾಗದಲ್ಲಿ ಕೇಶೋದಕವಂ ಬಿಟ್ಟು;

ಶ್ಲೋ॥ ಯಜ್ಞೇಶಾಚ್ಯುತಗೋವಿಂದ ಮಾಧವಾನಂತಕೇಶವ ।
ಕೃಷ್ಣವಿಷ್ಣೋಹೃಷೀಕೇಶ ವಾಸುದೇವನಮೋಸ್ತುತೇ ॥

ಇತ್ಯಾದ್ಯನುಸಂಧಾನವಂ ಮಾಡುವನಾಗಿ ವಸ್ತ್ರಖಂಡದ್ವಯದಿಂದ (ಒರಸಿಕೊಳ್ಳುವ ಚೌಕಗಳಿಂದ) ಪ್ರತ್ಯೇಕ ಪ್ರತ್ಯೇಕವಾಗಿ ಶಿರಸ್ಸನ್ನೂ ಶರೀರವನ್ನೂ ಚನ್ನಾಗಿ ತೊಡೆಮುಕೊಳ್ಳಬೇಕು.

ತಥಾಚಸ್ಮೃತಿರತ್ನಾಕರೇ॥ ಭರದ್ವಾಜಃ॥ ಸ್ನಾತ್ವೈವಂವಾಸಸಾನ್ಯೇನಶಿರೋಂಗಂಪರಿಮಾರ್ಜಯೇತ್ । ಶಿರೋವಾರಿಶರೀರಾಂಬುವಸ್ತ್ರತೋಯಂಯಥಾಕ್ರಮಂ । ಪಿಬಂತಿದೇವಾಮುನಯಃ ಪಿತರೋಬ್ರಾಹ್ಮಣಸ್ಯತು । ತಸ್ಮಾತ್ಸ್ನಾತೋನಾವಮೃಜ್ಯಾತ್ಸ್ನಾನಶಾಟ್ಯಾನಪಾಣಿನಾ । ಸ್ನಾನವಸ್ತ್ರೇಣಹಸ್ತೇನಯೋದ್ವಿಜೋಂಗಂಪ್ರಮಾರ್ಜತಿ । ವೃಥಾಭವತಿತತ್ಸ್ನಾನಂಪುನಸ್ಸ್ನಾನೇನಶುಧ್ಯತಿ ॥

ಅರ್ಥ। ಪೂರ್ವೋಕ್ತಪ್ರಕಾರದಿಂದ ಸ್ನಾನಮಾಡಿ ಒಂದು ವಸ್ತ್ರಖಂಡದಿಂದ ಶಿರಸ್ಸನ್ನು, ಬೇರೆ ಒಂದು ವಸ್ತ್ರಖಂಡದಿಂದ ಶರೀರವನ್ನೂ ಒರಸಿಕೊಳ್ಳಬೇಕು, ಬ್ರಾಹ್ಮಣನ ಶಿರೋದಕವನ್ನು ದೇವತೆಗಳೂ, ಶರೀರೋದಕವನ್ನು ಋಷಿಗಳೂ, ವಸ್ತ್ರೋದಕವನ್ನು ಪಿತೃಗಳೂ ಪಾನಮಾಡುತ್ತಾರಾಗಿ ಸ್ನಾನಶಾಟಿಯಿಂದಲೂ ಕೈಯಿಂದಲೂ ಶರೀರವನ್ನು ತೊಡೆದುಕೊಳ್ಳಬಾರದು, ಸ್ನಾನವಸ್ತ್ರದಿಂದಾಗಲೀ ಕೈಯಿಂದಾಗಲೀ ಯಾವನು

ತೊಡೆದುಕೊಳ್ಳುವನೋ ಅವಂ ಮಾಡಿದ ಸ್ನಾನವು ವ್ಯರ್ಥವಾಗುವುದು, ಅಲ್ಲದೇ ಪುನಸ್ಸ್ನಾನದಿಂದಲೇ ಶುದ್ಧನಾಗುವನು.

## ಅಥ ವಸ್ತ್ರಧಾರಣ ವಿಧಿಃ.

ಭರದ್ವಾಜಃ॥ ಶುಚಿವ್ರೋಹವ್ಯಾಮರುತಇತ್ಯುಕ್ತ್ವಾಶುದ್ಧಮಂಬರಂ।
ಸಂಪ್ರೋಕ್ಷ್ಯದೇವಸ್ಯತ್ವೇತಿವ್ಯಾಹೃತ್ಯಾದಾಯಭಾಸ್ಕರಂ।
ಉದುತ್ಯಂಜಾತವೇದಸಮಿತ್ಯುಕ್ತ್ವಾದರ್ಶಯೇತ್ತತಃ।
ಆವಹಂತೀತ್ಯುದಾಹೃತ್ಯಪರಿಧಾಯದ್ವಿರಾಚಮೇತ್॥

ಅರ್ಥ॥ ಮುಂದೆ ಬರಿಯಲ್ಪಡುವ ಪ್ರಯೋಗದಿಂದಲೇ ಅರ್ಥವು ಸ್ಫುಟವಾಗುವದು.

ಶ್ಲೋ॥ ಓಂಭೂರ್ಭುವಸ್ಸುವಃ, ಶುಚಿವ್ರೋಹವ್ಯಾಮರುತಶ್ಶುಚೀನಾಂಶುಚಿಗ್‌ಂಹಿನೋಮ್ಯಧ್ವರಗ್‌ಂಶುಚಿಭ್ಯಃ। ಋತೇನಸತ್ಯಮೃತಸಾಪಆರ್ಯ, ಶುಚಿಜನ್ಮಾನಶ್ಶುಚಯಃಪಾವಕಾಃ॥

ಎಂಬ ಈ ಮಂತ್ರದಿಂದ ಧೌತ (ಒಣಗಿದ) ವಸ್ತ್ರವಂ ಪ್ರೋಕ್ಷಿಸಿ,

ಶ್ಲೋ॥ ದೇವಸ್ಯತ್ವಾಸವಿತುಃ ಪ್ರಸವೇಶ್ವಿನೋರ್ಬಾಹುಭ್ಯಾಂ ಪೂಷ್ಣೋಹಸ್ತಾಭ್ಯಾಮಾದದೇ॥

ಎಂಬ ಈ ಮಂತ್ರದಿಂದ ತೆಗದುಕೊಂಡು,

ಶ್ಲೋ॥ ಉದುತ್ಯಂಜಾತವೇದಸಂ ದೇವಂವಹಂತಿಕೇತವಃ ದೃಶೇವಿಶ್ವಾಯಸೂರ್ಯಂ॥

ಎಂಬದಾಗಿ ಸೂರ್ಯನಿಗೆ ತೋರಿಸಿ.

ಶ್ಲೋ॥ ಅವಧೂತಗ್‌ಂರಕ್ಷೋವಧೂತಾಅರಾಯತಃ॥

ಎಂಬದಾಗಿ ಒದರಿ.

ಶ್ಲೋ॥ ಆವಹಂತೀವಿತನ್ವಾನಾಕುರ್ವಾಣಾಚೀರಮಾತ್ಮನಃ। ವಾಸಾಗ್‌ಂಸಿಮಮಗಾವಶ್ಚಅನ್ನಪಾನೇಚಸರ್ವದಾ ತತೋಮೇಶ್ರಿಯಮಾವಹ॥

ಎಂಬದಾಗಿ ಹೇಳಿ, ಉತ್ತರೀಯವನ್ನ ಶಿರಸ್ಸಿನಲ್ಲಿ ಸುತ್ತಿ.

ಶ್ಲೋ॥ ಋಷ್ಯರ್ಚನೇಸನಿವೀತಂಸ್ಯಾತ್ತಥಾವಸ್ತ್ರಸ್ಯಧಾರಣೇ।
ರೇತಸ್ಸೇಕೇತಥಾಮೂತ್ರಪುರೀಷೋತ್ಸರ್ಜನೇಪಿಚ॥
ಪವಿತ್ರಂದಕ್ಷಿಣೇಕರ್ಣೇ॥

ಅರ್ಥ॥ ಋಷಿಗಳ ಪೂಜೆಯಲ್ಲಿಯೂ, ವಸ್ತ್ರಧಾರಣದಲ್ಲಿಯೂ, ರೇತೋ ಮೂತ್ರ ಮಲ ವಿಸರ್ಗಗಳಲ್ಲಿಯೂ ನಿವೀತದಿಂದಲೇ ಇರತಕ್ಕದ್ದು. ಎಂಬದಾಗಿ ಹೇಳಿರುವದರಿಂದ ಯಜ್ಞೋಪವೀತವನ್ನ ನಿವೀತವನ್ನಾಗಿ (ಪುಷ್ಪಮಾಲಿಕೆಯನ್ನು ಹಾಕಿಕೊಳ್ಳುವಂತೆ) ಮಾಡಿಕೊಂಡು ಬಲಗಿವಿಯಲ್ಲಿ ಸುತ್ತಿ.

ಶ್ಲೋ॥ ಅಂತರಾಚ್ಛಾದ್ಯಕೌಪೀನಂವಾಸಸೀಪರಿಧಾಪಯೇತ್॥

ಅರ್ಥ॥ ಕೌಪೀನವನ್ನು ಧರಿಸಿಯೇ ಅನಂತರ ವಸ್ತ್ರಧಾರಣ ಮಾಡತಕ್ಕದ್ದು, ಎಂಬ ಪ್ರಮಾಣಾನುಸಾರ ಕೌಪೀನವಂ ಧರಿಸಿ.

ಜಾಬಾಲಿ॥ ಸ್ನಾತ್ವಾಶಿರಸ್ಯವಸ್ತ್ರಂತು ಜಂಘೇಶೋಧ್ಯೇನ್ಮೃದಂಭಸಾ।
ಅಪವಿತ್ರೀಕೃತೇತೇತು ಕೌಪೀನಸ್ರಾವವಾರಿಣಾ॥

ಅರ್ಥ॥ ಸ್ನಾನಾನಂತರ ಸ್ನಾನವಸ್ತ್ರವನ್ನ ತಳ್ಳಿ ಮೊಣಕಾಲುಗಳು ಕೌಪೀನೋದಕಧಾರೆಯಿಂದ ಅಪರಿಶುದ್ಧಗಳಾಗಿರುವ ಪ್ರಯುಕ್ತ ಮಣ್ಣಿನಿಂದ ಕೂಡಿರುವ ಉದಕದಿಂದ ಮೊಣಕಾಲುಗಳನ್ನು ಚನ್ನಾಗಿ ತೊಳೆದು ಅನಂತರ ಚನ್ನಾಗಿ ಕೈಗಳನ್ನು ತೊಳೆದುಕೊಂಡು.

ಶ್ಲೋ॥ ಪುರತಸ್ತ್ರುಚ್ಛ್ರತುಷ್ಕಂಚ್ಛಃಪೃಷ್ಠತಶ್ಚೈಕಕಚ್ಛವಾನ್।
ದೈವೇಪಿತ್ರೇತಥಾಬ್ರಾಹ್ಮೇಪಂಚಕಚ್ಛೋಭವೇನ್ನರಃ।
ಪುರಃಕಚ್ಛಂಪುರೋಧಾರ್ಯಂಪಶ್ಚಾತ್ಕಚ್ಛಂತುಪೃಷ್ಠತಃ॥

ಎಂಬಂತೆ ಪಂಚಕಚ್ಛದಿಂದ ಕೂಡಿದ ವಸ್ತ್ರವನ್ನು ಉಟ್ಟುಕೊಂಡು.

ಅರ್ಥ॥ ದೇವಪಿತ್ರಾದಿ ಎಲ್ಲಾ ಕರ್ಮಗಳಲ್ಲಿಯೂ ಕೂಡಾ ಮುಂಭಾಗದಲ್ಲಿ ನಾಲ್ಕು ಕಚ್ಛವೂ ಹಿಂಭಾಗದಲ್ಲಿ ಒಂದು ಕಚ್ಛವೂ ಎಂಬ ಪಂಚಕಚ್ಛದಿಂದ ಕೂಡಿರುವ ವಸ್ತ್ರವನ್ನೇ ಉಟ್ಟುಕೊಳ್ಳಬೇಕು. ಅದರಲ್ಲಿ ಪ್ರಥಮತಃ ಮುಂಭಾಗದ ಕಚ್ಛಗಳನ್ನೇ ಧರಿಸಿ ಅನಂತರ ಹಿಂಭಾಗದ ಕಚ್ಛವನ್ನು ಧರಿಸಬೇಕು, ಅನಂತರ ಉತ್ತರೀಯವನ್ನು ಧರಿಸುವದು.

ಚಂದ್ರಿಕಾಯಾಂ॥ ನೋತ್ತರೀಯಮಧಃಕುರ್ಯಾನ್ನೋಪರ್ಯಧಸ್ಥ ಮಂಬರಂ ॥

ಅರ್ಥ॥ ಉಟ್ಟುಕೊಳ್ಳುವ ವಸ್ತ್ರವಂ ಯಾವಾಗಲೂ ಹೊದ್ದುಕೊಳ್ಳಬಾರದು. ಹೊದ್ದುಕೊಳ್ಳುವ ವಸ್ತ್ರವಂ ಯಾವಾಗಲೂ ಉಟ್ಟುಕೊಳ್ಳಬಾರದು.

ಯೋಗಯಾಜ್ಞವಲ್ಕ್ಯಃ॥ ಸ್ನಾತ್ವೈವಂವಾಸಸೀಧೌತೇಅಚ್ಛಿನ್ನೇ ಪರಿಧಾಯವೈ। ಪ್ರಕ್ಷಾಳ್ಯೋರೂಮೃದಾದ್ಭಿಶ್ಚಹಸ್ತೌಪ್ರಕ್ಷಾಳಯೇತ್ತತಃ ॥

ಅನ್ಯತ್ರ॥ ನಜೀರ್ಣಮಲವದ್ವಾಸಾಭವೇಚ್ಚವಿಭವೇಸತಿ ॥

ಅರ್ಥ॥ ಹೀಗೆ ಸ್ನಾನವಂಮಾಡಿ ಧೌತವಸ್ತ್ರವಂ ಉಟ್ಟುಕೊಂಡು, ಮಣ್ಣಿನಿಂ ಕೂಡಿರುವ ಉದಕದಿಂದ ತೊಡೆಗಳಂ ತೊಳೆದು, ಹಸ್ತಗಳನ್ನು ತೊಳೆದುಕೊಳ್ಳುವುದು. ಅನುಕೂಲವಿರುವ ಪಕ್ಷ ಜೀರ್ಣವಾದ ವಸ್ತ್ರವನ್ನೂ, ಕೊಳೆಯಾದ ವಸ್ತ್ರವನ್ನೂ ಉಡಬಾರದು.

ಭೃಗುಃ॥ ಬ್ರಾಹ್ಮಣಸ್ಯಸಿತಂವಸ್ತ್ರಂನೃಪತೇರಕ್ತಮುಲ್ಬಣಂ।
ಪೀತಂವೈಶ್ಯಸ್ಯಶೂದ್ರಸ್ಯನೀಲಂಮಲವದಿಷ್ಯತೇ ॥

ಅರ್ಥ॥ ಬ್ರಾಹ್ಮಣನಿಗೆ ಬಿಳೀವಸ್ತ್ರವೂ, ಕ್ಷತ್ರಿಯನಿಗೆ ಕೆಂಪುವಸ್ತ್ರವೂ, ವೈಶ್ಯನಿಗೆ ಹಳದಿವಸ್ತ್ರವೂ, ಶೂದ್ರನಿಗೆ ನೀಲವಸ್ತ್ರವೂ, ವಿಧಾಯಕವಾಗಿರುವುದು.

ವ್ಯಾಸಃ॥ ಸ್ನಾನಂಕೃತ್ವಾರ್ದ್ರವಸ್ತ್ರಂತುಊರ್ಧ್ವಮುದ್ಧಾರಯೇದ್ದ್ವಿಜಃ।
ಸ್ನಾನವಸ್ತ್ರಮಧಸ್ತಾಚ್ಚೇತ್ಪುನಸ್ಸ್ನಾನೇನಶುಧ್ಯತಿ॥

ಅರ್ಥ॥ ಸ್ನಾನಾನಂತರ ಒದ್ದೆಯಾದ ಸ್ನಾನವಸ್ತ್ರವನ್ನು ಮೇಲಕ್ಕೆ ತೆಗೆದು ಹಾಕಬೇಕೇ ವಿನಹಾ ಕೆಳಗೆ ಹಾಕಬಾರದು, ಕೆಳಗೆ ಹಾಕಿದ್ದಾದರೆ ಪುನಸ್ಸ್ನಾನದಿಂದ ಶುದ್ಧನಾಗುವನು.

ಉತ್ತರೀಯಧಾರಣಾನಂತರ ಉಪವೀತಿಯಾಗಿ ತೊಡೆಗಳಂ ತೊಳೆದು ತ್ರಿಕಾಲುಗಳಂ ತೊಳೆದುಕೊಂಡು, ಉಟ್ಟುಕೊಂಡಿದ್ದ ಸ್ನಾನವಸ್ತ್ರವಂ

ಪ್ರೋಕ್ಷಿಸಿ, ಚತುರ್ಗುಣವನ್ನಾಗಿಮಾಡಿ, ನಿವೀತಿಯಿಂದ ಅಮಂತ್ರಕವಾಗಿ ಹಿಂಡಿ (ಉಚ್ಛಿಷ್ಟಭಾಗಿನೋದಾಸಾಃಯೇಮೃತಾಸ್ತೇತ್ವಮಂತ್ರಕಂ । ತೃಪ್ಯಂತುತನುತಾಂಪ್ರಾಪ್ತಾಃಮಮಸಂಬಂಧಿನೋಮೃತಾಃ॥ ಎಂಬ ಮಂತ್ರದಿಂದ ಹಿಂಡುವುದು ಎಂಬದಾಗಿ ಕೆಲವರಭಿಪ್ರಾಯಪಡುವರು) ಎಡಗೈ ಮಣಿಕಟ್ಟನಲ್ಲಿಟ್ಟು ಉಪವೀತಿಯಾಗಿ ಆಚಮನವಂ ಮಾಡಿ ಪ್ರಾಣಾಯಾಮಾನಂತರ, 'ಮಂತ್ರಸ್ನಾನಂಕರಿಷ್ಯೇ' ಎಂದು ಸಂಕಲ್ಪಮಾಡಿ, 'ಆಪೋಹಿಷ್ಠಾ +ಚನಃ' ಎಂದು ಶಿರಸ್ಸಿಗೆ ಪ್ರೋಕ್ಷಿಸಿಕೊಳ್ಳುವುದು.

ಅನಂತರ॥

ಶ್ಲೋ॥ ಹೃಸ್ಥಿತಂಪುಂಡರೀಕಾಕ್ಷಂ ಮಂತ್ರಮೂರ್ತಿಂಹರಿಂಸ್ಮರೇತ್।
ಅನಂತಾದಿತ್ಯಸಂಕಾಶಂವಾಸುದೇವಂಚತುರ್ಭುಜಂ ॥

ಇತ್ಯಾದಿ ಶ್ಲೋಕೋಕ್ತರೀತಿಯಾಗಿ ಭಗವದ್ಧ್ಯಾನರೂಪವಾದ ಮಾನಸಿಕಸ್ನಾನವು ಮಾಡತಕ್ಕದ್ದೆನ್ನುವರು.

ಉಕ್ತವಾದ ವಾರುಣಸ್ನಾನದಲ್ಲಿ ಶಕ್ತಿಯಿಲ್ಲದವರಿಗೆ, 'ಅಶಕ್ತಾತ್ತಿರಿಸ್ಕಂವಾ' ಎಂಬಂತೆ ಕಂಠಸ್ನಾನವು ಅರ್ಹವಾದುದು, ಅದರಲ್ಲಿಯೂ ಶಕ್ತಿ ಇಲ್ಲದ ಪಕ್ಷ.

ಭರದ್ವಾಜಃ॥ ನಾಭೇರಧಃಪ್ರವಿಕ್ಷ್ಯಾಲ್ಪುಕಟಿಂಪ್ರಕ್ಷಾಳ್ಯಮೃಜ್ಜಲೈಃ।
ಆರ್ದ್ರೇಣಕರ್ಪಟೇನಾಂಗಮಾರ್ಜನಂಕಾಪಿಲಂಸ್ಮೃತಂ॥

ಅರ್ಥ॥ ಪಾದಾದಿನಾಭಿಪರ್ಯಂತ ಮೃಜ್ಜಲದಿಂದ ಚನ್ನಾಗಿ ತೊಳೆದುಕೊಂಡು ಒದ್ದೆಯಾದ ಬಟ್ಟೆಯಿಂದ ಸರ್ವಾಂಗ ಮಾರ್ಜನ (ಒರಸಿಕೊಳ್ಳುವ) ರೂಪವಾದ ಕಾಪಿಲಸ್ನಾನವು ಮಾಡತಕ್ಕದ್ದು, ಕಾಪಿಲಸ್ನಾನಕ್ಕೂ ಶಕ್ತಿಯಿಲ್ಲದ ಪಕ್ಷ.

ಶ್ಲೋ॥ ಮಾಂತ್ರಂಭೌಮಂತಥಾಗ್ನೇಯಂವಾಯವ್ಯಂದಿವ್ಯಮೇವಚ।
ವಾರುಣಂಮಾನಸಂಚೇತಿಸಪ್ತಸ್ನಾನಾನ್ಯನುಕ್ರಮಾತ್॥

ಅರ್ಥ॥ ಮಂತ್ರ, ಭೌಮ, ಆಗ್ನೇಯ, ವಾಯವ್ಯ, ದಿವ್ಯ, ಮಾನಸನಗಳೆಂಬ ಸ್ನಾನಗಳು ಕ್ರಮವಾಗಿ ಚೋದಿತವಾಗಿರುವವು.

ಸ್ಮೃತಿ॥ ಆಪೋಹಿಷ್ಠಾದಿಭಿರ್ಮಂತ್ರಂಮೃದಾಲಂಭಸ್ತು ಪಾರ್ಥಿವಃ।
ಆಗ್ನೇಯಂಭಸ್ಮನಾಸ್ನಾನಂವಾಯವ್ಯಂಗೋರಜಸ್ಮೃತಂ॥
ಯತ್ತುಸಾತಪವರ್ಷೇಣದಿವ್ಯಂತತ್ಸ್ನಾನಮುಚ್ಯತೇ।
ವಾರುಣಂಚಾವಗಾಹಸ್ತು ಮಾನಸಂವಿಷ್ಣುಚಿಂತನಂ॥

ಅರ್ಥ॥ ಆಪೋಹಿಷ್ಠಾದಿ ಮಂತ್ರಗಳಿಂ ಪ್ರೋಕ್ಷಣವೇ ಮಂತ್ರಸ್ನಾನವು, ಕೇಶವಾದಿನಾಮಗಳಿಂದೆ ಊರ್ಧ್ವಪುಂಡ್ರಧಾರಣವೇ ಪಾರ್ಥಿವಸ್ನಾನವು, ಭಸ್ಮವಂತೊಡೆದುಕೊಳ್ಳುವುದೇ ಆಗ್ನೇಯಸ್ನಾನವು, ಇದು ಪಾಶುಪತವ್ರತನಿಷ್ಠರ ವಿಷಯವು.

ಸೂರ್ಯಾಸ್ತಮಯಾನಂತರ ಗೋವುಗಳ ಧೂಳಿಯನ್ನು ತೆಗೆದುಕೊಂಡು ಧರಿಸುವದೇ ವಾಯವ್ಯ ಸ್ನಾನವು.

ಬಿಸಿಲು ಕೂಡಿದ ಮಳೆಯಿಂದ ಸ್ನಾನವೇ ದಿವ್ಯಸ್ನಾನವು.

ವಿಷ್ಣುವನ್ನು ಧ್ಯಾನಿಸುವುದೇ ಮಾನಸಸ್ನಾನವು.

ಪೂರ್ವಾಚಾರ್ಯೋಕ್ತ ಸ್ನಾನವಿಧಿಯು ಮಾಧ್ಯಾಹ್ನಿಕದಲ್ಲಿ ಬರೆಯಲ್ಪಡುವುದು.

## ಅಥೋರ್ಧ್ವಪುಂಡ್ರ ವಿಧಿಃ.

ಮಾಧವೀಯೇ, ಸ್ಮೃತಿರತ್ನಾಕರೇ, ಬ್ರಹ್ಮಾಂಡಪುರಾಣೇ, ಬ್ರಹ್ಮಾಣಂಪ್ರತಿಭಗವಾನಾಹ.

ಶ್ಲೋ॥ ಪರ್ವತಾಗ್ರೇನದೀತೀರೇಮಮಕ್ಷೇತ್ರೇವಿಶೇಷತಃ।
ಸಿಂಧುತೀರೇಚವಲ್ಮೀಕೇತುಲಸೀಮೂಲಮಾಶ್ರಿತೇ।
ಮೃದಏತಾಸ್ತುಸಂಗ್ರಾಹ್ಯಾವರ್ಜಯೇದನ್ಯಮೃತ್ತಿಕಾಃ॥

ಅರ್ಥ॥ ಪರ್ವತಾಗ್ರದಲ್ಲಿಯೂ, ನದೀತೀರಗಳಲ್ಲಿಯೂ, ಭಗವತ್ಕ್ಷೇತ್ರದಲ್ಲಿಯೂ, ತುಳಸೀಗಿಡಗಳ ಬುಡವನ್ನು ಆಶ್ರಯಿಸಿರುವ ಹುತ್ತದಲ್ಲಿಯೂ, ಮಣ್ಣುಗಳನ್ನು ಅಂಗೀಕರಿಸಬಹುದು. ಇತರವಾದ ಮಣ್ಣುಗಳನ್ನು ಅಂಗೀಕರಿಸಬಾರದು.

ಶ್ಲೋ॥ ಶ್ಯಾಮಂಶಾಂತಿಕರಂಪ್ರೋಕ್ತಂರಕ್ತಂವಶ್ಯಕರಂಭವೇತ್ ।
ಶ್ರೀಕರಂಪೀತಮಿತ್ಯಾಹುಃಶ್ವೇತಂವೈಷ್ಣವಮುಚ್ಯತೇ।
ಅಂಗುಷ್ಠಃಪುಷ್ಟಿದಃಪ್ರೋಕ್ತಃಮಧ್ಯಮಾಯುಷ್ಕರೀಭವೇತ್ ।
ಅನಾಮಿಕಾನ್ನದಾನಿತ್ಯಂಮುಕ್ತಿದಾಚಪ್ರದೇಶಿನೀ ।
ಏತೈರಂಗುಲಿಭೇದೈಸ್ತುಕಾರಯೇನ್ನನಖೈಸ್ಪೃಶೇತ್ ॥

ಅರ್ಥ॥ ಪುಂತ್ರಧಾರಣದಲ್ಲಿ ಶ್ಯಾಮವರ್ಣವಾದ ಮಣ್ಣು ಶಾಂತಿಪ್ರದವಾದದ್ದು. ಕೆಮ್ಮಣ್ಣು ವಶ್ಯಕರವಾದದ್ದು. ಹಳದಿಮಣ್ಣು ಐಶ್ವರ್ಯಪ್ರದವಾದದ್ದು. ಬಿಳುಪಾದಮಣ್ಣು ವೈಷ್ಣವವೆಂಬುವುದು. ಅಂಗುಷ್ಠ (ಹೆಬ್ಬೆಟ್ಟಿನಿಂದ) ದಿಂದ ಪುಂಡ್ರಧಾರಣಮಾಡಿದರೆ ಪುಷ್ಟಿಯುಂಟಾಗುವುದು, ಮಧ್ಯಮಬೆರಳಿನಿಂದ ಪುಂಡ್ರಧಾರಣಮಾಡಿದರೆ ಆಯುಸ್ಸುಅಭಿವೃದ್ಧಿಯಾಗುವುದು, ಅನಾಮಿಕಾಂ (ಚಿಕ್ಕಬೆರಳಿನ ಮಗ್ಗುಲಬೆರಳು) ಗುಲಿಯಿಂದ ಪುಂಡ್ರಧಾರಣಮಾಡಿದರೆ ಅನ್ನಾಭಿ ವೃದ್ಧಿಯಾಗುವುದು, ಪ್ರದೇಶಿನೀ (ಹೆಬ್ಬೆಟ್ಟಿನ ಮಗ್ಗುಲಬೆರಳು) ಬೆರಳಿನಿಂದ ಪುಂಡ್ರಧಾರಣಮಾಡಿದರೆ ಮೋಕ್ಷಪ್ರಾಪ್ತಿಯಾಗುವುದು, ಆದಕಾರಣ ತನಗೆ ಇಷ್ಟವಾದ ಬೆರಳುಗಳಲ್ಲಿ ಧಾರಣಮಾಡಬಹುದು. ಉಗುರುಗಳಿಂದ ಸ್ಪರ್ಶ ಕೂಡಾ ಮಾಡಕೂಡದು.

ಶ್ಲೋ॥ದಶಾಂಗುಲಪ್ರಮಾಣಂತುಉತ್ತಮೋತ್ತಮಮುಚ್ಯತೇ। ನವಾಂಗುಲಂಮಧ್ಯಮಂಸ್ಯಾದಷ್ಟಾಂಗುಲಮತಃಪರಂ । ಸಪ್ತಷಟ್ಪಂಚಭಿಃಪುಂಡ್ರಂಮಧ್ಯಮಂತ್ರಿವಿಧಂಭವೇತ್ । ಲಲಾಟೇಕೇಶವಂವಿಂದ್ಯಾನ್ನಾರಾಯಣಮಥೋದರೇ । ಮಾಧವಂಹೃದಿವಿನ್ಯಸ್ಯಗೋವಿಂದಂಕಂಠಕೂಬರೇ । ಉದರೇದಕ್ಷಿಣೇಪಾರ್ಶ್ವೇವಿಷ್ಣುರಿತ್ಯಭಿಧೀಯತೇ । ತತ್ಪಾರ್ಶ್ವೇಬಾಹುಮಧ್ಯೇತು ಸಂಸ್ಮರೇನ್ಮಧುಸೂದನಂ। ತ್ರಿವಿಕ್ರಮಂಕಂಠದೇಶೇವಾಮಕುಕ್ಷೌತುವಾಮನಂ । ಶ್ರೀಧರಂಬಾಹುಕೇವಾಮೇಹೃಷೀಕೇಶಂತುಕಂಠಕೇ। ಪೃಷ್ಠೇತುಪದ್ಮನಾಭಂಚತ್ರಿಕೇದಾಮೋದರಂಸ್ಮರೇತ್॥ ದ್ವಾದಶೈತಾನಿನಾಮಾನಿವಾಸುದೇವೇತಿಮೂರ್ಧನಿ । ನಾಮಾನ್ಯುಚ್ಚಾರ್ಯವಿಧಿನಾಧಾರಯೇದೂರ್ಧ್ವಪುಂಡ್ರಕಂ । [illegible]

ನ್ನಿತ್ಯಂಊರ್ಧ್ವಪುಂಡ್ರಾಂಕಿತೋನರಃ । ಊರ್ಧ್ವಪುಂಡ್ರಧ
ರೋಮರ್ತ್ಯೋಮ್ರಿಯತೇಯತ್ರಕುತ್ರಚಿತ್ । ಶ್ವಪಾಕೋ
ಪಿವಿಮಾನಸ್ಥೋಮಮಲೋಕೇಮಹೀಯತೇ ॥

ಸತ್ಯವ್ರತೋಪಿ॥ ಊರ್ಧ್ವಪುಂಡ್ರೋಮೃದಾಶುಭ್ರೋಲಲಾಟೇ
ಯಸ್ಯದೃಶ್ಯತೇ । ಚಂಡಾಲೋಪಿವಿಶುದ್ಧಾತ್ಮಪೂಜ್ಯಏವನಸಂ
ಶಯಃ ॥

ಅರ್ಥ॥ ಊರ್ಧ್ವಪುಂಡ್ರ ಪ್ರಯೋಗದಲ್ಲಿಯೇ ಇವುಗಳ ಅರ್ಥವು
ಸ್ಫುಟವಾಗುವುದು.

ಈ ಪ್ರಕಾರ ವಿಧಿಯಿಂದ ಯಾವನು ಊರ್ಧ್ವಪುಂಡ್ರಗಳಂ ಧರಿಸುವ
ನೋ ಅವನು ಅಶುಚಿಯಾದವನಾದಾಗ್ಯೂ, ಅನಾಚಾರಶೀಲನಾದಾಗ್ಯೂ,
ಮನಸ್ಸಿನಿಂದ ಪಾಪಮಾಡುವನಾದರೂ ಪರಿಶುದ್ಧನೆನಿಸುವನು.

ಊರ್ಧ್ವಪುಂಡ್ರಧಾರಿಯಾದ ಮನುಜನು ನೀಚದೇಶದಲ್ಲಿ ಮೃತಿ ಹೊಂ
ದಿದರೂ, ಊರ್ಧ್ವಪುಂಡ್ರ ಮಾಹಾತ್ಮ್ಯದಿಂದ ವಿಮಾನವನ್ನು ಹೊಂದಿದವ
ನಾಗಿ ಭಗವಲ್ಲೋಕವಂ ಪಡೆದು ಅಲ್ಲಿ ಪೂಜಿತನಾಗುವನು.

ಯಾವವನ ಮುಖದಲ್ಲಿ ಶುಭ್ರವಾದ ಮೃದ್ದ್ರವ್ಯವಿರಚಿತವಾದ ಊ
ರ್ಧ್ವಪುಂಡ್ರವು ತೋರುವದೋ ಅವನು ನೀಚ ಜಾತ್ಯುತ್ಪನ್ನನಾದವನಾ
ದರೂ ಪೂಜಾರ್ಹನು—ಸಂಶಯವಿಲ್ಲ.

## ಅಥ ಊರ್ಧ್ವಪುಂಡ್ರ ಪ್ರಯೋಗಃ.

ಸುವರ್ಣಪಾತ್ರದಲ್ಲಿಯೋ, ರಜತಪಾತ್ರದಲ್ಲಿಯೋ, ಎರಡು ಕಣ್ಣಿನಿಂ
ಕೂಡಿರುವ ಕೂರ್ಮಾಕಾರವಾದ ನಾರಿಕೇಳ (ತೆಂಗಿನ) ಪಾತ್ರದಲ್ಲಿಯೋ
ತೀರ್ಥವನ್ನ ತೆಗೆದುಕೊಂಡು ಉದ್ಧರಣಿಯಿಂದ ತೀರ್ಥವಂ ಗ್ರಹಿಸಿ ಅಸ್ತ್ರ
ಮಂತ್ರದಿಂದ (ವೀರ್ಯಾಯಾಸ್ತ್ರಾಯಫಟ್) ಎಡಹಸ್ತ ತಲವನ್ನ ಚನ್ನಾಗಿ
ಶೋಧಿಸಿ ಪ್ರಣವದಿಂದ (ಓಂ) ಮೃತ್ತನ್ನ (ತಿರುಮಣ್ಣೆಲ) ಆ ಕೈಯಲ್ಲಿ
ಇಟ್ಟು ಉದ್ಧರಣಿಯಿಂದ ತೀರ್ಥವಂ ಬಿಟ್ಟು.

ಶ್ಲೋ॥ ಗಂಧದ್ವಾರಾಂದುರಾಧರ್ಷಾಂನಿತ್ಯಪುಷ್ಟಾಂಕರೀಷಿಣೀಂ।
ಈಶ್ವರೀಗ್ಂಸರ್ವಭೂತಾನಾಂತಾಮಿಹೋಪಹ್ವಯೇಶ್ರಿಯಂ॥

ಎಂದು ಶ್ವೇತಮೃತ್ಸ್ನೇಚನವಂ ಮಾಡಿ (ಚನ್ನಾಗಿ ತೇದು) ಅಸ್ತ್ರಮಂತ್ರದಿಂದ ಹತ್ತು ದಿಕ್ಕುಗಳಲ್ಲಿಯೂ ರಕ್ಷೆಯನ್ನಿಟ್ಟು ಪ್ರಣವದಿಂದ ಮಿಶ್ರಮಾಡಿ ಮೂಲಮಂತ್ರದಿಂದ ಅಭಿಮಂತ್ರಿಸಿ, ಮೂಲಮಂತ್ರವು ಮಂತ್ರಜಪ ಪ್ರಕರಣವಲ್ಲಿ ಬರೆಯಲ್ಪಡುವುದು. ಸಂಪ್ರದಾಯಾನುಸಾರವಾಗಿ ನೃಸಿಂಹಬೀಜವಂ ಬರೆದು.

ಶ್ರು॥ ಭಗವಾನ್ಪವಿತ್ರಂವಾಸುದೇವಃಪವಿತ್ರಂ ಶತಧಾರಂಸಹಸ್ರಧಾರಂಅಪರಿಮಿತಧಾರಂಅರಿಷ್ಟಮಚ್ಛಿದ್ರಮಚ್ಯುತಮನಂತಮಕ್ಷಯಮವ್ಯಯಂಪರಮಂಪವಿತ್ರಂಭಗವಾನ್ವಾಸುದೇವಃಪುನಾತು॥

ಎಂದು ಪವಿತ್ರಮಂತ್ರದಿಂದ ಜಲವನ್ನ ಸ್ವಲ್ಪವಾಗಿ ಬಿಟ್ಟು ತರ್ಜನೀ ಬೆರಳಿನಿಂದ ಮೃಜ್ಜಲಗಳನ್ನೊಂದಾಗಿ ಮಾಡಿ ಭಗವತ್ಪಾದಯುಗಳವನ್ನು ಮನಸ್ಸಿನಲ್ಲಿ ಸ್ಮರಿಸುವನಾಗಿ ಬಲಗೈಯಿಂದ ಎಡಗೈಯಲ್ಲಿರುವ ಮಣ್ಣನ್ನು ಮುಚ್ಚಿಕೊಂಡು.

ಶ್ರು॥ ವಿಷ್ಣೋರ್ನುಕಂವೀರ್ಯಾಣಿಪ್ರವೋಚಂ ಯಃಪಾರ್ಥಿವಾನಿ ವಿಮಮೇರಜಾಗ್ಂಸಿಯೋಅಸ್ಕಭಾಯದುತ್ತರಗ್ಂಸಧಸ್ಥಂವಿಚಕ್ರಮಾಣಸ್ತ್ರೇಧೋರುಗಾಯಃ ॥

ಎಂಬ ಈ ಮಂತ್ರದಿಂದಲೂ, ಪಂಚೋಪನಿಷನ್ಮಂತ್ರಗಳಿಂದಲೂ,

(ಓಂಕ್ಷ್ರಾಂನಮಃಪರಾಯಪರಮೇಷ್ಠ್ಯಾತ್ಮನೇನಮಃ ।
ಓಂಯಾಂನಮಃಪರಾಯಪುರುಷಾತ್ಮನೇನಮಃ ।
ಓಂರಾಂನಮಃಪರಾಯವಿಶ್ವಾತ್ಮನೇನಮಃ ।
ಓಂವಾಂನಮಃಪರಾಯನಿವೃತ್ತ್ಯಾತ್ಮನೇನಮಃ ।
ಓಂಲಾಂನಮಃಪರಾಯಸರ್ವಾತ್ಮನೇನಮಃ)

ಈಮೂಲಮಂತ್ರದಿಂದಲೂ ಅಭಿಮಂತ್ರಣ ಮಾಡಿ, ದ್ವಾದಶಾಕ್ಷರದಿಂದ ಭಗವದ್ಭಕ್ತಿರೂಪವಾದ ಫಲವನ್ನು ಪ್ರಾರ್ಥಿಸಿ.

ಶ್ರುತಿ॥ ವಿಷ್ಣೋರರಾಟಮಸಿ, ವಿಷ್ಣೋಃಪೃಷ್ಠಮಸಿ, ವಿಷ್ಣೋಃಶ್ನಪ್ತ್ರೇಸ್ಥೋ, ವಿಷ್ಣೋಸ್ಸ್ಯೂರಸಿ, ವಿಷ್ಣೋರ್ಧ್ರುವಮಸಿ, ವೈಷ್ಣವಮಸಿವಿಷ್ಣವೇತ್ವಾ।

ಎಂಬ ವಿಳು ವೈಷ್ಣವ ಮಂತ್ರಗಳಿಂದ ಅಭಿಮಂತ್ರಿಸಿ, ತರ್ಜನೀ ಬೆ
ಳಸಿಂದ ಪ್ರಣವಮಂತ್ರದಿಂದ ಶಿರಸ್ಸಿನಲ್ಲಿ ಸ್ವಲ್ಪ ಇಟ್ಟು ಅನಾಮಿಕಾ ಬೆ
ಳಸಿಂದಲೋ ಅಥವಾ ತರ್ಜನೀ ಬೆರಳಿನಿಂದಲೋ ಕೇಶವಾಯನಮಃ ಎಂ
ಬದಾಗಿ ಮುಖದಲ್ಲಿ ನಾಸಿಕಾಮೂಲವನ್ನು ಆರಂಭಿಸಿಕೊಂಡು, ನಾಲ್ಕು
ಅಂಗುಲ ಊರ್ಧ್ವ (ಉದ್ದ) ವಾಗಿ ಕೇಶಪರ್ಯಂತ ಧರಿಸತಕ್ಕದ್ದು. ವಿ
ಸ್ತಾರವಲ್ಲಿ ಸೌಕರ್ಯಕ್ಕೆ ಅನುಸಾರವಾಗಿ ಎರಡು ಅಂಗುಲ ಅಥವಾ ಮೂರು
ಅಂಗುಲವಿರಬೇಕು.

ನಾರಾಯಣನಮಃ ಎಂಬದಾಗಿ ಉದರದಲ್ಲಿ ನಾಭಿಪ್ರದೇಶವೇ ಆದಿ
ಯಾಗಿ ದ್ವಾದಶಾಂಗುಲ ಊರ್ಧ್ವವಾಗಿ ಮೂರು ಅಂಗುಲ ವಿಸ್ತಾರವಾಗಿ
ಧರಿಸತಕ್ಕದ್ದು, ಮಾಧವಾಯನಮಃ ಎಂಬದಾಗಿ ಹೃದಯದಲ್ಲಿ ೮ ಅಂ
ಗುಲವುದ್ದವಾಗಿ ೪ ಅಂಗುಲ ಅಗಲವಾಗಿ ಧರಿಸತಕ್ಕದ್ದು, ಗೋವಿಂದಾ
ಯನಮಃ ಎಂದು ಕಂಠದಲ್ಲಿ ೪ ಅಂಗುಲ ಉದ್ದವಾಗಿಯೂ ೩ ಅಂಗುಲ
ವಿಸ್ತಾರವಾಗಿಯೂ ಧರಿಸತಕ್ಕದ್ದು, ವಿಷ್ಣವೇನಮಃ ಎಂಬದಾಗಿ ಕುಕ್ಷಿ
ಯ ಬಲಭಾಗದಲ್ಲಿ ೧೦ ಅಂಗುಲ ಉದ್ದವಾಗಿಯೂ ೩ ಅಂಗುಲ ವಿಸ್ತಾ
ರವಾಗಿಯೂ ಧರಿಸತಕ್ಕದ್ದು, ಮಧುಸೂದನಾಯನಮಃ ಎಂದು ಬಲಬಾ
ಹುವಿನಲ್ಲಿ ೧೨ ಅಂಗುಲ ಊರ್ಧ್ವವಾಗಿಯೂ ೩ ಅಂಗುಲ ವಿಸ್ತಾರವಾಗಿ
ಯೂ, ತ್ರಿವಿಕ್ರಮಾಯನಮಃ ಎಂದು ಕಂಠದ ಬಲಭಾಗದಲ್ಲಿ ೪ ಅಂಗು
ಲ ಉನ್ನತವಾಗಿಯೂ ಮೂರು ಅಂಗುಲ ವಿಸ್ತಾರವಾಗಿಯೂ, ವಾಮನಾ
ಯನಮಃ ಎಂಬದಾಗಿ ಕುಕ್ಷಿಯ ಎಡ ಪಾರ್ಶ್ವದಲ್ಲಿ ೧೦ ಅಂಗುಲ ಉನ್ನತ
ವಾಗಿಯೂ ೩ ಅಂಗುಲ ಅಗಲವಾಗಿಯೂ, ಶ್ರೀಧರಾಯನಮಃ ಎಂಬ
ದಾಗಿ ವಾಮ ಬಾಹುವಿನಲ್ಲಿ ೧೦ ಅಂಗುಲ ಉನ್ನತವಾಗಿಯೂ ೩ ಅಂ
ಗುಲ ವಿಸ್ತಾರವಾಗಿಯೂ, ಹೃಷೀಕೇಶಾಯನಮಃ ಎಂಬದಾಗಿ ವಾಮ
(ಎಡ) ಕಂಠ ಪಾರ್ಶ್ವದಲ್ಲಿ ೪ ಅಂಗುಲ ಉನ್ನತವಾಗಿಯೂ ೩ ಅಂಗುಲ
ವಿಸ್ತೃತವಾಗಿಯೂ, ಪದ್ಮನಾಭಾಯನಮಃ ಎಂಬದಾಗಿ ಸೊಂಟಕ್ಕೆ ಮೇ
ಲ್ಭಾಗದಲ್ಲಿ ಬೆನ್ನಿಗೆ ಕೆಳಭಾಗದಲ್ಲಿ (ತ್ರಿಕ)ವೆಂದು ಪ್ರಸಿದ್ಧವಾದ ಪೃಷ್ಠ
ಭಾಗದಲ್ಲಿ ೩ ಅಂಗುಲ ಉನ್ನತವಾಗಿಯೂ, ೩ ಅಂಗುಲ ಅಗಲವಾಗಿಯೂ,
ದಾಮೋದರಾಯನಮಃ ಎಂಬದಾಗಿ ಕಂಠದ ಹಿಂಭಾಗದಲ್ಲಿ ೩ ಅಂಗುಲ
ಉನ್ನತವಾಗಿಯೂ ೩ ಅಂಗುಲ ವಿಸ್ತೃತವಾಗಿಯೂ ಧರಿಸತಕ್ಕದ್ದು ಅವ
ಶಿಷ್ಟವಾದದ್ದನ್ನ—

ಶ್ಲೋ॥ ದ್ವಾದಶಾಕ್ಷರಮಂತ್ರೇಣ ಮೂರ್ಧ್ನಿದದ್ಯಾನ್ಮೃಜಂತತಃ ।

ಎಂಬ ಸಚ್ಚರಿತ್ರ ರಕ್ಷಾವಾಕ್ಯ ಪ್ರಕಾರ ದ್ವಾದಶಾಕ್ಷರಿಯಿಂದ ಶಿರಸ್ಸಿನಲ್ಲಿ ಧರಿಸತಕ್ಕದ್ದು. ವಿಸ್ತರಭೀತಿಯಿಂದ ಪ್ರಮಾಣ ಶ್ಲೋಕಗಳಂ ಉದಹರಿಸಲಿಲ್ಲವು.

## ಅಥ ಶ್ರೀಚೂರ್ಣವಿಧಿಃ

ವಿಷ್ಣುಧರ್ಮೋತ್ತರೇ॥ ಅಭಿಷಿಕ್ತಂತುಯಚ್ಚೂರ್ಣಂವಿಷ್ಣುಬಿಂಬೇ
ತುಯೋನರಃ । ಹಾರಿದ್ರಂಧಾರಯೇನ್ನಿತ್ಯಂಸೋಽಶ್ವಮೇಧಫಲಂ
ಲಭೇತ್ ॥

ಪಾದ್ಮೆ॥ ವಾಸುದೇವಾಂಗಸಂಸ್ಪೃಷ್ಟೈರ್ನಿಶಾಚೂರ್ಣೈಸ್ತು ಪದ್ಮಜ ।
ಯಃಕರೋತ್ಯೂರ್ಧ್ವಪುಂಡ್ರಂ ಸಃವಿಷ್ಣುಲೋಕೇಮಹೀಯತೇ॥

ಅರ್ಥ॥ ವಿಷ್ಣು ಬಿಂಬಾಭಿಷಿಕ್ತವಾದ ಹರಿದ್ರಾ (ಅರಿಶಿನದ) ಚೂರ್ಣವನ್ನು ಮಧ್ಯದಲ್ಲಿ ಯಾವನು ಊರ್ಧ್ವಪುಂಡ್ರವನ್ನಾಗಿ ಧರಿಸುವನೋ ಅವನು ಅಶ್ವಮೇಧಫಲವಂ ಹೊಂದುವನು, ವಿಷ್ಣುಲೋಕದಲ್ಲಿ ಪೂಜಿತನಾಗುವನು.

ಶ್ರಿಯೈನಮಃ ಎಂದು ಮುಖದಲ್ಲಿಯೂ, ಅಮೃತೋದ್ಭವಾಯೈನಮಃ ಎಂದು ಉದರಮಧ್ಯದಲ್ಲಿಯೂ, ಕಮಲಾಯೈನಮಃ ಎಂದು ಹೃದಯದಲ್ಲಿಯೂ, ಚಂದ್ರ (ಶೋಭಿನ್ಯೈ) ಸೋದರ್ಯೈನಮಃ ಎಂದು ಕಂಠದಲ್ಲಿಯೂ, ವಿಷ್ಣುಪತ್ನ್ಯೈನಮಃ ಎಂದು ಕುಕ್ಷಿಯ ಬಲಭಾಗದಲ್ಲಿಯೂ, ವೈಷ್ಣವ್ಯೈನಮಃ ಎಂದು ಬಲಬಾಹುವಿನಲ್ಲಿಯೂ, ವರಾರೋಹಾಯೈನಮಃ ಎಂದು ಕಂಠದ ಬಲಪಾರ್ಶ್ವದಲ್ಲಿಯೂ, ಹರಿವಲ್ಲಭಾಯೈನಮಃ ಎಂದು ಉದರದ ಎಡಭಾಗದಲ್ಲಿಯೂ, ಶಾರ್ಙ್ಗಿಣ್ಯೈನಮಃ ಎಂದು ಎಡಬಾಹುವಿನಲ್ಲಿಯೂ, ದೇವದೇವಿಕಾಯೈನಮಃ ಎಂದು ಕಂಠದ ಎಡಭಾಗದಲ್ಲಿಯೂ, ಮಹಾಲಕ್ಷ್ಮ್ಯೈನಮಃ ಎಂದು ಉದರದ ಹಿಂಭಾಗದಲ್ಲಿಯೂ, ಲೋಕಸುಂದರ್ಯೈನಮಃ ಎಂದು ಕಂಠದ ಹಿಂಭಾಗದಲ್ಲಿಯೂ, ಸರ್ವಾಭೀಷ್ಟಪ್ರದಾಯೈನಮಃ ಎಂದು ಶಿರಸ್ಸಿನಲ್ಲಿಯೂ, ಸರ್ವತ್ರ ದೀಪಾಕಾರವಾಗಿ ಶ್ರೀಚೂರ್ಣವನ್ನು ಧರಿಸತಕ್ಕದ್ದು.

ಊರ್ಧ್ವಪುಂಡ್ರ ಧಾರಣಾನಂತರ ಹಸ್ತಗಳನ್ನ ತೊಳೆಯದೇ ಅಂಜಲಿ ಬಂಧನದಿಂದ (ಕೈಮುಗಿದುಕೊಂಡು) ಮುಂದೆ ಬರೆಯಲ್ಪಡುವ ಅರ್ಥ ಅರ್ಥ ಶ್ಲೋಕದಿಂದ ಧ್ಯಾನಪುರಸ್ಸರವಾಗಿ ಮುಖಾದಿಸ್ಥಾನಗಳನ್ನ ಯಥಾಕ್ರಮವಾಗಿ ಬೆರಳುಗಳಿಂ ಸ್ಪರ್ಶಮಾಡಿ ನಂತರ ಕೈಮುಗಿಯುವುದು.

ಶ್ಲೋ॥ ಚತುಶ್ಚಕ್ರಂನಮಸ್ಯಾಮಿಕೇಶವಂಕನಕಪ್ರಭಂ ।
ನಾರಾಯಣಂಘನಶ್ಯಾಮಂಚತುಶ್ಶಂಖಂನಮಾಮ್ಯಹಂ ।
ಮಾಧವಂಮಣಿಭಂಗಾಭಂಚಿಂತಯಾಮಿಚತುರ್ಗದಂ ।
ಚಂದ್ರಭಾಸಂಚತುಶ್ಶಾರ್ಙ್ಗಂಗೋವಿಂದಮುಪಾಶ್ರಯೇ ।
ವಿಷ್ಣುಂಚತುರ್ಹಲಂವಂದೇಪದ್ಮಕಿಂಜಲ್ಕಸನ್ನಿಭಂ ।
ಚತುರ್ಮುಸಲಮಬ್ಜಾಭಂಸಂಶ್ರಯೇಮಧುಸೂಧನಂ ।
ಅಗ್ನಿವರ್ಣಂಚತುಃಖಡ್ಗಂಭಾವಯಾಮಿತ್ರಿವಿಕ್ರಮಂ ।
ವಾಮನಂಬಾಲಸೂರ್ಯಾಭಂಚತುರ್ವಜ್ರಂವಿಭಾವಯೇ ।
ಶ್ರೀಧರಂಪುಂಡರೀಕಾಭಂಚತುಃಪಟ್ಟಿಸಮಾಶ್ರಯೇ ।
ಚತುರ್ಮುದ್ಗರಮಭ್ಯೇಮಿಹೃಷೀಕೇಶಂತಟಿತ್ಪ್ರಭಂ ।
ಪಂಚಾಯುಧಂಪದ್ಮನಾಭಂಪ್ರಣಮಾಮ್ಯರ್ಕರೋಚಿಷಂ ।
ದಾಮೋದರಂಚತುಃಪಾಶಂಇಂದ್ರಕೋಪನಿಭಂಭಜೇ ।
ವಾಸುದೇವಮುಪಾಸೇಹಂಪೂರ್ಣೇಂದ್ವಯುತಸನ್ನಿಭಂ ।

## ಅನಂತರ ಪುಂಡ್ರಮಧ್ಯದಲ್ಲಿ ಧ್ಯಾನಕ್ರಮವು.

ಶ್ಲೋ॥ ಶ್ರೀದೇವೀಪ್ರಥಮಂನಾಮದ್ವಿತೀಯಾಚಾಮೃತೋದ್ಭವೀ ।
ತೃತೀಯಂಕಮಲಾನಾಮಚತುರ್ಥೀಚಂದ್ರ (ಶೋಭಿನೀ) ಸೋದರೀ
ಪಂಚಮೀವಿಷ್ಣುಪತ್ನೀಚಷಷ್ಠೀವೈಷ್ಣವೀತಥಾ ।
ಸಪ್ತಮೀಚವರಾರೋಹಾ ಅಷ್ಟಮೀಹರಿವಲ್ಲಭಾ ।
ನವಮೀಶಾರ್ಙ್ಗಿಣೀಚೈವದಶಮೀದೇವದೇವಿಕಾ ।
ಏಕಾದಶೀಮಹಾಲಕ್ಷ್ಮೀಃದ್ವಾದಶೀಲೋಕಸುಂದರೀ ।
ತ್ರಯೋದಶೀಸಮಾಖ್ಯಾತಾಸರ್ವಾಭೀಷ್ಟಫಲಪ್ರದಾ ।

## ಅಥ ಪುಂಡ್ರಸಂಖ್ಯಾಂ ವಿಚಾರಯಾಮಃ.

ಪುಂಡ್ರಸಂಖ್ಯೆಯಲ್ಲಿ ಕೆಲವರು ಏಕಪುಂಡ್ರವೆನ್ನುವರು, ಕೆಲವರು ದ್ವಿ ಪುಂಡ್ರಗಳೆನ್ನುವರು. ಪಾರಮೇಶ್ವರ ಸಂಹಿತೆಯಲ್ಲಿ,

ಶ್ಲೊ॥ ದ್ವಾದಶೈಕಚತುರ್ಭಿರ್ವಾಭೂಷಿತಾಸ್ಯುಸ್ಸದಾದ್ವಿಜಾಃ । ಭ್ರುವೋ ರಧಸ್ತಾದಾರಭ್ಯಕೇಶಾಂತಂಧಾರಯೇದ್ಬುಧಃ ।

ಎಂಬದಾಗಿ ೧೨-೧-೪ ಈ ಸಂಖ್ಯಾಪುಂಡ್ರಗಳು ಚೋದಿತವಾಗಿರುವವು.

ಶ್ಲೊ॥ ನಿಗಮಾಂತಗುರುವರ್ಯೈಃಸಚ್ಚರಿತ್ರರಕ್ಷಾಯಾಂ । ಶ್ರೀನಾರದೀಯೇ ಚತುಸ್ಸಪ್ತತಿಮಾಧ್ಯಾಯೇ ॥

ಶ್ಲೊ॥ ಸ್ಥಾನಾನಿಸಂಪ್ರವಕ್ಷ್ಯಾಮಿಊರ್ಧ್ವಪುಂಡ್ರಸ್ಯಧಾರಣೇ।ಕೇಚಿತ್ರ ಯೋದಶೇತ್ಯಾಹುಃವೈಷ್ಣವಾನಾಂದ್ವಿಜರ್ಷಭ । ತತ್ಪಕ್ಷೇಸಂ ಪ್ರವಕ್ಷ್ಯಾಮಿಸ್ಥಾನಾನಿಮುನಿಸತ್ತಮ । ಲಲಾಟೇಪ್ರಥಮಂವಿಂ ದ್ಯಾತ್ ಇತ್ಯುಪಕ್ರಮ್ಯತ್ರಯೋದಶಮಥೋಮೂರ್ಧ್ನಿಧಾರ ಯೇದೂರ್ಧ್ವಪುಂಡ್ರಕಂ ॥

ಇತ್ಯಾದಿ ವಿಸ್ತರಭೀತಿಯಿಂದ ಬರಿಯಲ್ಪಡಲಿಲ್ಲವು. ಈ ತ್ರಯೋದಶ ಪಕ್ಷವೇ ಸಂಪ್ರದಾಯವಾದ ಪ್ರಯುಕ್ತ ಇಲ್ಲಿ ಬರೆಯಲ್ಪಟ್ಟಿದೆ. ಶಿರಸ್ಸ ನ್ನು ವಿನಹಾ ದ್ವಾದಶ ಪುಂಡ್ರಗಳೆನ್ನುವರು.

ಈ ದ್ವಾದಶ ಪುಂಡ್ರಧಾರಣಕ್ಕೆ ಅಶಕ್ತಿಯಾದಲ್ಲಿ ಏಕಪುಂಡ್ರಧಾರಣವು ವಿಹಿತವಾಗಿರುವುದು.

ಶ್ಲೊ॥ ಸಚ್ಚರಿತ್ರರಕ್ಷಾಯಾಂ ನಿಗಮಾಂತಗುರುಭಿಃ ಬ್ರಹ್ಮರಾತ್ರೋ ಕ್ತಂಪ್ರಣವೇನಲಲಾಟೇಧಾರಣಂ । ಬ್ರಹ್ಮಾಂಡೋಕ್ತಂಉದ್ಧೃ ತಾಸೀತಿಮಂತ್ರೇಣಧಾರಣಂಚಏಕಸಂಖ್ಯಾವಿಷಯಂ ಇತಿ.

## ಏಕಪುಂಡ್ರಧಾರಣಕ್ರಮಃ

ಮೃತ್ತಿಕಾಸೇಚನ ಮಂತ್ರಜಪಾದಿಗಳಂ ಪೂರ್ವದಂತೆ ಅನುಷ್ಠಿಸಿ,

ಶ್ಲೊ॥ ಉದ್ಧೃತಾಸಿವರಾಹೇಣಕೃಷ್ಣೇನಶತಬಾಹುನಾ।ಭೂಮಿರ್ಧೇ ನುರ್ಧರಣೀಲೋಕಧಾರಿಣೀ । ಮೃತ್ತಿಕೇಹನಮೇಪಾಪಂಯನ್ಮ

ಯಾಮುಷ್ಕೃತಂಕೃತಂ । ತ್ವಯಾಹತೇನಪಾಪೇನಜೀವಾಮಿಶ ರಹಶ್ಶತಂ । ಮೃತ್ತಿಕೇದೇಹಿಮೇಪುಷ್ಟಿಂತ್ವಯಿಸರ್ವಂಪ್ರತಿ ಷ್ಠಿತಂ ॥ ಎಂಬ ಮಂತ್ರದಿಂದ ಧರಿಸುವದು.

ಶ್ರೀ ಗೋಪಾಲದೇಶಿಕಾಹ್ನಿಕದಲ್ಲಿ 'ದಾಮೋದರಂಕೇಶವಂಚನೆಕದಾ ತ್ಪರಿತ್ಯಜೇತ್' ಎಂಬ ರೀತಿಯಿಂದ ಮುಖದಲ್ಲಿಯೂ ಕಂಠದ ಹಿಂಭಾ ದಲ್ಲಿಯೂ ಧರಿಸತಕ್ಕದ್ದು ಎಂದು ವಿವರಿಸಿ ಇದೆ.

## ಊರ್ಧ್ವಪುಂಡ್ರವಿಧಿಃ.

ಅವತಾರಿಕಾ॥ ಊರ್ಧ್ವಪುಂಡ್ರಧಾರಣವು ಅದೃಷ್ಟಫಲಪ್ರದವಾದದ್ದು ಊರ್ಧ್ವಪುಂಡ್ರ ಶಬ್ದಾರ್ಥವು ನಾರದೀಯದಲ್ಲಿ ಹೇಳಲ್ಪಟ್ಟಿದೆ.

ನಾರದೀಯೆ॥ ಊರ್ಧ್ವಗತ್ವಾಂತುಯಸ್ಯೇಚ್ಛಾ ತಸ್ಯೋರ್ಧ್ವಂ ಪುಂಡ್ರಮುಚ್ಯತೇ। ಊರ್ಧ್ವಂಗತ್ವಾತುದೇವತ್ವಂಸಂಪ್ರಾಪ್ನೋ ತಿನಸಂಶಯಃ । ಊರ್ಧ್ವಂನಯತಿಯತ್ಪುಂಡ್ರಂ ಪ್ರಾಣಿನಃ ಪಾಪಕಾರಿಣಃ । ತಸ್ಯಾಖ್ಯಾಹ್ಯೂರ್ಧ್ವಪುಂಡ್ರೇತಿ ತಸ್ಮಾತ್ತ ದ್ಧಾರಯೇದ್ವಿಜಃ । ಊರ್ಧ್ವಪುಂಡ್ರಂಮೃದಾಶುಭ್ರಂ ಯೋ ಧತ್ತೇನಿತ್ಯಮಾತ್ಮವಾನ್। ತಸ್ಯಪ್ರಸಾದಂಕುರುತೆವಿಷ್ಣುರ್ಲೋ ಕನಮಸ್ಕೃತಃ ॥

ತಾತ್ಪರ್ಯ॥ ಪಾಪಕರ್ಮವಂ ಮಾಡಿದ ಪ್ರಾಣಿಗಳನ್ನ ಕೂಡಾ ಯಾ ಪುಂಡ್ರವು ಅಧೋಲೋಕಕ್ಕೆ ತಳ್ಳದೇ ಊರ್ಧ್ವಲೋಕಕ್ಕೆ ತನ್ನ ಮ ಹಾತ್ಮ್ಯದಿಂದ ಕಳುಹಿಸುವದೋ ಆ ಊರ್ಧ್ವಪುಂಡ್ರವನ್ನ ಊರ್ಧ್ವ ಲೋಕಾಪೇಕ್ಷೆಯುಳ್ಳವರು ಧರಿಸತಕ್ಕದ್ದು. ಈ ಕಾರಣದಿಂದಲೇ ಇದಕ್ಕೆ ಊರ್ಧ್ವಪುಂಡ್ರವೆಂದು ಹೆಸರು ಶುಭ್ರವಾದ ಮಣ್ಣಿನಿಂದ ಯಾವ ಮನ ಷ್ಯನು ಊರ್ಧ್ವಪುಂಡ್ರಗಳಂ ಧರಿಸುವನೋ ಅವನಿಗೆ ಸರ್ವಲೋಕ ಪೂ ಜ್ಯನಾದ ವಿಷ್ಣುವು ಪ್ರಸನ್ನನಾಗಿ ಅನುಗ್ರಹವಂ ಮಾಡುವನು.

ಆದರೆ ಈ ಪುಂಡ್ರವೈದಿಕವೆನ್ನುವದು ಶ್ರುತಿಸಿದ್ಧವಾಗಿರುವದು.

ಮಹೋಪನಿಷತ್॥ ಧೃತೋರ್ಧ್ವಪುಂಡ್ರಃಪರಮೇಶಿತಾರಂನಾರಾಯ ಣಂಸಾಂಖ್ಯಯೋಗಾಧಿಗಮ್ಯಂ । ಧ್ಯಾತ್ವಾವಿಮುಚ್ಯೇತನರಸ್ಸ ಮಸ್ತೈಸ್ಸಂಸಾರಪಾಶೈರಿಹಚೇತಿವಿಷ್ಣುಂ॥

ತಾತ್ಪರ್ಯ॥ ಊರ್ಧ್ವಪುಂಡ್ರಧಾರಿಯಾಗಿ ಯಾವವನು ಜ್ಞಾನಯೋಗ
ಗಮ್ಯನಾಗಿಯೂ ಪರಮೇಶ್ವರನಾಗಿಯೂ ಇರುವ ನಾರಾಯಣನನ್ನ ಧ್ಯಾ
ನಮಾಡುವನೋ ಅವನು ಸಂಸಾರ ಬಂಧಕಗಳಾವ ಸಕಲ ಪಾಪಗಳಿಂದ
ಲೂ ಬಿಡಲ್ಪಟ್ಟವನಾಗಿ ನಾರಾಯಣ ಸಾಯುಜ್ಯವಂ ಹೊಂದುವನು.

ಊರ್ಧ್ವಪುಂಡ್ರಧಾರಣ ಕ್ರಮವು ಅಥರ್ವಣ ಶಿರಸ್ಸಿನಲ್ಲಿ ಹೇಳಲ್ಪಟ್ಟಿಧೆ.

ಶ್ಲೋ॥ ಹರೇಃಪಾದಾಕೃತಿಮಾತ್ಮನೋಹಿತಾಯ ಮಧ್ಯೇಚ್ಛಿದ್ರಂಊರ್ಧ್ವ
ಪುಂಡ್ರಂಯೋಧಾರಯತಿಸಪರಸ್ಯ ಪ್ರಿಯೋಭವತಿಸಪುಣ್ಯಭಾಗ್ಭ
ವತಿಸಮುಕ್ತಿಭಾಗ್ಭವತಿ ॥

ತಾತ್ಪರ್ಯ॥ ಭಗವಂತನ ಪಾದಗಳೋಪಾದೆಯಲ್ಲಿ ಊರ್ಧ್ವಪುಂಡ್ರಗ
ಳನ್ನ ಯಾವವನು ಮಧ್ಯದಲ್ಲಿ ಛಿದ್ರವಾಗವಂತೆ ನಿಬಿಡವಾಗಿ ಧರಿಸುವನೋ
ಅವನು ಪರಬ್ರಹ್ಮನಿಗೆ ಇಷ್ಟನಾದವನಾಗಿ ತನ್ನ ಇಚ್ಛಾನುಸಾರ ಪುಣ್ಯ
ಲೋಕಗಳನ್ನೂ ಮೋಕ್ಷ ಸಾಮ್ರಾಜ್ಯವನ್ನೂ ಸಹಾ ಹೊಂದುವನು.

ಸಚ್ಚರಿತ್ರರಕ್ಷಾಯಾಂ॥ ಕೇವಲಸ್ಯೋರ್ಧ್ವಪುಂಡ್ರಸ್ಯಧಾರಣಾದ
ಪಿಮಾನವಃ। ದೇಹಜೈಃಪಾಪಸಂಘಾತೈಃಮುಚ್ಯತೇನಾತ್ರಸಂ
ಶಯಃ ॥

ತಾತ್ಪರ್ಯ॥ ಊರ್ಧ್ವಪುಂಡ್ರಧಾರಣ ಮಾತ್ರದಿಂದಲೇ ಮನುಷ್ಯನು
ಸರ್ವಪಾಪಗಳಿಂದಲೂ ಬಿಡಲ್ಪಡುವನು, ಸಂಶಯವಿಲ್ಲಾ.

ಬ್ರಹ್ಮಾಂಡೇ॥ ಸಾಂತರಾಳಂಋಜುಂಸೌಮ್ಯಂಸುಪಾರ್ಶ್ವಂಸುಮ
ನೋಹರಂ। ಯಃಕರೋತ್ಯೂರ್ಧ್ವಪುಂಡ್ರಂಸಃಮಮಾತೀವ
ಪ್ರಿಯೋಭವೇತ್ ॥ ಯಃಕರೋತ್ಯೂರ್ಧ್ವಪುಂಡ್ರಂತುಸಂಧ್ಯಾ
ವಂದನಕರ್ಮಸು। ತಸ್ಯಾಪಂಸುಲಭೋಬ್ರಹ್ಮಾಪಿಕಸ್ಮಿನ್ನೇ
ವಜನ್ಮನಿ ॥

ತಾತ್ಪರ್ಯ॥ ಯಾವನು ನೋಡುವದಕ್ಕೆ ರಮಣೀಯವಾಗಿಯೂ, ಋ
ಜುವಾಗಿಯೂ, ಶೋಭನವಾದ ಪಾರ್ಶ್ವಗಳಿಂದ ಕೂಡಿರುವದಾಗಿಯೂ
ಇರುವ ಊರ್ಧ್ವಪುಂಡ್ರಗಳನ್ನ ಸಂಧ್ಯಾವಂದನಾದಿ ಸಕಲ ಕರ್ಮಗಳಲ್ಲಿ
ಯೂ ಧರಿಸುವನೋ ಆತನು ನನಗೆ ಇಷ್ಟತಮನಾದವನು. ಆ ಮನು

ಷ್ಯನಿಗೆ ಬಂದೇ ಜನ್ಮದಲ್ಲಿ ಮೋಕ್ಷ ಸಾಮ್ರಾಜ್ಯವಂ ಕೊಡುವೆನೆಂಬ ಚತುರ್ಮುಖ ಬ್ರಹ್ಮನಂ ಕುರಿತು ಭಗವದ್ವಾಕ್ಯವು.

ಬ್ರಹ್ಮಾಂಡಪುರಾಣೇ ॥ ಅಥದ್ರವ್ಯಂಪ್ರವಕ್ಷ್ಯೇಹಂಊರ್ಧ್ವಪುಂಡ್ರಸ್ಯಪದ್ಮಜ । ಮೃಚ್ಚಂದನಜಲಾನ್ಯಾಹುಃ ॥

ಇತ್ಯಾದಿ ವಾಕ್ಯಗಳಿಂದ ಚತುರ್ಮುಖ ಬ್ರಹ್ಮದೇವನಂ ಕುರಿತು ಚಂದನಾದಿ ದ್ರವ್ಯಗಳನ್ನು ಹೇಳಿರುವದು ಮೃದಭಾವ (ತಿರುಮಣ್ಣು ಇಲ್ಲದ ಪಕ್ಷ) ದಲ್ಲಿ ಎಂದು ವ್ಯಾಖ್ಯಾನ ಮಾಡಿರುತ್ತಾರೆ.

ಬ್ರಹ್ಮರಾತ್ರೇ ॥ ಶ್ಲೋ॥ ದೀಪಾಕಾರಂತತಶ್ಚಾಪಿವೇಣುಪತ್ರಸಮಾಕೃತಿ । ಪದ್ಮಸ್ಯಮುಕುಳಾಕಾರಂಕುಮುದಸ್ಯೋತ್ಪಲಸ್ಯವಾ। ಮತ್ಸ್ಯಾಕಾರಂತಥಾವಾಪಿಕೂರ್ಮಾಕಾರಮಥಾಪಿವಾ । ಊರ್ಧ್ವಪುಂಡ್ರಂದ್ವಿಜಃಕುರ್ಯಾದ್ದಂಡಾಕಾರಂಸುಶೋಭನಂ ॥

ತಾತ್ಪರ್ಯ॥ ಊರ್ಧ್ವಪುಂಡ್ರವನ್ನು, ದೀಪಶಿಖಾಕಾರವಾಗಿಯೋ, ವೇಣು (ಬಿದರು) ಪತ್ರಾಕಾರದಂತೆಯೋ, ಕಮಲದ ಮೊಗ್ಗಿನೋಪಾದಿಯಲ್ಲಿಯೋ, ನೈದಿಲೆಯ ಮತ್ತು ರಕ್ತೋತ್ಪಲದ ಮೊಗ್ಗಿನೋಪಾದಿಯಲ್ಲಿಯೋ, ಮತ್ಸ್ಯಾಕಾರವಾಗಿಯೋ, ಕೂರ್ಮ (ಆಮೆ) ಕಾರವಾಗಿಯೋ, ಅಥವಾ ದಂಡಾಕಾರವಾಗಿಯೋ, ರಮಣೀಯವಾಗುವಂತೆ ಧರಿಸತಕ್ಕದ್ದು.

ಈ ಊರ್ಧ್ವಪುಂಡ್ರಧಾರಣ ವಿಷಯದಲ್ಲಿ, ಕೆಲವರು, 'ಹರೇಃಪಾದಾಕೃತಿಂ, ಸರ್ವಸ್ಥಹರಿಪಾದಾಕೃತಿಂ,' ಇತ್ಯಾದಿ ಪ್ರಮಾಣಾನುಸಾರವಾಗಿ ಭಗವತ್ಪಾದಾಕಾರವಾಗಿ ಧರಿಸತಕ್ಕದ್ದೆನ್ನುವರು.

ಮತ್ತೆ ಕೆಲವರು, ಅಷ್ಟುಮಾತ್ರವಲ್ಲ.

ಪಾದ್ಮೆ॥ ಅಷ್ಟಮೀಚಂದ್ರಕಲಾಕಾರಲಲಾಟಸ್ಥೋರ್ಧ್ವಪುಂಡ್ರಕಃ॥

ವೈಖಾನಸಃ॥ ನಾಸಿಕಾಮೂಲಮಾರಭ್ಯ ರೇಖಾದ್ವಿತಯಸಂಯುತಂ। ಧಾರಯೇದೂರ್ಧ್ವಪುಂಡ್ರಂತು ಹರೇಃಫಾಲತಲೇಶುಭೇ॥

ತಾತ್ಪರ್ಯ॥ ಶ್ರೀನಿವಾಸನಾದ ನಾರಾಯಣನು, ಅಷ್ಟಮೀ ಚಂದ್ರನೋಪಾದಿಯಲ್ಲಿರುವ ಮುಖಮಂಡಲದಲ್ಲಿ ಪ್ರಕಾಶಿಸುವ ಊರ್ಧ್ವಪುಂಡ್ರವುಳ್ಳವನು.

ನಾರಾಯಣನ ಮುಖಮಂಡಲದಲ್ಲಿ ನಾಸಿಕಾಮೂಲಾರಭ್ಯ ರೇಖಾಪ್ರ ಯದಿಂ ಕೂಡಿರುವ ಊರ್ಧ್ವ ಪುಂಡ್ರವಂ ಧರಿಸತಕ್ಕದ್ದು. ಇತ್ಯಾದಿ ಪಾ ದ್ಮ ವೈಖಾನಸ ಸೂತ್ರಪ್ರಮಾಣಾನುಸಾರವಾಗಿ ಭಗವಂತನ ಮುಖಾರ ವಿಂದದಲ್ಲಿ ಧರಿಸುವಂತೆಯೇ ಅವನ ಭಕ್ತರಾದ ನಾವುಗಳೂ ಧರಿಸಬೇ ಕು, ಎನ್ನುವರು.

ಸಚ್ಚರಿತ್ರ ರಕ್ಷೆಯಲ್ಲಿ ಆಕ್ಷೇಪ ಸಮಾಧಾನಗಳು ಪ್ರಕಾರಾಂತರವಾ ಗಿರುವವು. ಅದೆಂತೆಂದರೆ,

ಅರ್ಚಾವಿಗ್ರಹಗಳಲ್ಲಿ ದೀಪಾಕಾರವಾಗಿಯೇ ರೇಖೆಗಳಿರುತ್ತಾಗಿ ಯಚ್ಛೀಲಸ್ಸ್ವಾಮೀ ತಚ್ಛೀಲಾಪ್ರಕೃತಿಃ' ಸ್ವಾಮಿಯು ಯಾವಸ್ವ ಭಾವವುಳ್ಳವನೋ ಅವನ ಭೃತ್ಯರೂ ಆ ಸ್ವಭಾವವುಳ್ಳವರು, ಎಂಬ ನ್ಯಾ ಯದಂತೆ ಭಕ್ತರಾದ ನಮ್ಮಿಂದಲೂ ದೀಪಾಕಾರವಾಗಿಯೇ ಪುಂಡ್ರವು ಧರಿ ಸಲ್ಪಡತಕ್ಕದ್ದಲ್ಲವೇ ಎಂದರೆ, 'ನಹಿವಚನಮಾಸ್ಕಂದಿತುಂನ್ಯಾಯಃಪ್ರಭ ವತಿ' ಕಂತೋಕ್ತವಾದ ವಾಕ್ಯವಂ ನ್ಯಾಯವು ಎಂದಿಗೂ ಅತಿಕ್ರಮಿಸ ಲಾರದು. ಅನ್ಯಥಾ ಭಗವಂತನಿಂದ ಮಾಡಲ್ಪಟ್ಟ, ಗೋಪಕನ್ಯೋನ್ಮಾ ದನ, ಸ್ವಕುಲವಿನಾಶನ ಬೌದ್ಧಶಾಸ್ತ್ರಪ್ರವರ್ತನಾದಿಗಳಂ ನಾವು ಮಾಡ ಬೇಕಾಗುವದಲ್ಲವೇ? ಅರ್ಚಾವಿಗ್ರಹಗಳಲ್ಲಿ ಶೋಭಾರ್ಥವಾಗಿ ದೀಪಾ ಕಾರವಾಗಿ ಪುಂಡ್ರಧಾರಣವು ಯಾವವಿರೋಧವಂ ಮಾಡಲಾರದು. ಯ ಥಾವಿಧಿಯಾಗಿ ಊರ್ಧ್ವಪುಂಡ್ರಧಾರಣಾನಂತರ, ಸ್ವಾಚಾರ್ಯಪ್ರಭೃತಿ ಭಗವತ್ಪರ್ಯಂತವಾಗಿ ಗುರುಪರಂಪರೆಯನ್ನು ತತ್ತದ್ವಿಷಯಕ ಪದ್ಯಗಳಿಂದ ವಂದನ ಮಾಡುವದು. ಅದಕ್ಕೆ ಅವಕಾಶ ಕಮ್ಮಿಯಾದ ಪಕ್ಷ.

ಶ್ಲೋಕಃ॥ ಅಸ್ಮದ್ದೇಶಿಕಮಸ್ಮದೀಯಪರಮಾಚಾರ್ಯಾನಶೇಷಾ ನ್ಗುರೂಶ್ರೀಮಲ್ಲಕ್ಷ್ಮಣಯೋಗಿಪುಂಗವಮಹಾಪೂರ್ಣೌಮು ನಿಂಯಾಮುನಂ ॥ ರಾಮಂಪದ್ಮವಿಲೋಚನಂಮುನಿವರಂನಾಥಂ ಶಠದ್ವೇಷಿಣಂಸೇನೇಶಂಶ್ರಿಯಮಿಂದಿರಾಸಹಚರಂನಾರಾಯಣಂ ಸಂಶ್ರಯೇ ಎಂದು ಈ ಶ್ಲೋಕವಂ ಅನುಸಂಧಾನ ಮಾಡುವುದು.

## ತುಲಸೀ ಪದ್ಮಾಕ್ಷಮಾಲಾಧಾರಣ ವಿಧಿಃ.

ನಾರದೀಯೇ॥ ಕಂಠೇತುಧಾರಯೇದ್ಯಸ್ತು ತುಲಸೀಂಸತತಂನರಃ ।
ತತ್ಕಾಷ್ಠಂವಾಪಿರಾಜೇಂದ್ರತಸನಾಸ್ತ್ಯುಪಪಾತಕಂ ।

ಪ್ರಾಣೇ। ಶಾಂತಯೇಪುಷ್ಟಯೇಮುಕ್ತ್ಯೈತುಲಸೀಕಾಷ್ಠಜೋಮ
ಣಿಃ । ಸರ್ವಸಿದ್ಧಿಪ್ರದಃಪಾದ್ಮೋಮಣಿರ್ಧಾರ್ಯಶ್ಶ್ರಿಯೈಬು
ಧೈಃ । ಧಾರಯಂತಿಪವಿತ್ರಾಣಿಯೇಭಕ್ತಾಶ್ಶ್ರದ್ಧಯಾನ್ವಿತಾಃ ।
ತೇಪಿನಿರ್ಧೂತಪಾಪ್ಮಾನೋಮೋದಂತೇದಿವಿದೇವವತ್ ॥

ತಾತ್ಪರ್ಯ॥ ಯಾವವನು ಕಂಠದಲ್ಲಿ ತುಲಸೀಮಾಲೆಯನ್ನಾಗಲೀ ಅಥ
ವಾ ತುಲಸೀ ಮಣಿಮಾಲಿಕೆಯನ್ನಾಗಲೀ ಧರಿಸುವನೋ ಅವನಲ್ಲಿ ಉಪ
ಪಾತಕಗಳು ಸಂಬಂಧಿಸಲಾರವು. ತುಲಸೀಮಣಿಯು ಮನಶ್ಶಾಂತಿಯಂ
ದೇಹಪುಷ್ಟಿಯಂ ಮೋಕ್ಷಸಾಮ್ರಾಜ್ಯವಂ ಕೂಡಾ ಕೊಡುವದು. ತಾವರೇ
ಮಣಿಯು ಸರ್ವಾರ್ಥಪ್ರದವಾದ ಪ್ರಯುಕ್ತ ಮಹನೀಯರಿಂದ ಧರಿಸ
ತಕ್ಕದ್ದು.

ವಿಶ್ವಾಸಯುಕ್ತರಾಗಿ ಪವಿತ್ರಮಾಲಿಕೆಯನ್ನು ಯಾರು ಧರಿಸುವರೋ
ಅವರು ಸಕಲ ಪಾಪಗಳಿಂದಲೂ ಬಿಡಲ್ಪಟ್ಟವರಾಗಿ ನಿತ್ಯಸೂರಿಗಳೋಪಾ
ದಿಯಲ್ಲಿ ಪರಮಾಕಾಶದಲ್ಲಿ ಬ್ರಹ್ಮಾನಂದವಂ ಪಡೆಯುವರು.

ಇತ್ಯಾದಿ ಪ್ರಮಾಣಪ್ರಕಾರ ತುಲಸೀ ಮಣಿಮಾಲಿಕೆಯನ್ನೂ, ಪದ್ಮಾ
ಕ್ಷ ಮಣಿಮಾಲಿಕೆಯನ್ನೂ, ಪವಿತ್ರಮಾಲಿಕೆಗಳನ್ನೂ ನಾಭಿಪ್ರಮಾ
ಣಕ್ಕೆ ಧರಿಸುವುದು.

## ಪವಿತ್ರವಿಧಿಃ.

ಚಂದ್ರಿಕಾಯಾಂ॥ ಯಜ್ಞೋಪವೀತೇಮೌಂಜ್ಯಾಂಚ ತಥಾಕುಶಪವಿ
ತ್ರಕೇ । ಬ್ರಹ್ಮಗ್ರಂಥಿಂವಿಜಾನೀಯಾ ದನ್ಯತ್ರತುಯಥಾರುಚಿ॥

ಯಮಃ॥ ಸಕೃತ್ಪ್ರದಕ್ಷಿಣೀಕೃತ್ಯ ಪವಿತ್ರಮಭಿಧೀಯತೇ ।
ತದೇವದ್ವಿಗುಣೀಕೃತ್ಯ ಬ್ರಹ್ಮಗ್ರಂಥಿರ್ವಿಧೀಯತೇ ॥
ಚತುರಂಗುಳಮಗ್ರಂಸ್ಯಾದ್ಗ್ರಂಥಿರೇಕಾಂಗುಳೋಭವೇತ್ ।
ದ್ವ್ಯಂಗುಲಂರಜ್ಜುವಲಯಂ ಪವಿತ್ರಸ್ಯತುಲಕ್ಷಣಂ ॥

ತಾತ್ಪರ್ಯ॥ ಯಜ್ಞೋಪವೀತದಲ್ಲಿಯೂ, ಮೌಂಜಿಯಲ್ಲಿಯೂ, ದರ್ಭ
ಪವಿತ್ರದಲ್ಲಿಯೂ ಬ್ರಹ್ಮಗ್ರಂಥಿಯಂ ರಚಿಸಬೇಕು. ಅನ್ಯತ್ರ ಪವಿತ್ರ
ಗ್ರಂಥಿಯಾದರೂ ಆಗಬಹುದು. ಒಂದುಬಾರಿ ಪ್ರದಕ್ಷಿಣವಾಗಿ ಸುತ್ತಿಹಾ
ಕುವ ಗ್ರಂಥಿಯೇ ಪವಿತ್ರಗ್ರಂಥಿಯು. ಎರಡಾವರ್ತಿ ಪ್ರದಕ್ಷಿಣವಾಗಿ

ಸುತ್ತಿಹಾಕುವ ಗ್ರಂಥಿ (ಗಂಟು) ಯೇ ಬ್ರಹ್ಮಗ್ರಂಥಿ ಯೆನ್ನುವದು. ಈ ಬ್ರಹ್ಮಗ್ರಂಥಿ ಪವಿತ್ರಗ್ರಂಥಿಗಳಿಗೆ ಅದರ ಮೇಯವು ಎರಡು ಅಂಗುಲವು, ಗ್ರಂಥಿಯು ಒಂದು ಅಂಗುಲವು ಅಗ್ರಭಾಗವು ನಾಲ್ಕು ಅಂಗುಲ ಪ್ರಮಾಣವೂ ಇರಬೇಕು. ಈ ಪವಿತ್ರವು ಎರಡು ಅಥವಾ ನಾಲ್ಕು ದರ್ಭೆಗಳಿಂದ ರಚಿಸತಕ್ಕದ್ದು. ದರ್ಭಪವಿತ್ರಾಭಾವದಲ್ಲಿ "ಅಶೂನ್ಯಂತು ಕರಂಕುರ್ಯಾತ್ಸುವರ್ಣರಜತೈಃಕುಶೈಃ" ಎಂಬಂತೆ ಸುವರ್ಣ ರಜತಪವಿತ್ರಗಳಾದರೂ ಆಗಬಹುದು. ಸ್ನಾನಕಾಲದಲ್ಲಿ ಸ್ನಾನಾಂಗ ದೇವರ್ಷ್ಯಾದಿ ತರ್ಪಣಗಳನ್ನ ಅಶಕ್ತಿಯಿಂದ ಮಾಡದಿದ್ದರೆ ಊರ್ಧ್ವಪುಂಡ್ರಧಾರಣಾನಂತರ ಮಾಡತಕ್ಕದ್ದು. ಮಂತ್ರಾದಿ ಷಡ್ವಿಧಸ್ನಾನಗಳಲ್ಲಿಯೂ ನೈಮಿತ್ತಿಕ ಸ್ನಾನಗಳಲ್ಲಿಯೂ ಸ್ನಾನಾಂಗ ತರ್ಪಣಗಳಿಲ್ಲವು.

## ಅಥ ಸಂಧ್ಯೋಪಾಸನ ವಿಧಿಃ.

ಸ್ಮೃತಿರತ್ನಾಕರೇ ದಕ್ಷಃ॥ ಸಂಧ್ಯಾಹೀನೋಽಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು। ಯದನ್ಯತ್ಕುರುತೇ ಕರ್ಮ ನತಸ್ಯಫಲಮಶ್ನುತೆ॥

ತಾತ್ಪರ್ಯ॥ ಸಂಧ್ಯಾನುಷ್ಠಾನವಂ ಮಾಡದವನು ಅಪರಿಶುದ್ಧನು, ಯಾವ ಕರ್ಮಾನುಷ್ಠಾನಕ್ಕೂ ಯೋಗ್ಯನಲ್ಲವು. ಸಂಧ್ಯಾನುಷ್ಠಾನವಂ ಮಾಡದವನು ಮತ್ಯಾವ ಕರ್ಮಗಳಂ ಮಾಡಿದಾಗ್ಯೂ ಆ ಕರ್ಮಫಲಗಳಂ ಹೊಂದಲಾರನು.

ಸ್ಮೃತ್ಯರ್ಥಸಾರೇ॥ ಕಾಮಾನ್ಮೋಹಾತ್ತಥಾಲೋಭಾತ್ಸಂಧ್ಯಾಂ ನಾತಿಕ್ರಮೇದ್ದ್ವಿಜಃ। ಸಂಧ್ಯಾತಿಕ್ರಮಣಾದ್ವಿಪ್ರೋ ಬ್ರಾಹ್ಮಣ್ಯಾತ್ಪತತೇಯತಃ॥

ತಾತ್ಪರ್ಯ॥ ಯಾವ ಕಾರಣಗಳಿಂದಲೂ ಬ್ರಾಹ್ಮಣರುಗಳು ಸಂಧ್ಯಾವಂದನಾನುಷ್ಠಾನವಂ ಬಿಡಬಾರದು. ಕಾಮದಿಂದಲೋ, ಅಜ್ಞಾನದಿಂದಲೋ, ಲೋಭದಿಂದಲೋ, ಸಂಧ್ಯಾತಿಕ್ರಮವಂ ಮಾಡಿದ್ದಾದರೆ ಬ್ರಾಹ್ಮಣ್ಯಾದಿಗಳಿಂದಲೇ ಬಿಡಲ್ಪಡುವರು.

ಭರದ್ವಾಜಃ। ಋಗ್ಯಜುಸ್ಸಾಮವೇದಾನಾಂ ರೂಪತ್ರಯಮಿದಂ ಪರಂ। ತಸ್ಮಾದ್ದ್ವಿಜೈಸ್ತುಸಂಧ್ಯಾ ತ್ರಿಃ [illegible]

ತಾತ್ಪರ್ಯ॥ ಈ ಸಂಧ್ಯೆಯು ಋಕ್, ಯಜು, ಸಾಮ, ವೇದಗಳ ರೂಪಾಂತರವೆಂದು ಹೇಳಲ್ಪಟ್ಟರುತ್ತೆ. ಅದುಕಾರಣ ಬ್ರಾಹ್ಮಣಾದಿಗಳು ಪ್ರಾತಸ್ಸಂಧ್ಯಾ, ಮಾಧ್ಯಾಹ್ನಿಕ, ಸಾಯಂಸಂಧ್ಯಾನುಷ್ಠಾನಗಳಂ ಮಾಡಬೇಕು.

ದಕ್ಷಃ॥ ಅಹೋರಾತ್ರಸ್ಯಯಸ್ಸಂಧಿ ಸ್ಸೂರ್ಯನಕ್ಷತ್ರವರ್ಜಿತಃ ।
ಸಾತುಸಂಧ್ಯಾಸಮಾಖ್ಯಾತಾ ಮುನಿಭಿಸ್ತತ್ವದರ್ಶಿಭಿಃ ॥

ತಾತ್ಪರ್ಯ॥ ಸೂರ್ಯನಿಂದಲೂ ನಕ್ಷತ್ರಗಳಿಂದಲೂ ವರ್ಜಿತವಾದ ಸಂಧಿಕಾಲವೇ ಸಂಧ್ಯೆ ಎಂದು ತತ್ವದರ್ಶಿಗಳಾದ ಮಹರ್ಷಿಗಳಿಂದ ನಿಷ್ಕರ್ಷಿಸಲ್ಪಟ್ಟಿರುವುದು.

ರಹಸ್ಯಾಮ್ನಾಯಬ್ರಾಹ್ಮಣೇ ॥
ಶ್ರು॥ ಆಸೂರ್ಯೋದಯಾತ್ಪೂರ್ವೋತ್ತರಾಶಾಮುಖಸ್ತ್ವಪ
ರೋತ್ತರಾಶಾಮುಖಆನಕ್ಷತ್ರೋದಯಾತ್ ॥

ತಾತ್ಪರ್ಯ॥ ಯಾವತ್ಸೂರ್ಯೋದಯ ಪರ್ಯಂತರ, ಪೂರ್ವಾಭಿಮುಖವಾಗಿಯೋ ಅಥವಾ ಉತ್ತರಾಭಿಮುಖವಾಗಿಯೋ ಪ್ರಾತಸ್ಸಂಧ್ಯಾನುಷ್ಠಾನವಂ ಮಾಡಬೇಕು. ನಕ್ಷತ್ರೋದಯ ಪರ್ಯಂತರ ಪಶ್ಚಿಮಾಭಿಮುಖನಾಗಿಯೋ ಅಥವಾ ಉತ್ತರಾಭಿಮುಖನಾಗಿಯೋ ಸಾಯಂಸಂಧ್ಯಾನುಷ್ಠಾನವಂ ಮಾಡಬೇಕು.

ಪಿತಾಮಹಃ॥ ಪ್ರಾತಸ್ಸಂಧ್ಯಾಂಸನಕ್ಷತ್ರಾಮುಪಾಸೀತಯಥಾವಿಧಿ ।
ಸಾದಿತ್ಯಾಂಪಶ್ಚಿಮಾಂಸಂಧ್ಯಾಂ ಅರ್ಧಾಸ್ತಮಿತಭಾಸ್ಕರಾಂ॥

ತಾತ್ಪರ್ಯ॥ ನಕ್ಷತ್ರಕಾಂತಿ ಇರುವಾಗಲೇ ಪ್ರಾತಸ್ಸಂಧ್ಯಾನುಷ್ಠಾನ ಮಾಡತಕ್ಕದ್ದು, ಸೂರ್ಯನಿರುವ ಕಾಲದಲ್ಲಿ ಅಂದರೆ ಅರ್ಧಾಸ್ತಮಯ ಕಾಲದಲ್ಲಿ ಸಾಯಂಸಂಧ್ಯಾನುಷ್ಠಾನವು ಮಾಡತಕ್ಕದ್ದು.

ಸ್ಮೃತ್ಯಂತರೇ॥ ಉತ್ತಮಾತುಸನಕ್ಷತ್ರಾಮಧ್ಯಮಾಲುಪ್ತತಾರಕಾ।
ಅಧಮಾಸೂರ್ಯಸಹಿತಾಪ್ರಾತಸ್ಸಂಧ್ಯಾತ್ರಿಧಾಮತಾ ॥

ತಾತ್ಪರ್ಯ॥ ನಕ್ಷತ್ರಕಾಂತಿ ಇರುವಾಗ ಅನುಷ್ಠಿಸಲ್ಪಡುವ ಪ್ರಾತಸ್ಸಂಧ್ಯೆಯು ಉತ್ತಮವಾದುದು. ನಕ್ಷತ್ರಕಾಂತಿ ನಷ್ಟವಾದಾಗ ಮಾಡುವ

ಸಂಧ್ಯಾನುಷ್ಠಾನವು ಮಧ್ಯಮವೆನಿಸುವುದು. ಸೂರ್ಯೋದಯಾನಂತರ ಸಂಧ್ಯಾನುಷ್ಠಾನವು ಅಧಮವಾದುದು.

ಮಾಧವೀಯೇ॥ ಆಸಂಗವಂಪ್ರಾತಸ್ಸಂಧ್ಯಾಯಾಂಗೌಣಕಾಲಃ।
ಆಪ್ರದೋಷಾವಸಾನಂಚಸಾಯಂಸಂಧ್ಯಾಯಾಃ॥

ತಾತ್ಪರ್ಯ॥ ಸಂಗಮಕಾಲ (ಆರುಘಳಿಗೆ) ಪರ್ಯಂತ ಪ್ರಾತಸ್ಸಂಧ್ಯಾನುಷ್ಠಾನಕ್ಕೆ ಗೌಣಕಾಲವು ಪ್ರದೋಷಾಂತವಾಗಿ (೩೪ ಘಳಿಗೆ) ಸಾಯಂಸಂಧ್ಯಾನುಷ್ಠಾನಕ್ಕೆ ಗೌಣಕಾಲವು.

## ಸಂಧ್ಯಾವಂದನ ಭಾಷ್ಯಂ.

ಶ್ಲೋ॥ ಲಕ್ಷ್ಮೀಲಕ್ಷ್ಮೀಶಪಾದಾಭ್ಯಾಮಿಯಮಸ್ತುನಮಸ್ಕೃತಿಃ।
ಶ್ರುತಿಸ್ಮೃತ್ಯುದಿತಂಕರ್ಮಯದಾರಾಧನಸಂಶ್ರಯಂ।

ಅವತಾರಿಕಾ॥ ಸರ್ವ ಧರ್ಮಸಂಪಾದನಾರ್ಥವಾಗಿ ಭಗವತ್ಸಮಾರಾಧನ ಪ್ರಥಮಸಾಧನವಾದ ಸಂಧ್ಯಾವಂದನಾದಿ ಕರ್ಮಗಳು ಅವಶ್ಯಕವಾಗಿ ಅನುಷ್ಠಿಸಲ್ಪಡತಕ್ಕವುಗಳು.

ಶ್ಲೋ॥ ಸಂಧ್ಯಾಹೀನೋಶುಚಿರ್ನಿತ್ಯಮನರ್ಹಸ್ಸರ್ವಕರ್ಮಸು।
ಯದನ್ಯತ್ಕುರುತೇಕರ್ಮನತಸ್ಯಫಲಭಾಗ್ಭವೇತ್॥
ನೋಪತಿಷ್ಠತಿಯಃಪೂರ್ವಾಂಉಪಾಸ್ತೇನಚಪಶ್ಚಿಮಾಂ।
ಸಶೂದ್ರವದ್ಬಹಿಷ್ಕಾರ್ಯಃಸರ್ವಸ್ಮಾದ್ದ್ವಿಜಕರ್ಮಣಃ॥
ನಿಯತಸ್ಯತುಸನ್ನ್ಯಾಸಃಕರ್ಮಣೋನೋಪಪದ್ಯತೇ॥

ತಾತ್ಪರ್ಯ॥ ಸಂಧ್ಯಾವಂದನಾನುಷ್ಠಾನವಂ ಮಾಡದವನು ಸರ್ವ ಕರ್ಮಾನುಷ್ಠಾನಕ್ಕೂ ಅನರ್ಹನು. ಅವನು ಮತ್ಯಾವ ಕರ್ಮಗಳಂ ಮಾಡಿದಾಗ್ಯೂ ಆ ಕರ್ಮಗಳು ಫಲವಂ ಕೊಡಲಾರವು.

ಯಾವನು ಸಾಯಂಪ್ರಾತಃ ಅನುಷ್ಠಿಸತಕ್ಕ ಸಂಧ್ಯೋಪಾಸನೆಯನ್ನು ಅನುಷ್ಠಿಸುವದಿಲ್ಲವೋ ಅವನು ಸಕಲ ಕರ್ಮದಲ್ಲಿಯೂ ಶೂದ್ರನೋಪಾದಿಯಲ್ಲಿ ಬಹಿಷ್ಕಾರ್ಯನು (ಹೊರಗೆ ಮಾಡತಕ್ಕವನು) ನಿಯತವಾದ ಸಂಧ್ಯಾದಿ ಕರ್ಮತ್ಯಾಗವು ಪ್ರತ್ಯವಾಯಕರವಾದ ಪ್ರಯುಕ್ತ ಸಂಧ್ಯಾ

ವಂದನಾದಿ ಕರ್ಮಗಳು ನಿತ್ಯದಲ್ಲಿಯೂ ಅನುಷ್ಠಿಸಲ್ಪಡತಕ್ಕವುಗಳೆಂಬ
ಭಾವವು

ಆಶೌಚಾದಿಗಳಲ್ಲಿ ಮಾತ್ರ ಸಂಧ್ಯಾವಂದನಕ್ಕೆ ಸಂಕೋಚ ವುಂಟು
ಆಶೌಚಕಾಂಡವಲ್ಲಿ ಆ ವಿಚಾರವು ಬರೆಯಲ್ಪಡುವುದು.

ಹೀಗೆ ಸಂಧ್ಯಾನುಷ್ಠಾನವು ನಿತ್ಯಕರ್ತವ್ಯವಾದ ಪ್ರಯುಕ್ತ ಸಂಧ್ಯಾ
ಮಂತ್ರಗಳು ಅಧ್ಯಯನ ಮಾಡಲ್ಪಟ್ಟದ್ದುವುಗಳಾದಾಗ್ಯು ಅವುಗಳ ಅರ್ಥ
ಜ್ಞಾನವಿಲ್ಲದ ಪಕ್ಷ ಖರ (ಕತ್ತೆ) ಕ್ಕೆ ಚಂದನಭಾರದೋಪಾದಿಯಲ್ಲಿ ಶ್ರ
ಮಕಾರಿಗಳಾಗುವವು.

ತಥಾಚ ಭಟ್ಟಭಾಸ್ಕರಮಿಶ್ರೈಃ ವೇದಭಾಷ್ಯೇ॥
ಶ್ಲೋ॥ ಯದಧೀತಮವಿಜ್ಞಾತಂನಿಗದೇನೈವಶಬ್ದ್ಯತೆ । ಅನಗ್ನಾವಿ
ವಶುಷ್ಕೈಧೋನತಜ್ಜ್ವಲತಿಕರ್ಹಿಚಿತ್ ॥

ಕಿಂಚ॥ ಸ್ಥಾಣುರಯಂಭಾರಹಾರಃಕಿಲಾಭೂದಧೀತ್ಯವೇದಂನವಿಜಾ
ನಾತಿಯೋರ್ಥಂ ॥ ಯೋರ್ಥಜ್ಞ ಇತ್ಸಕಲಂಭದ್ರಮಶ್ನುತೇನ
ನಾಕಮೇತಿಜ್ಞಾನವಿಧೂತಪಾಪ್ಮಾ ॥

ತಾತ್ಪರ್ಯ॥ ಅಭ್ಯಾಸಮಾಡಲ್ಪಟ್ಟ ಮಂತ್ರಾದಿಗಳ ಅರ್ಥವಂ ತಿಳಿ
ಯದೇ ಮಂತ್ರಗಳನ್ನು ಮಾತ್ರ ಪಠನ ಮಾಡಿದ್ದಾದರೆ, ಭಸ್ಮದಲ್ಲಿ ಒಣ
ಗಿದ ಸೌದೆಯನ್ನು ಹಾಕಿದರೆ ಹ್ಯಾಗೆ ಉರಿಯಲಾರದೇ ನಿಷ್ಪ್ರಯೋಜನ
ವಾಗುವುದೋ ಹಾಗೆ ನಿಷ್ಪ್ರಯೋಜನವಾಗುವುದು.

ಮತ್ತೇನಂದರೆ, ಯಾವನು ವೇದಾಧ್ಯಯನವಂ ಮಾಡಿ ಅದರ ಅರ್ಥ
ಜ್ಞಾನವಿಲ್ಲದವನೋ ಅವನು ಭಾರವಾಹಿಯಾದ ಸ್ಥಾಣು (ಹೊರೆಯನ್ನು
ಇಟ್ಟುಕೊಳ್ಳುವದಕ್ಕೆ ಕಲ್ಲುಗಳಿಂದ ಅಥವಾ ಮರದಿಂದ ಮಾಡಲ್ಪಡುವ
ಕಟ್ಟೆಯು) ವೆನಿಸುವನು. ಯಾವನು ಅರ್ಥವನ್ನು ತಿಳಿದವನೋ ಅವನು
ಇಹಲೋಕದಲ್ಲಿ ಸಕಲವಾದ ಮಂಗಳಗಳಂ ಹೊಂದುವನು. ಅಲ್ಲದೇ ವೇ
ದಾರ್ಥಜ್ಞಾನದಿಂದ ಸಕಲವಾದ ಪಾಪಗಳಿಂದಲೂ ಬಿಡಲ್ಪಟ್ಟವನಾಗಿ ವೈ
ಕುಂಠಲೋಕವನ್ನು ಹೊಂದುವನು.

ಸಾಕ್ಷಾದ್ಭಗವತ್ಪ್ರತಿಪಾದಕಗಳಾದ ಮಂತ್ರಗಳಿಂದೂ, ಕಿಂಚಿದ್ವ್ಯವ

ಧಾನದಿಂದ ಭಗವತ್ಪ್ರತಿಕಗಳಾಪ ಮಂತ್ರಗಳೆಂದೂ ಮಂತ್ರಗಳು ಎರ
ಡು ಪ್ರಕಾರಗಳಾಗಿರುವವು.

ವಿಷ್ಣುಸೂಕ್ತ, ಪುರುಷಸೂಕ್ತಾದಿ ಮಂತ್ರಗಳು ಸಾಕ್ಷಾತ್ತಾಗಿಯೇ
ಭಗವಂತನನ್ನು ಪ್ರತಿಪಾದಿಸುವವು. ಇತರಗಳಾದ ಸಾವಿತ್ರ್ಯಾಗ್ನೇಯಾದಿ
ಸೂಕ್ತಗತಗಳಾದ ಮಂತ್ರಗಳು ಭಗವದ್ವಿಭೂತಿಯನ್ನಾಶ್ರಯಿಸಿ ಆಯಾ
ಯಾ ದೇವತಾ ಪ್ರತಿಪಾದನದ್ವಾರಾ ಅಪರ್ಯವಸಾನ (ಮುಖ್ಯ) ವೃತ್ತಿ
ಯಿಂದ ಭಗವತ್ಪ್ರತಿಪಾದಕಗಳು.

ಅಂತರ್ಯಾಮಿಬ್ರಾಹ್ಮಣದಲ್ಲಿ,

ಶ್ರು॥ ಯಆತ್ಮನಿತಿಷ್ಠನ್ನಾತ್ಮನೋಂತರೋಯಮಾತ್ಮಾನವೇದ
ಯಸ್ಯಾತ್ಮಾಶರೀರಂ। ಯಆತ್ಮಾನಮಂತರೇಯಮಯತಿಸತ
ಆತ್ಮಾನ್ತರ್ಯಾಮ್ಯಮೃತಃ ॥ ಏಷಸರ್ವಭೂತಾನ್ತರಾತ್ಮಾದಿ
ವ್ಯೋದೇವಏಕೋನಾರಾಯಣಃ।ಅಜಏಕೋನಿತ್ಯಃ, ಯಸ್ಯ
ಪೃಥಿವೀಶರೀರಂ ಯಃಪೃಥಿವೀಮನ್ತರೇಸಂಚರನ್ಯಂಪೃಥಿವೀನ
ವೇದಯಸ್ಯಾಪಃಶರೀರಂ॥

ತಾತ್ಪರ್ಯ॥ ಯಾವ ಪರಮಾತ್ಮನು, ಜೀವಾತ್ಮನಲ್ಲಿರುವನಾದಾಗ್ಯೂ
ಜೀವಾತ್ಮನು ಪರಮಾತ್ಮನನ್ನ ತಿಳದಿಲ್ಲವೋ, ಯಾವಪರಮಾತ್ಮನಿಗೆ ಜೀ
ವಾತ್ಮನು ಶರೀರವೋ, ಜೀವಾತ್ಮನಿಗೆ ಅಂತರಾತ್ಮನಾಗಿ ಯಾವಪರಮಾ
ತ್ಮನು ಜೀವನನ್ನ ಕರ್ಮಾನುಸಾರವಾಗಿ ನಿಯಮಿಸುವನೋ ಆ ಅಮೃ
ತಶಬ್ದವಾಚ್ಯನಾದ ಪರಮಾತ್ಮನೇ ನಿನಗೆ ಅಂತರಾತ್ಮನು.

ಈ ಸರ್ವದೇವನಾದ ನಾರಾಯಣನೇ ಸರ್ವಭೂತಾಂತರ್ಯಾಮಿಯಾ
ದವನು.

ಈ ನಿತ್ಯನಾದ ಪರಮಾತ್ಮನೊಬ್ಬನೇ ಕರ್ಮಾಯತ್ತನಾದ ಉತ್ಪತ್ತಿ
ಯಿಲ್ಲದವನು.

ಯಾವಪರಮಾತ್ಮನಿಗೆ ಭೂಮಿಯು ಶರೀರವೋ, ಯಾವ ಪರಮಾತ್ಮ
ನು ಪೃಥಿವ್ಯಂತಸ್ಸಂಚರಿಸುವನಾದಾಗ್ಯೂ ಯಾವನನ್ನ ಭೂಮಿಯು ಅರಿ
ಯಲ್ಲವೋ, ಯಾವನಿಗೆ ಉದಕಗಳು ಶರೀರವೋ, ಇತ್ಯಾದಿ ಸಹಸ್ರಪ್ರಮಾ

ಣಾನುಸಾರ, ದೇವ, ತಿರ್ಯಕ್, ಮನುಷ್ಯ, ಸ್ಥಾವರಗಳಲ್ಲಿರುವ ಜೀವಾತ್ಮರುಗಳಿಗೆ ಭಗವಚ್ಛರೀರತ್ವವು ಸಿದ್ಧವಾಗಿರುವುದು.

ಭಗವಂತನಾದ ಪರಮಾತ್ಮನಿಗೆ (ತಿಷ್ಠ೯) ಇತ್ಯಾದಿ ಪೂರ್ವೋದಾಹೃತವಾದ ವಾಕ್ಯಗಳಿಂದ, ಸರ್ವಶರೀರತ್ವ ಸರ್ವಾತ್ಮತ್ವ ಸರ್ವವ್ಯಾಪಿತ್ವಾದಿಗಳು ಹೇಳಲ್ಪಟ್ಟಿರುವವು.

ನಾರಾಯಣೀಯ (ಅಂಭಸಿ) ದಲ್ಲಿ,—ವಿಶ್ವಮುಪಜೀವತಿ.

ಶ್ರು॥ ಪತಿಂವಿಶ್ವಸ್ಯಾತ್ಮೇಶ್ವರಗ್ಂಶಾಶ್ವತಗ್ಂಶಿವಮುಚ್ಯುತಂ।
ನಾರಾಯಣಂಮಹಾಜ್ಞೇಯಂವಿಶ್ವಾತ್ಮಾನಂಪರಾಯಣಂ।

ತಾತ್ಪರ್ಯ। ಜಗತ್ಪಾಲಕನಾಗಿಯೂ, ಸ್ವನಿರ್ವಾಹಕನಾಗಿಯೂ, ನಿತ್ಯಸ್ವಭಾವಿಕ ಮಂಗಲಾಕಾರನಾಗಿಯೂ, ಆಶ್ರಿತರುಗಳನ್ನ ಬಿಡದವನಾದ ಪ್ರಯುಕ್ತ ಅಚ್ಯುತಶಬ್ದವಾಚ್ಯನಾಗಿಯೂ, ಸ್ವ (ತನ್ನ) ಜ್ಞಾನಮಾತ್ರದಿಂದ ಸರ್ವಪಾಪನಾಶಕನಾಗಿಯೂ, ಸರ್ವಾತ್ಮರಿಗೂ ಅಂತರಾತ್ಮನಾಗಿಯೂ, ಜ್ಞಾನಿಗಳಿಗೆ ಪರಮಪ್ರಾಪ್ಯನಾಗಿಯೂ, ಇರುವ ನಾರಾಯಣನನ್ನು ಆಶ್ರಯಿಸಿ ಈ ಪ್ರಪಂಚವಿರುವದು.

ಶ್ರು॥ ಯಚ್ಚಕಿಂಚಿಜ್ಜಗತ್ಯಸ್ಮಿಂದೃಶ್ಯತೇಶ್ರೂಯತೇಪಿವಾ ।
ಅಂತರ್ಬಹಿಶ್ಚತತ್ಸರ್ವಂವ್ಯಾಪ್ಯನಾರಾಯಣಸ್ಥಿತಃ ॥

ತಾತ್ಪರ್ಯ। ಈ ಜಗತ್ತಿನಲ್ಲಿ, ಭೋಗ್ಯ, ಭೋಗೋಪಕರಣ, ಭೋಗಸ್ಥಾನರೂಪವಾಗಿ ಪರಿಣತವಾಗಿ ಪ್ರತ್ಯಕ್ಷವಾಗಿ ತೋರುತಲಿರುವ ಅಚೇತನ ತತ್ವವನ್ನೂ.

ಶ್ಲೋ॥ ಅವಿನಾಶಿತುತದ್ವಿದ್ಧಿಯೇನಸರ್ವಮಿದಂತತಂ। ವಿನಾಶಮವ್ಯಯಸ್ಯಾಸ್ಯನಕಶ್ಚಿತ್ಕರ್ತುಮರ್ಹತಿ ॥

ಅ॥ ಯಾವ ಆತ್ಮ ವಸ್ತುವಿನಿಂದ ಸಕಲವಾದ ಅಚೇತನ ವಸ್ತುವೂ ವ್ಯಾಪಿಸಲ್ಪಟ್ಟಿರುವುದೋ ಅಂತಹ, ಅತಿಸೂಕ್ಷ್ಮತ್ವದಿಂದ ನಾಶರಹಿತವಾದ ಈ ಆತ್ಮತತ್ವಕ್ಕೆ, ತದ್ವ್ಯತಿರಿಕ್ತವಾದ ಶಸ್ತ್ರಜಲಾಗ್ನ್ಯಾದಿರೂಪವಾದ ಯಾವಪದಾರ್ಥವೂ ನಾಶಕಾರಿಯಾಗಲಾರದಾದ ಪ್ರಯುಕ್ತ ಆತ್ಮತತ್ವವು ನಾಶರಹಿತವಾದದ್ದು ಎಂದು ತಿಳಿ—ಇತ್ಯಾದಿ ಶಾಸ್ತ್ರಸಿದ್ಧವಾದ

ಚೇತನ ವಸ್ತು ಸಮೂಹವನ್ನೂ ಕೂಡಾ, ಸರ್ವಾತ್ಮಕನಾಗಿಯೂ ಧಾರಕ
ನಾಗಿಯೂ, ನಿಯಂತಾವಾಗಿಯೂ, ಶೇಷಿಯಾಗಿಯೂ, ಇರುವ ನಾರಾಯ
ಣನು ಅಂತರ್ಬಹಿಃ (ಒಳಗೂ ಹೊರಗೂ) ವ್ಯಾಪಿಸಿಕೊಂಡಿರುವನು.

ಶ್ರು॥ ಸಬ್ರಹ್ಮಾಸಶಿವಸ್ಸೇಂದ್ರಸೋಕ್ಷರಃಪರಮಸ್ಸ್ವರಾಟ್॥

ತಾತ್ಪರ್ಯ॥ ಜಗತ್ಸೃಷ್ಟಿಕರ್ತನಾದ ಅಂಡಾಧಿಪನಾದ ಬ್ರಹ್ಮನೂ,
ಜಗತ್ಸಂಹಾರಕನಾದ ರುದ್ರನೂ, ತ್ರಿಲೋಕಾಧಿಪತಿಯಾದ ಇಂದ್ರನೂ,
ಜನ್ಮಾದಿ ವಿಕಾರಶೂನ್ಯನಾಗಿ ಭಗವಂತನೊಡನೆ ಪರಮಸಾಮ್ಯವನ್ನ
ಹೊಂದಿರುವ ಮುಕ್ತಾತ್ಮನೂ, ಇವರುಗಳೆಲ್ಲರೂ ನಾರಾಯಣನೇ, ಅಂದ
ರೆ, ಇವರೆಲ್ಲರು ಭಗವದ್ವಿಭೂತಿಭೂತರೆಂದು ಭಾವವು. ಇವರಲ್ಲಿ ಬ್ರಹ್ಮ
ರುದ್ರರುಗಳಿಗೆ ಭಗವಚ್ಛರೀರತ್ವದಿಂದ ವಿಭೂತಿತ್ವವು ಹೇಳಲ್ಪಟ್ಟಿರುವ
ದು. 'ದೇವಾನಾಮಸ್ಮಿವಾಸವಃ' ಎಂಬದಾಗಿ ವಿಭೂತಿತ್ವದಿಂದ ಪ್ರಸಿದ್ಧನಾ
ದ ಇಂದ್ರನನ್ನ ಹೇಳಿರುವದು ಇತರರಿಗೂ ಭಗವದ್ವಿಭೂತಿತ್ವವನ್ನ ಹೇಳು
ವದಕ್ಕೆಂದು ತಿಳಿಯತಕ್ಕದ್ದು.

ಹೀಗೆ ಸರ್ವಶಬ್ದವಾಚ್ಯತ್ವದಿಂದ ಸಕಲಶಬ್ದಗಳೂ ಪರಮಾತ್ಮವಾಚ
ಕಗಳೆಂದೂ ಸಿದ್ಧಾಂತಿಸಲ್ಪಟ್ಟಿತು.

ಶ್ಲೋ॥ ತಮೇವಂವಿದ್ವಾನಮೃತಇಹಭವತಿಸೋಶ್ನುತೇ ಸರ್ವಾನ್ಕಾ
ಮಾನ್ಸಹಬ್ರಹ್ಮಣಾವಿಪಶ್ಚಿತಾ॥

ಇತ್ಯಾದಿ ಶ್ರುತ್ಯನುಸಾರವಾಗಿ ಅಂತಹ ಪರಮಾತ್ಮಜ್ಞಾನವೇ ಮೋ
ಕ್ಷಪ್ರಾಪ್ತಿ ಸಾಧಕವೆಂಬುದು ನಿರ್ಧಾರವಾಗಿರುವುದು.

ಆ ಈ ಭಗವದುಪಾಸನವೇ ಅಭಿಧ್ಯಾನಂ, ಮನನಂ, ಅನುಸ್ಮರಣಂ,
ಭಜನಂ ಇತ್ಯಾದಿ ವಾಕ್ಯಗಳಿಂದ ಪರ್ಯಾಯವಾಗಿರುವುದು. ಈ ಅರ್ಥವು
ಸಕಲ ಪುರಾಣೇತಿಹಾಸಾದಿಗಳಲ್ಲಿ ಪ್ರಸಿದ್ಧವಾಗಿರುವವುದು.

ತಥಾಹಮನುಃ॥ ಪ್ರಶಾಸಿತಾರಂಸರ್ವೇಷಾಂಅಣೀಯಾಂಸಮಣೀ
ಯಸಾಂ। ರುಕ್ಮಾಭಂಸ್ವಪ್ನಧೀಗಮ್ಯಂವಿದ್ಯಾತ್ತುಪುರುಷಂಪರಂ॥

ತಾತ್ಪರ್ಯ॥ ಬ್ರಹ್ಮಾದಿಸ್ತಂಬ ಪರ್ಯಂತನಾದ ಚೇತನಾಚೇತನಾತ್ಮಕ
ನಾದ ಜಗತ್ತಿಗೆ ನಿಯಂತೃವಾಗಿಯೂ, ಸಕಲವಾದ ಅಚೇತನ ವಸ್ತುಗ

ಳಲ್ಲಿಯೂ, ಅಂತರ್‍ವ್ಯಾಪಕತ್ವದಿಂದ ಸೂಕ್ಷ್ಮಭೂತಗಳಾದ ಜೀವಾತ್ಮರು ಗಳಲ್ಲಿ ವ್ಯಾಪಕತ್ವದಿಂದ ಆ ಜೀವಾತ್ಮರುಗಳಿಂದಲೂ, ಸೂಕ್ಷ್ಮತರನಾಗಿ ಯೂ, ಆದಿತ್ಯವರ್ಣನಾಗಿಯೂ, (ಕುಲ್ಲೂಕ ಭಟ್ಟೀಯದಲ್ಲಿ ಶುದ್ಧ ಸು ವರ್ನ ಕಾಂತಿಯುಳ್ಳವನಾಗಿಯೂ,) ಸ್ವಪ್ನಸದೃಶ ಬುದ್ಧಿಪ್ರಾಪ್ಯನಾಗಿ ಯೂ, (ಸ್ವಪ್ನಬುದ್ಧಿಯು ನೇತ್ರಾದಿ ಬಾಹ್ಯೇಂದ್ರಿಯಗಳ ವ್ಯಾಪಾರವಿಲ್ಲದ ಕಾಲದಲ್ಲಿ ಮನೋಮಾತ್ರದಿಂದ ಉತ್ಪನ್ನವಾಗುವುದು. ಇದರಂತೆಯೇ ಪರಮಾತ್ಮ ವಿಷಯಕವಾದ ಬುದ್ಧಿಯೂ ಮನೋಮಾತ್ರಗ್ರಾಹಿಯು ಎಂಬದಾಗಿ ಕುಲ್ಲೂಕ ಭಟ್ಟೀಯದಲ್ಲಿ ಹೇಳಲ್ಪಟ್ಟಿರುತ್ತೆ.) ಇರುವ ಪರ ಮಾತ್ಮನು ವಿಶದತಮವಾದ ಪ್ರತ್ಯಕ್ಷತಾಪನ್ನವಾದ ಧ್ಯಾನದಿಂದಲಭ್ಯನು.

ಗೀತಾಯಾಂ॥ ಅನನ್ಯಾಶ್ಚಿಂತಯಂತೋಮಾಂಯೇಜನಾಃಪರ್ಯುಪಾ
ಸತೇ । ತೇಷಾಂನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂವಹಾ
ಮ್ಯಹಂ ॥

ತಾತ್ಪರ್ಯ॥ ಪ್ರಯೋಜನಾಂತರಾಪೇಕ್ಷೆ ಇಲ್ಲದವರಾಗಿ ಭಗವಂತನಾದ ಶ್ರೀಕೃಷ್ಣಸ್ವಾಮಿಯಾದ ನನ್ನನ್ನೇ ಯಾವಧನ್ಯರಾದ ಜನಗಳು ಉಪಾ ಸನೆ ಮಾಡುವರೋ, (ಭಗವಂತನ ಸ್ವರೂಪ, ರೂಪ, ಗುಣ, ವಿಭೂತಿ ಗಳೇ ಮೊದಲಾದ ಪ್ರಕಾರಗಳಿಂದ ಧ್ಯಾನಿಸುವರೋ) ಅಂತಹ ಭಗವತ್ಸಂ ಬಂಧವನ್ನ ಸರ್ವದಾ ಅಪೇಕ್ಷಿಸುವರಿಗೆ ಆಶ್ರಿತ ವಾತ್ಸಲ್ಯವುಳ್ಳ ನಾನು ಯೋಗವನ್ನೂ, ಕ್ಷೇಮವನ್ನೂ ಕೊಡುವೆನು (ಹೊಂದಲ್ಪಡದ ಭಗವ ತ್ಪ್ರಾಪ್ತಿರೂಪ ಲಾಭವೇ ಯೋಗವೆನಿಸುವದು. ಅದರ ಪರಿಪಾಲನವೇ ಕ್ಷೇಮವೆಂದು ತಿಳಿಯುವದು.)

ಶ್ಲೋ॥ ಧ್ಯಾಯೇನ್ನಾರಾಯಣಂದೇವಂಸ್ನಾನಾದಿಷುಚಕರ್ಮಸು।
ಬ್ರಹ್ಮಲೋಕಮವಾಪ್ನೋತಿನಚೇಹಾಜಾಯತೇಪುನಃ ॥

ತಾತ್ಪರ್ಯ॥ ಸ್ನಾನಾದಿ ಸಕಲ ಕರ್ಮಗಳಲ್ಲಿಯೂ ನಾರಾಯಣಸ್ವಾಮಿ ಯನ್ನು ಧ್ಯಾನ ಮಾಡತಕ್ಕದ್ದು. ಹೀಗೆ ಧ್ಯಾನಮಾಡುವವನು ಪರಬ್ರಹ್ಮ ಲೋಕವಂ ಹೊಂದುತ್ತಾನೆ. ಈ ಕರ್ಮಭೂಮಿಯಲ್ಲಿ ಪುನಃ ಉತ್ಪನ್ನ ನಾಗುವದಿಲ್ಲಾ.

ಶ್ಲೋ॥ ಆಲೋಡ್ಯಸರ್ವಶಾಸ್ತ್ರಾಣಿವಿಚಾರ್ಯಚಪುನಃಪುನಃ । ಇದಮೇ
ಕಂಸುನಿಷ್ಪನ್ನಂಧ್ಯೇಯೋನಾರಾಯಣಸ್ಸದಾ ॥

ತಾತ್ಪರ್ಯ॥ ಸರ್ವಶಾಸ್ತ್ರಗಳನ್ನೂ ವಿಚಾರಮಾಡಿದ್ದರಲ್ಲಿ ನಾರಾಯಣ
ನನ್ನು ಸರ್ವದಾ ಧ್ಯಾನಿಸಬೇಕೆಂದು ಸಿದ್ಧಕೃಷ್ಟವಾಯಿತು.

ಶ್ಲೋ॥ ಯಸ್ಯಧ್ಯಾನಪರೋಮರ್ತ್ಯೋರ್ಬ್ರಹ್ಮಹತ್ಯಾದಿದೋಷಜಂ।
ನಾಶಯೇತ್ಪಾತಕಂಸದ್ಯಃಕಿಂಪುನಃಕಥ್ಯತೇಪರಂ॥

ತಾತ್ಪರ್ಯ॥ ಬ್ರಹ್ಮಹತ್ಯಾದಿ ಪಾತಕಗಳಂ ಮಾಡಿದವನುಕೂಡಾ ನಾ
ರಾಯಣನ ಧ್ಯಾನನಿರತನಾಗಿದ್ದಲ್ಲಿ ಆ ಪಾಪಗಳಿಂದ ಬಿಡಲ್ಪಡುವನು. ಹೀ
ಗಿರುವಲ್ಲಿ ಅಲ್ಪವಾದ ಪಾಪಕಾರಿಗಳ ವಿಷಯದಲ್ಲಿ ಕೇಳತಕ್ಕದ್ದೇನು.

ಶ್ಲೋ॥ ಹರಿರ್ಹರತಿಪಾಪಾನಿದುಷ್ಟಚಿತ್ತೈರಪಿಸ್ಮೃತಃ। ಅನಿಚ್ಛಯಾ
ಪಿಸಂಸ್ಪೃಷ್ಟೋದಹತ್ಯೇವಹಿಪಾವಕಃ॥

ತಾತ್ಪರ್ಯ॥ ಇಷ್ಟವಿಲ್ಲದೇ ಪ್ರಮಾದದಿಂದ ಮುಟ್ಟಿದಾಗ್ಯೂ ಹೇಗೆ
ಬೆಂಕಿಯು ಸುಡುವದೋ ಹಾಗೆ ದುಷ್ಟಮನಸ್ಕರಿಂದ ಸ್ಮರಿಸಲ್ಪಟ್ಟವನಾ
ದಾಗ್ಯೂ ನಾರಾಯಣನು ಸಕಲ ಪಾಪಗಳಂ ನಾಶಮಾಡುವನು.

ಶ್ಲೋ॥ ಋಚೋಯಜೂಂಷಿಸಾಮಾನಿಯೋಧೀತೇಸಕೃದಂಜಸಾ।
ಸಕೃನ್ನಾರಾಯಣಂಸ್ಮೃತ್ವಾಫಲಂತಸ್ಯಸಮಶ್ನುತೇ॥

ತಾತ್ಪರ್ಯ॥ ಋಕ್, ಯಜು, ಸಾಮ ವೇದಗಳನ್ನ ಅಧ್ಯಯನ ಮಾಡಿದ
ರೆ ಯಾವಫಲ ಪ್ರಾಪ್ತವಾಗುವದೋ, ನಾರಾಯಣನನ್ನ ಸಕೃದಾವೃತ್ತಿ
ಸ್ಮರಿಸಿದರೆ ಆ ಫಲಪ್ರಾಪ್ತಿಯಾಗುವುದು.

ಇತ್ಯಾದಿ ವಾಕ್ಯಗಳಿಂದ, ಪರಮಪುರುಷ, ಪರತತ್ವ, ಪರಬ್ರಹ್ಮ,
ಪರಂಜ್ಯೋತಿಃ, ಪರಮಾತ್ಮ, ಹರಿ, ಕೃಷ್ಣ ವಾಸುದೇವಾದಿ ಶಬ್ದವಾಚ್ಯ
ನಾದ ನಾರಾಯಣನ ವೇದನೋ (ತಿಳಿಯುವ) ಪಾಯವು ಶಬ್ದವೇ. ಎಂ
ಬುದಾಗಿ ಮನುಸ್ಮೃತಿಯಲ್ಲಿ ಹೇಳಲ್ಪಟ್ಟಿರುವುದು.

ಮನುಃ॥ ಏನಮೇಕೇವದಂತ್ಯಗ್ನಿಂಮರುತೋನ್ಯೇಪ್ರಜಾಪತಿಂ।
ರುದ್ರಮೇಕೇಪರೇಪ್ರಾಣಂಅಪರೇಬ್ರಹ್ಮಶಾಶ್ವತಂ॥

ತಾತ್ಪರ್ಯ॥ ಈ ಪರಮಾತ್ಮನನ್ನ ಕೆಲವು ವೇದಭಾಗಗಳು ಅಗ್ನಿಯ
ನ್ನಾಗಿಯೂ, ವಾಯುಗಳನ್ನಾಗಿಯೂ, ಪ್ರಜಾಪತಿಯನ್ನಾಗಿಯೂ, ರುದ್ರ
ನನ್ನಾಗಿಯೂ, ಪ್ರಾಣವನ್ನಾಗಿಯೂ ಹೇಳುವವು. ಮತ್ತೆ ಕೆಲ ವೇದಭಾ
ಗಗಳು ಶಾಶ್ವತವಾದ ಬ್ರಹ್ಮವೆಂದು ಹೇಳುವವು.

ಪುರಾಣಾದಿಗಳಲ್ಲಿಯೂ.

ಶ್ಲೋ॥ ಸರ್ವರತ್ನಮಯೋಮೇರುಃಸರ್ವಾಶ್ಚರ್ಯಮಯಂನಭಃ ।
ಸರ್ವತೀರ್ಥಮಯೀಗಂಗಾಸರ್ವದೇವಮಯೋಹರಿಃ ।

ತಾತ್ಪರ್ಯ॥ ಹೇಗೆ ಮೇರುಪರ್ವತವು ಸರ್ವರತ್ನಮಯವಾದುದೋ, ಹೇಗೆ ಆಕಾಶವು ಸರ್ವಾಶ್ಚರ್ಯಮಯವಾದುದೋ, ಹೇಗೆ ಗಂಗಾನದಿಯ ಸರ್ವತೀರ್ಥಮಯವಾದುದೋ, ಹಾಗೆ ನಾರಾಯಣನು ಸರ್ವ ದೇವ ಯನು, ಸರ್ವ ದೇವಮಯತ್ವವು ಸರ್ವಾಂತರ್ಯಾಮಿಯಾದ ಪ್ರಯುಕ್ತ ಸರ್ವಶಬ್ದ ವಾಚ್ಯತ್ವದಿಂದೆಂದರಿಯತಕ್ಕದ್ದು.

ಶ್ಲೋ॥ ತಸ್ಮಾದನನ್ಯಭಾವಸ್ತ್ವಂದೇವದೇವಂಜನಾರ್ದನಂ । ಆರಾ
ಧಯಹೃಷೀಕೇಶಂಮನೋವಾಕ್ಕಾಯಕರ್ಮಭಿಃ ॥

ತಾತ್ಪರ್ಯ॥ ಸರ್ವದೇವನಾಯಕನಾಗಿಯೂ, ಸರ್ವೇಂದ್ರಿಯಾಧಿಪನಾ ಗಿಯೂ ಇರುವ ಜನಾರ್ದನನನ್ನ ಅನ್ಯಮನಸ್ಕನಾಗದೇ (ಬೇರೆ ಮ ಸ್ಸಿಡದೇ) ಮನಸ್ಸಿನಿಂದಲೂ, ವಾಕ್ಕಿನಿಂದಲೂ, ಕರ್ಮದಿಂದಲೂ ಪೂ ಮಾಡು.

ಶ್ಲೋ॥ ಸಾಜಿಹ್ವಾಯಾಹರಿಂಸ್ತೌತಿತಚ್ಚಿತ್ತಂಯತ್ತದರ್ಪಿತಂ । ತಾವೇ
ವಹಿಕರೌಶ್ಲಾಘ್ಯೌತತ್ಪೂಜನತತ್ಪರೌ ॥

ತಾತ್ಪರ್ಯ॥ ನಾರಾಯಣನನ್ನ ಸ್ತೋತ್ರಮಾಡುವದೇ ನಾಲಿಗೆಗೆ ಪ್ರ ಯೋಜನವು. ಭಗವಂತನನ್ನ ಸ್ಮರಿಸಿಕೊಂಡಿರುವದೇ ಮನಸ್ಸಿನ ಮುಖ್ಯ ಕರ್ತವ್ಯವು. ಯಾವ ಹಸ್ತಗಳು ಭಗವದಾರಾಧನ ಪ್ರವೃತ್ತಗಳೋ ಅ ಗಳೇ ಹಸ್ತಗಳೆನಿಸುವವು.

ಶ್ಲೋ॥ ಶ್ರುತಿಸ್ಮೃತ್ಯುದಿತಂಸಮ್ಯಕ್‌ನಿತ್ಯಮಾಚಾರಮಾಚರೇತ್ ।
ಆಚಾರಪ್ರಭವೋಧರ್ಮೋಧರ್ಮಸ್ಯಪ್ರಭುರಚ್ಯುತಃ ॥

ತಾತ್ಪರ್ಯ॥ ವೇದಗಳಲ್ಲಿಯೂ ಧರ್ಮಶಾಸ್ತ್ರಗಳಲ್ಲಿಯೂ ಹೇಳಲ್ಪಟ್ಟಿ ರುವ ಆಚಾರಗಳನ್ನ ನಿತ್ಯದಲ್ಲಿಯೂ ಅನುಷ್ಠಿಸಬೇಕು. ಆಚಾರದಿಂದ ಧರ್ಮವು ಉತ್ಪನ್ನವಾಗುವದು. ಧರ್ಮಕ್ಕೆ ಅಚ್ಯುತನೇ ಪ್ರಭುವು.

ಇತ್ಯಾದಿ ವಾಕ್ಯಗಳ ಪ್ರಕಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂ ತ್ರೈವರ್ಣಿಕರಿಗೆ ಶ್ರುತಿಸ್ಮೃತಿಗಳಿಂದ ಹೇಳಲ್ಪಟ್ಟಿರುವ ಸ್ವವರ್ಣಾಶ್ರ

ಧರ್ಮರೂಪವಾದ ನಿತ್ಯನೈಮಿತ್ತಿಕಾದಿ ಕರ್ಮಾನುಷ್ಠಾನವೇ ಆಚಾರ ಸಾಧ್ಯವಾದ ಧರ್ಮಕ್ಕೆ ಪ್ರಭುವೆಂದೂ, ಪ್ರಸಿದ್ಧನಾದ ನಾರಾಯಣನ ಆರಾಧನವೆಂದೂ, ಅದು ಅವಶ್ಯ ಕರ್ತವ್ಯವೆಂದೂ, ಸಿದ್ಧವಾದುದು.

ಯಥೋಕ್ತಂಭಗವದ್ಗೀತಾಯಾಂ ॥
ಸ್ವಕರ್ಮಣಾತಮಭ್ಯರ್ಚ್ಯಸಿದ್ಧಿಂವಿಂದತಿಮಾನವಃ।
ಕರ್ಮಣೈವಹಿಸಂಸಿದ್ಧಿಮಾಸ್ಥಿತಾಜನಕಾದಯಃ॥

ತಾತ್ಪರ್ಯ॥ ಮನುಜನು ತನ್ನ ವರ್ಣಾಶ್ರಮಾನುಗುಣವಾದ ಕರ್ಮ ದಿಂದ ಆ ಪುರುಷೋತ್ತಮನನ್ನ ಪೂಜೆಮಾಡಿ ಸಿದ್ಧಿಯನ್ನ ಹೊಂದುವನು. ಈ ಅರ್ಥವಲ್ಲಿ ಸದಾಚಾರವೂ ಇರುವದು. ಜ್ಞಾನಿಗಳಲ್ಲಿ ಅಗ್ರೇಸರರಾದ ಜನಕಾದಿ ರಾಜರ್ಷಿಗಳು ಕರ್ಮಾನುಷ್ಠಾನದಿಂದಲೇ ಜ್ಞಾನಯೋಗಫಲ ವನ್ನ ಹೊಂದಿರುವರು.

ವಿಷ್ಣುಪುರಾಣೇ॥ ವರ್ಣಾಶ್ರಮಾಚಾರವತಾಪುರುಷೇಣಪರಃಪುಮಾನ್॥
ವಿಷ್ಣುರಾರಾಧ್ಯತೇಪಂಥಾಃನಾನ್ಯಸ್ತತ್ತೋಷಕಾರಕಃ॥

ತಾತ್ಪರ್ಯ॥ ಅವನವನ ವರ್ಣಾಶ್ರಮಕ್ಕೆ ಅನುಗುಣವಾದ ಆಚಾರ ದಿಂದ ಪರಮಪುರುಷನಾದ ನಾರಾಯಣನು ಪೂಜೆಯನ್ನ ಹೊಂದಿ ತೃಪ್ತ ನಾಗುವನೇ ವಿನಹಾ ಅದಕ್ಕೆ ವ್ಯತಿರಿಕ್ತವಾದ ಇತರ ಧರ್ಮಾನುಷ್ಠಾನ ದಿಂದ ಸಂತುಷ್ಟನಾಗಲಾರನು.

ಶ್ಲೋ॥ ಶ್ರುತಿಸ್ಮೃತ್ಯುದಿತಂಕರ್ಮಮನಸಾಪಿಚಯೇನರಾಃ।
ಸಮುಲ್ಲಂಘ್ಯಪ್ರವರ್ತಂತೇನಭಕ್ತಾಮಮಭಾಮಿನಿ॥

ತಾತ್ಪರ್ಯ॥ ಇದು ವರಾಹಪುರಾಣದಲ್ಲಿ ಭೂದೇವಿಯನ್ನು ಕುರಿತು ಭಗವದ್ವಾಕ್ಯವು.

ಶ್ರುತಿಗಳಲ್ಲಿಯೂ, ಧರ್ಮಶಾಸ್ತ್ರಗಳಲ್ಲಿಯೂ, ಹೇಳಲ್ಪಟ್ಟಿರುವ ಸ್ವವ ರ್ಣಾಶ್ರಮೋಚಿತವಾದ ಕರ್ಮಗಳನ್ನ ಯಾರು ಮನಸ್ಸಿನಿಂದ ಕೂಡಾ ಉಲ್ಲಂಘಿಸುವರೋ, ಅವರುಗಳು ನನಗೆ ಭಕ್ತರಲ್ಲವು.

ಶ್ಲೋ॥ ಜಗತ್ಕರ್ಮಮಹೇಶಸ್ಯದಿವ್ಯಜ್ಞಾನಾದಿಶೋಭಯಂ।
ಇತಿನಿತ್ಯಕ್ರಿಯಾಃಕುರ್ಯುಃನರಾಯೇವೈಷ್ಣವಾಸ್ತುತೇ॥

ತಾತ್ಪರ್ಯ॥ ಜಗತ್ಪ್ರಭುವಾದ ಪರಮಪುರುಷನ ಶ್ಲಾಘನೀಯವಾ
ಆಜ್ಞಾಕೈಂಕರ್ಯಾನುಷ್ಠಾನವೇ ನಮ್ಮಗಳ ಕರ್ತವ್ಯವೆಂದು ತಿಳಿದು ಯ
ರುಗಳು ಸ್ವವರ್ಣಾಶ್ರಮಾಚಾರಾನುಗುಣವಾದ ಕರ್ಮಗಳಂ ಅನು
ಸುವರೋ ಅವರುಗಳೇ ವಿಷ್ಣುಭಕ್ತರೆ (ವೈಷ್ಣವರು) ನಿಸುವರು.

ಶ್ಲೋ॥ ವಿಷ್ಣುಭಕ್ತಿಸಮಾಯುಕ್ತಾನ್ ಶ್ರೌತಸ್ಮಾರ್ತಪ್ರವರ್ತಕಾನ್ ।
ಪ್ರೀತೋಭವತಿಯೋದೃಷ್ಟ್ವಾವೈಷ್ಣವೋಸೌಪ್ರಕೀರ್ತಿತಃ ॥

ತಾತ್ಪರ್ಯ॥ ವಿಷ್ಣುವಿನಲ್ಲಿ ಭಕ್ತಿಯುಳ್ಳವರಾಗಿಯೂ, ಶ್ರುತಿಗಳಲ್ಲಿಯೂ
ಸ್ಮೃತಿಗಳಲ್ಲಿಯೂ, ಉಕ್ತಗಳಾಗಿರುವ ಧರ್ಮಗಳನ್ನು ಅನುಷ್ಠಿಸುವರ
ಗಿಯೂ ಇರುವವರುಗಳನ್ನು ನೋಡಿ ಯಾವವನು ಸಂತುಷ್ಟನಾಗುವ
ನೋ ಅವನೂ ವೈಷ್ಣವ (ವಿಷ್ಣುಭಕ್ತ) ನೆನಿಸಿಕೊಳ್ಳುವನು.

ಪುರಾಣೇ॥ ನಚಲತಿನಿಜವರ್ಣಧರ್ಮತೋಯಃ ಸಮಮತಿರಾತ್ಮ
ಸುಹೃದ್ವಿಪಕ್ಷಪಕ್ಷೇ। ನಹರತಿನಚಹಂತಿಕಿಂಚಿದುಚ್ಚೈಃ ಸ್ಥಿತ
ಮನಸಂತಮವೇಹಿವಿಷ್ಣುಭಕ್ತಂ॥

ತಾತ್ಪರ್ಯ॥ ಯಮಧರ್ಮರಾಯನು, ತನ್ನ ಕಿಂಕರನಲ್ಲಿ ಹೇಳುವನು.
ಯಾವನು ತನ್ನ ವರ್ಣಾಶ್ರಮಾನುಗುಣವಾದ ಧರ್ಮವನ್ನು ಬಿಡುವ
ದಿಲ್ಲವೋ, ಮಿತ್ರರಲ್ಲಿ ಹೇಗೋ ಹಾಗೆ ಶತ್ರುಗಳಲ್ಲಿಯೂ ಸಮಾನವಾ
ಬುದ್ಧಿಯುಳ್ಳವನೋ, ಪರಸ್ವತ್ತನ್ನ ಯಾವವನು ಅಪಹರಿಸುವದಿಲ್ಲವೋ
ಪರರಿಗೆ ಯಾವನು ಹಿಂಸೆಯನ್ನು ಕೊಡುವದಿಲ್ಲವೋ, ಅಂತಹ ಮನುಷ
ನನ್ನು ಸ್ಥಿತಪ್ರಜ್ಞೆಯುಳ್ಳ (ನಿಶ್ಚಲವಾದ ಮನಸ್ಸುಳ್ಳ) ದನಾದ ವ
ಯುಕ್ತ ವಿಷ್ಣುಭಕ್ತನನ್ನಾಗಿ ತಿಳಿ.

ಇತ್ಯಾದಿ ವಾಕ್ಯಗಳಿಂದ ಶ್ರೌತ ಸ್ಮಾರ್ತ ಕರ್ಮಪ್ರವರ್ತಕತ್ವವ
ವೈಷ್ಣವ ಲಕ್ಷಣವೆಂದು ಹೇಳಲ್ಪಟ್ಟಿರುವುದು.

ಅದುಕಾರಣ ಸಕಲ ಧರ್ಮಾರ್ಥವಾಗಿ, ಭಗವದಾರಾಧನಕ್ಕೆ ಮು
ಸಾಧನವಾದ ಸಂಧ್ಯಾಕರ್ಮವು ಸರ್ವಥಾ (ಅವಶ್ಯಕವಾಗಿ) ಅನುಷ್ಠಿ
ಲ್ಪಡತಕ್ಕದ್ದು.

ಗೀತಾ॥ ನಿಯತಸ್ಯತುಸನ್ನ್ಯಾಸಃಕರ್ಮಣೋನೋಪಪದ್ಯತೇ ॥

ತಾತ್ಪರ್ಯ॥ ಕಾಮ್ಯಕರ್ಮಗಳ ಹಾಗೆ ನಿಯತವಾದ (ನಿತ್ಯ) ಕರ್ಮಗಳಿಗೆ ತ್ಯಾಗವು ಉಪಪನ್ನವಾಗಲಾರದು, (ಕೂಡಲಾರದು)

ಹೀಗೆ ಸಂಧ್ಯಾನುಷ್ಠಾನವು ಸರ್ವಥಾ ಕರ್ತವ್ಯವಾದ ಪ್ರಯುಕ್ತ.

ಶ್ರು॥ ಯಏತೇನಹವಿಷಾಯಜತೆ, ಯಉಚೈನದೇವಂವೇದ.

ತಾತ್ಪರ್ಯ॥ ಯಾವವನು ಈ ಹವಿಸ್ಸಿನಿಂದ ದೇವಪೂಜೆಯನ್ನು (ಯಜ್ಞವನ್ನು) ಮಾಡುವನೋ, ಅಥವ ಈ ಅರ್ಥವನ್ನ ಯಥಾವತ್ತಾಗಿ ಯಾವವನು ತಿಳಿಯುವನೋ ?

ಎಂಬದಾಗಿ ಅನುಷ್ಠಾನಕ್ಕೂ, ಅರ್ಥಜ್ಞಾನಕ್ಕೂ ಸಮಾನವಾದ ಫಲವನ್ನ ತೋರಿಸುವ ಶ್ರುತಿಯಿಂದಲೇ ಸರ್ವಥಾ ಸಂಧ್ಯಾಮಂತ್ರಾರ್ಥಜ್ಞಾನವು ಅತ್ಯವಶ್ಯಕವೆಂದು ಹೇಳಲ್ಪಟ್ಟದ್ದಾಯಿತು.

ಮತ್ತೇನೆಂದರೆ, ಮಂತ್ರವು, ಅನುಷ್ಠಿಸಲ್ಪಡುವ ಅರ್ಥಪ್ರಕಾಶಕವಾಗಿಯೂ, ಮನನ (ಮಂಪಟ್ಟಿಗೆ) ಸಾಧನವಾಗಿಯೂ ಇರುವುದು. ಅನುಭವಿಸಲ್ಪಟ್ಟಿರುವ ಪದಾರ್ಥಸ್ಮರಣವೇ ಮನನವೆಂಬುವದು ಅನುಷ್ಠಿಸಬೇಕಾಗಿರುವ ಅರ್ಥದ ಪ್ರಕಾಶನವೂ, ಮನನವೂ ಕೂಡಾ ಅರ್ಥಜ್ಞಾನವಿಲ್ಲದ ಪುರುಷನಿಗೆ ಕೂಡುವದಿಲ್ಲವು.

ಅದರಲ್ಲಿಯೂ ಸಕಲ ಮಂತ್ರಗಳಿಗೂ ಮನನಸಾಧಕತ್ವವಿದ್ದಾಗ್ಯೂ ಭಗವನ್ಮನನ ಸಾಧನತ್ವವೆಂದೇ ನಿಷ್ಕರ್ಷವಾಗಿರುವುದು.

ವಿಷ್ಣುಪುರಾಣೇ॥ ವಾಸುದೇವೇಮನೋಯಸ್ಯಜಪಹೋಮಾರ್ಚನಾ
ದಿಷು। ತಸ್ಯಾಂತರಾಯೋಮೈತ್ರೇಯದೇವೇಂದ್ರತ್ವಾದಿಕಂಫಲಂ॥

ತಾತ್ಪರ್ಯ। ಅವತಾರಿಕಾ। ಭಗವಚ್ಚಿಂತಾಯುಕ್ತಗಳಾದ ನಿತ್ಯಕರ್ಮಗಳು ಮೋಕ್ಷಪ್ರದಗಳೆಂದು ಹೇಳುವುದು ಯಾವವನು ಜಪ, ಜಪದಲ್ಲಿಯೂ, ಹೋಮದಲ್ಲಿಯೂ, ಪೂಜಾದಿ ಕರ್ಮಗಳಲ್ಲಿಯೂ ಭಗವಂತನಾದ ವಾಸುದೇವನನ್ನೇ ಧ್ಯಾನಿಸುವನೋ ಅಂತಹ ಪುರುಷನಿಗೆ ಇಂದ್ರಾದಿಗಳ ಪದವಿಗಳು ವಿಘ್ನರೂಪಗಳಾಗಿರುವವು (ಅಥವಾ ಇಂದ್ರಾದಿಪದವಿಗಳು, ಧ್ರುವನಿಗೆ ಧ್ರುವಮಂಡಲದೋಪಾದಿಯಲ್ಲಿ ಆನುಷಂಗಿಕಗಳಾಗಿರುವವು, ಎಂದು ಹೇಳುವರು.)

ಹೇಗೆ ಪಂಕಜವೆಂಬುವ ಶಬ್ದವು ಕೆಸರಿನಲ್ಲಿ ಉತ್ಪನ್ನವಾಗುವ ಪಾ
ಮೊದಲಾದವುಗಳಿಗೆ ಅರ್ಥವಾದಾಗ್ಯೂ ಕಮಲದಲ್ಲಿ ಹೇಗೆ ಲೋಕಪ್ರ
ತ್ರವೃತ್ತಿ ಇರುವದೋ ಹಾಗೆ ಈ ಮಂತ್ರಗಳು ವಾಸುದೇವನಲ್ಲಿ ಪ್ರವೃತ್ತ
ಗಳೆಂದು ಭಾವವು.

ಈ ಪ್ರಕಾರವಾಗಿ ಮಂತ್ರಾರ್ಥಗಳು ತಿಳಿಯಲ್ಪಡತಕ್ಕವುಗಳಾ
ಪ್ರಯುಕ್ತ ವ್ಯಾಖ್ಯಾಹೀನಗಳಾದ ಮಂತ್ರಗಳು ಬೋಧೆಯನ್ನು ಕೊ
ಲಾರವು. ಅದುಕಾರಣ ಅರ್ಥವಿವರಣವು ಅವಶ್ಯಕವು.

ಶ್ರು॥ ಯೋಹವಾಅವಿದಿತಾರ್ಷೇಯಚ್ಛಂದೋದೈವತಬ್ರಾಹ್ಮಣೇ
ನಮಂತ್ರೇಣಯಾಜಯತಿಯಾಜಯತಿವಾಧ್ಯಾಪಯತಿವಾ।
ಸ್ಥಾಣುವರ್ಚ್ಛತಿಗರ್ತಂವಾ ಪದ್ಯತೇಪ್ರವಾಮೀಯತೇಪಾಪೀ
ಯಾನ್ಭವತಿಯಾತಯಾಮಾನ್ಯಸ್ಯಛಂದಾಂಸಿಭವಂತಿ ॥
ಅವಿದಿತ್ವಾಋಷಿಂಛಂದೋದೈವತಂಯೋಗಮೇವಚ।
ಯೋಧ್ಯಾಪಯೇಜ್ಜಪೇದ್ವಾಪಿಪಾಪೀಯಾನ್ಜಾಯತೇತುಸಃ ॥

ತಾತ್ಪರ್ಯ॥ ಯಾವಮನುಷ್ಯನು ಮಂತ್ರಗಳಿಗೆ ಋಷಿಗಳನ್ನೂ, ಛಂ
ದಸ್ಸನ್ನೂ, ದೇವತೆಯನ್ನೂ, ಮಂತ್ರವ್ಯಾಖ್ಯಾನರೂಪವಾದ ಬ್ರಾಹ್ಮಣ
ವನ್ನೂ (ಬ್ರಾಹ್ಮಣ-ವೇದಭಾಗವು) ತಿಳಿಯದೆ ಯಜ್ಞವನ್ನು ಮಾಡು
ವನೋ, ಯಜ್ಞವನ್ನು ಮಾಡಿಸುವನೋ, ಅಧ್ಯಯನ ಮಾಡುವನೋ,
ಇತರರಿಗೆ ಅಧ್ಯಯನ ಹೇಳುವನೋ, ಅಂಥ ಮನುಷ್ಯನು ಪಾಪಿಯಾ
ಗಿ ದುರ್ಗತಿಯನ್ನು ಹೊಂದುವನು. ಅವನ ಆಯುಸ್ಸು ನ್ಯೂನವಾಗುವ
ದು, ಅವನಿಂದ ಅಧ್ಯಯನ ಮಾಡಲ್ಪಟ್ಟ ಅಧ್ಯಯನಗಳು ನಿಸ್ಸಾರವಾಗು
ವವು,—ಇತ್ಯಾದಿ ಶ್ರುತಿ ಸ್ಮೃತಿಗಳ ಪ್ರಕಾರ ಋಷಿ ಛಂದೋ, ದೇವ
ತಾಜ್ಞಾನವಿಲ್ಲದಪಕ್ಷ ಪ್ರತ್ಯವಾಯವು ಪ್ರಾಪ್ತವಾಗುವದರಿಂದಲೂ.

ಶ್ರು॥ ಅಥಯೋಮಂತ್ರೇಮಂತ್ರೇ ವೇದಸಸರ್ವಮಾಯುರೇತಿಸ
ಶ್ರೇಯಾನ್ಭವತಿಅಯಾತಯಾಮಾನ್ಯಸ್ಯಛಂದಾಂಸಿಭವಂತಿ ॥
ಋಷಿಂಛಂದೋದೇವತಾಂಚಧ್ಯಾಯೇನ್ಮಂತ್ರಸ್ಯಸರ್ವದಾ।
ಯಸ್ತುಮಂತ್ರಂಜಪೇದ್ವಾಗ್ಮೀಋದ್ಧಂತಸ್ಯಫಲಂಭವೇತ್ ॥

ತಾತ್ಪರ್ಯ॥ ಯಾವನು ಪೂರ್ವೋಕ್ತಪ್ರಕಾರ ಋಷಿಛಂದೋ

ದೇವತೆಗಳನ್ನು ಪ್ರತಿಮಂತ್ರಗಳಲ್ಲಿಯೂ ತಿಳಿದಿರುವನೋ, ಅವನು ದೀರ್ಘಾಯುಷ್ಮಂತನಾಗಿಯೂ ಶ್ರೇಯೋವಂತನಾಗಿಯೂ ಇರುವನು. ಇವನಿಂದ ಅಭ್ಯಾಸಮಾಡಲ್ಪಟ್ಟ ಅಧ್ಯಯನಗಳು ಸಾರವುಳ್ಳವುಗಳಾಗಿರುವವು, ಅವನಿಗೆ ಸರ್ವಫಲವೂ ಸಮೃದ್ಧವಾಗುವುದು.

ಎಂಬದಾಗಿ ಶ್ರುತಿ ಸ್ಮೃತಿಗಳಿಂದಲೇ ಋಷ್ಯಾದಿಗಳ ವೇದನವು (ತಿಳುವಳಿಕೆಯು) ಶ್ರೇಯಃಪ್ರದವಾದುದೆಂದು ಹೇಳಲ್ಪಟ್ಟಿರುವ ಕಾರಣ ಮಂತ್ರಗಳಿಗೆ ಅರ್ಥವನ್ನೂ ಋಷಿ, ಛಂದೋದೇವತೆಗಳನ್ನೂ ಅವಶ್ಯಕವಾಗಿ ತಿಳಿಯಬೇಕೆನ್ನುವುದು ಸಿದ್ಧವಾಯಿತು.

ಶೌನಕಃ॥ ಯೋಯಸ್ಯವಾಕ್ಯಂಮಂತ್ರಃಸತಸ್ಯಋಷಿಃ ॥

ತಾತ್ಪರ್ಯ॥ ಅದರಲ್ಲಿ ಯಾವ ಋಷಿಯು ಅನಂತವಾದ ವೇದದಲ್ಲಿ ಯಾವಮಂತ್ರವನ್ನು ತಪಃಪ್ರಭಾವದಿಂದ ಪ್ರಥಮತಃ ನೋಡಿ ಪ್ರವಚನಕ್ಕೆ ತಂದನೋ ಅವನೇ ಆ ಮಂತ್ರಕ್ಕೆ ಋಷಿಯು.

ಶ್ರುತಿಃ॥ ಛಂದೋಭಿರೇವಾತ್ಮಾನಂಛಾದಯಿತ್ವೋಪಾಯಂದಚ್ಛಂದಸಾಂಛಂದತ್ವಂ ॥

ತಾತ್ಪರ್ಯ॥ ಮಂತ್ರಗಳು ತಮ್ಮಗಳನ್ನು ಯಾವುಗಳಿಂದ ಆಚ್ಛಾದನಮಾಡಿಕೊಳ್ಳುವುವೋ ಅವುಗಳೇ ಛಂದಸ್ಸುಗಳು.

ಶೌನಕಃ॥ ಯೋರ್ಥಉಚ್ಯತೇಸಾದೇವತಾ ॥

ತಾತ್ಪರ್ಯ॥ ಮಂತ್ರಪ್ರತಿಪಾದ್ಯಾರ್ಥವೇ ದೇವತೆಯು.

ಅದರಲ್ಲಿ, ಅನ್ಯತ್ಮಹಾಪಾತಕೇಭ್ಯಃ, ಇತಿಪ್ರಕೃತ್ಯ, ಅಪ್ರೋವಾಚಾಮೇತ್.

ತಾತ್ಪರ್ಯ॥ ಮಹಾಪಾತಕಗಳನ್ನು ವಿನಾ ಅಲ್ಪವಾದ ಪಾಪಗಳು ಆಚಮನದಿಂದಲೇ ಪರಿಹಾರವಾಗುವವು. ಎಂದು ಹೇಳಲ್ಪಟ್ಟ ಆಚಮನಾದಿಮಂತ್ರಗಳ ಮಧ್ಯದಲ್ಲಿ ಅಧ್ಯಯನ ಕ್ರಮದಲ್ಲಿ ಪ್ರಾತಸ್ಸಂಧ್ಯಾ ಮಂತ್ರಗಳಿಗಿಂತಲೂ ಮೊದಲು ಸಾಯಂ ಸಂಧ್ಯಾಮಂತ್ರಗಳೇ ಹೇಳಲ್ಪಟ್ಟಿರುವುದರಿಂದಲೂ

ಯೋಗಿಯಾಜ್ಞ್ಯವಲ್ಕ್ಯಃ॥ ಜಪನ್ನಾಸೀತಸಾವಿತ್ರೀಂಪ್ರತ್ಯಗಾತಾರಕೋದಯಾತ್ ॥ ಪ್ರಾತಸ್ಸಂಧ್ಯಾಂಸನಕ್ಷತ್ರಾಂತಿಷ್ಠನ್ನಾಸೂರ್ಯದರ್ಶನಾತ್ ॥

ಎಂಬದಾಗಿ ಪ್ರಥಮತ ಸ್ಸಾಯಂಸಂಧ್ಯೆಯನ್ನು ಹೇಳಿ ಅನಂತರ ಪ್ರಾ
ತಸ್ಸಂಧ್ಯೆಯು ಹೇಳಲ್ಪಟ್ಟಿರುವದರಿಂದಲೂ, ಪ್ರಥಮತ ಸ್ಸಾಯಂ ಸಂ
ಧ್ಯಾಮಂತ್ರಗಳೇ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿರುವವು.

## ಪ್ರಾತಸ್ಸಂಧ್ಯಾವಂದನ ಪ್ರಯೋಗಃ.

ಅವತಾರಿಕಾ॥ ಪ್ರಥಮತಃ ಸಾಯಂ ಸಂಧ್ಯಾಮಂತ್ರಗಳನ್ನ ವಿವರಿಸು
ವದು ಅವಶ್ಯಕವಾಗಿದ್ದಾಗ್ಯೂ ಸೌಕರ್ಯಾರ್ಥವಾಗಿ ಪ್ರಯೋಗಾನುಸಾರ
ವಾಗಿಯೇ ಇಲ್ಲಿ ಅರ್ಥಗಳು ವಿವರಿಸಲ್ಪಡುವವು.

ದ್ವಿರಾಚಮ್ಯ, ಪ್ರಾಣಾನಾಯಮ್ಯ. (ಪ್ರಾಣಾಯಾಮವಿಧಿಯೂ, ಪ್ರ
ಯೋಗವೂ ಜಪಪ್ರಕರಣದಲ್ಲಿ ಬರೆಯಲ್ಪಡುವುದು)

ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಪ್ರಾತಸ್ಸಂಧ್ಯಾಮು
ಪಾಸಿಷ್ಯೇ॥

ಎಂದು ಸಂಕಲ್ಪ ಮಾಡಿ,

ಶ್ಲೋ॥ ಸ್ವಶೇಷಭೂತೇನಮಯಾಸ್ವೀಯೈಸ್ಸರ್ವಪರಿಚ್ಛದೈಃ ।
ವಿಧಾತುಂಪ್ರೀತಮಾತ್ಮಾನಂದೇವಃಪ್ರಕ್ರಮತೇಸ್ವಯಂ ॥

ಎಂದು * ಸಾತ್ವಿಕ ತ್ಯಾಗವಂ ಮಾಡಿ, ಪ್ರಥಮತಃ ಪುಂಡ್ರವಂ ಧರಿಸ
ದೇ ಇದ್ದಲ್ಲಿ ಬಲಗೈಯಿನ ಅನಾಮಿಕಾ ಬೆರಳಿಂದ ಸಂಪ್ರದಾಯಾನುಸಾರ
ವಾಗಿ ಉದಕದಲ್ಲಿ ನೃಸಿಂಹಬೀಜವನ್ನು ಬರೆದು ಆ ತೀರ್ಥದಿಂದ
ಊರ್ಧ್ವಪುಂಡ್ರವಂ ಧರಿಸಿ.

ಆಪೋಹಿಷ್ಠೇತಿಮಂತ್ರಸ್ಯ, ಸಿಂಧುದ್ವೀಪಋಷಿಃ, ದೇವೀಗಾಯ
ತ್ರೀಚ್ಛಂದಃ, ಆಪೋದೇವತಾ.

ಎಂದು, ಶಿರೋ, ಜಿಹ್ವಾ (ನಾಲಿಗೆ) ಹೃದಯಸ್ಥಾನಗಳನ್ನು ಅಂಗು
ಷ್ಠವಿನಹಾ ಇತರ ಬೆರಳುಗಳಿಂದ ಸ್ಪರ್ಶಮಾಡಿ (ಸರ್ವತ್ರ ಹೀಗೆಯೇ
ತಿಳಿಯತಕ್ಕದ್ದು)

---

* ವರ್ಣಾಶ್ರಮವಿಹಿತವಾದ ಕರ್ಮಗಳನ್ನು, ಕರ್ಮಗಳಲ್ಲಿ ಕರ್ತೃತ್ವಾಭಿಮಾ
ನವನ್ನೂ, ಫಲಾಕಾಂಕ್ಷೆಯನ್ನೂ ಬಿಟ್ಟು, ಭಗವದಾರಾಧನವೆಂಬದಾಗಿ ಅನುಷ್ಠಿ
ಸುವದೇ ಸತ್ವಮೂಲವಾದ ತ್ಯಾಗವಾದ ಪ್ರಯುಕ್ತ ಸಾತ್ವಿಕತ್ಯಾಗವೆನಿಸುವುದು.

ಆಪೋಂಪ್ರೋಕ್ಷಣೇವಿನಿಯೋಗಃ ||

ಎಂದು ಉಚ್ಚರಿಸಿ, ಎಡಗೈಯಿಂದ ಉದಕವಂ ಸ್ಪರ್ಶಮಾಡಿಕೊಂಡು ಬ್ರಹ್ಮತೀರ್ಥದಿಂದ ತೀರ್ಥವಂ ತೆಗೆದುಕೊಂಡು, (ಬ್ರಹ್ಮತೀರ್ಥಾದಿ ತೀರ್ಥಲಕ್ಷಣಗಳು ಆಚಮನ ಪ್ರಕರಣದಲ್ಲಿ ಬರೆಯಲ್ಪಟ್ಟಿರುವವು.) ಊರ್ಧ್ವಮುಖವಾದ ದೇವತೀರ್ಥದಿಂದ (ಬಲಗೈ ಬೆರಳುಗಳ ತುದಿಯಿಂದ) ಪ್ರಣವದಿಂದ (ಓಂ) ಪ್ರಥಮತಃ, ಅನಂತರ ವ್ಯಾಹೃತಿಗಳಿಂದ (ಭೂರ್ಭುವಸ್ಸುವಃ) ಅನಂತರ ಗಾಯತ್ರಿಯಿಂದಲೂ, (ತತ್ಸವಿತುರ್ವರೇಣ್ಯಂಭರ್ಗೋದೇವಸ್ಯಧೀಮಹಿ ಧಿಯೋಯೋನಃಪ್ರಚೋದಯಾತ್) ಪ್ರೋಕ್ಷಿಸಿಕೊಂಡು,

ಮಂ|| ಓಂ, ಆಪೋಹಿಷ್ಠಾಮಯೋಭುವಃ,

ಓಂ, ತಾನಊರ್ಜೇದಧಾತನ,

ಓಂ, ಮಹೇರಣಾಯಚಕ್ಷಸೇ,

ಓಂ, ಯೋವಶ್ಶಿವತಮೋರಸಃ,

ಓಂ, ತಸ್ಯಭಾಜಯತೇಹನಃ,

ಓಂ, ಉಶತೀರಿವಮಾತರಃ,

ಓಂ, ತಸ್ಮಾಅರಂಗಮಾಮವಃ,

ಇತಿ ಪ್ರತ್ಯೇಕಂಶಿರಸಿಪ್ರೋಕ್ಷ್ಯ,

ಓಂ, ಯಸ್ಯಕ್ಷಯಾಯಜಿನ್ವಥ,

ಇತಿ ಪಾದದ್ವಯೋಃ ಸಂಪ್ರೋಕ್ಷ್ಯ,

ಓಂ, ಆಪೋಜನಯಥಾಚನಃ,

ಇತಿ ಪುನಃಶಿರಸಿಪ್ರೋಕ್ಷ್ಯ,

ಓಂ, ಭೂರ್ಭುವಸ್ಸುವಃ,

ಇತಿ ಆತ್ಮಾನಂಪರಿಷಿಚ್ಯ, (ತನ್ನನ್ನ ಸುತ್ತಲೂ ಉದಕದಿಂದ ಸೇಚ
ಮಾಡಿಕೊಳ್ಳುವುದು.)

ಪದಚ್ಛೇದವು— ಆಪಃ, ಹಿ, ಸ್ಥ, ಮಯೋಭುವಃ, ತಾಃ, ನಃ, ಊ
ರ್ಜೇ, ದಧಾತನ, ಮಹೇ, ರಣಾಯ, ಚಕ್ಷಸೇ, ಯಃ, ವಃ, ಶಿವತಮ
ರಸಃ, ತಸ್ಯ, ಭಾಜಯತ, ಇಹ, ನಃ, ಉಶತೀಃ, ಇವ, ಮಾತರ
ತಸ್ಮೈ, ಅರಂ, ಗಮಾಮ, ವಃ, ಯಸ್ಯ, ಕ್ಷಯಾಯ, ಜಿನ್ವಥ, ಆಪ
ಜನಯಥ, ಚ, ನಃ.

ಅರ್ಥ|| (ಹೇ) ಆಪಃ (ಓ) ಉದಕಗಳೇ, (ಯೂಯಂ—ನೀವುಗಳ
ಮಯೋಭುವಃ-ಸಕಲ ಪ್ರಾಣಿಗಳಿಗೂ ಸುಖಸ್ಥಾನಗಳಾದವರಾಗಿ, ಸ್ಥ
ಹಿ-ಇರುವಿರಲ್ಲವೇ, ತಾಃ-ಅಂತಹ ನೀವುಗಳು, ಮಹೇ-ಮಹತ್ತಾದ, ರಣಾ
ಯ-ರಮಣೀಯವಾದ, ಚಕ್ಷಸೇ-ಇಂದ್ರಿಯಗಳಿಗೋಸ್ಕರ, (ಇಂದ್ರಿಯ
ಪ್ರಕಾಶಸಿದ್ಧ್ಯರ್ಥವಾಗಿ, ನಃ-ನಮಗೆ, ಊರ್ಜೇ-ಅನ್ನವನ್ನ, ದಧಾ
ತನ-ಕೊಡಿರಿ, ಇಲ್ಲಿ ಅನ್ನಶಬ್ದಕ್ಕೆ ಇಂದ್ರಿಯ ಪೋಷಕಗಳಾದ ವಿಷಯ
ಗಳಲ್ಲಿ ತಾತ್ಪರ್ಯವು) ವಃ-ನಿಮ್ಮಗಳಿಗೆ, ಯಃ-ಯಾವ, ಶಿವತಮಃ-ಪುಣ್ಯ
ತಮವಾದ, ರಸಃ-ರಸವೋ, (ಸುಖರೂಪನಾದ ಪರಮಾತ್ಮನೋ) ತಸ್ಯ
ಆ ಪರಮಾತ್ಮನನ್ನ, ನಃ-ನಮ್ಮನ್ನ; ಇಹ, ಈ ಜನ್ಮದಲ್ಲಿಯೇ, ಉಶ
ತೀಃ-ಸ್ನೇಹಯುಕ್ತರಾದ, ಮಾತರಇವ-ತಾಯಿಗಳೋಪಾದಿಯಲ್ಲಿ, ಭಾಜ
ಯತ-ಹೊಂದಿಸಿರಿ, (ಯೂಯಂ-ಯಾವನೀವು) ಯಸ್ಯ-ಯಾವಪರಬ್ರ
ಹ್ಮನ, ಕ್ಷಯಾಯ-ವಾಸಕ್ಕೋಸ್ಕರ, ಜಿನ್ವಥ-ಸಂತುಷ್ಟರಾಗುವಿರೋ
ತಸ್ಮೈ-ಆ ಪರಮಾತ್ಮನಿಗೋಸ್ಕರ, ವಃ-ನಿಮ್ಮನ್ನ, ಅರಂ-ವಿಶೇಷವಾಗಿ
ಗಮಾಮ-ಹೊಂದುವೆವು, ಹೇಆಪಃ-ಓಉದಕಗಳೇ, ನಃ-ನಮ್ಮನ್ನ, ಜ

ಯೆಥಾಚೆ ಸತ್ತಿಯುಳ್ಳವರನ್ನಾಗಿ ಮಾಡಿರಿ, (ಬ್ರಹ್ಮಸಾಕ್ಷಾತ್ಕಾರ ಯೋ
ಗ್ಯರನ್ನಾಗಿ ಮಾಡಿರಿ)

ತಾತ್ಪರ್ಯ॥ ಎಲೈ ಉದಕಗಳೇ ನೀವುಗಳು ಯಾವ ನಾರಾಯಣನ
ಾಸಕ್ಕೋಸ್ಕರ ಸಂತುಷ್ಟರಾಗುವಿರೋ, ಅಂತಹ ನಾರಾಯಣನ ಕೈಂಕ
ರ್ಯಪ್ರಾಪ್ತಿ ಹೇತುವಾದ ನಿಮ್ಮಗಳ ಅನುಗ್ರಹವನ್ನ ಅಪೇಕ್ಷಿಸುವರಾಗಿ
ನಿಮ್ಮನ್ನ ಭಜಿಸುವೆವು.

ಆದ್ದರಿಂದ ಸ್ನಾನ, ಪಾನ, ಪ್ರೋಕ್ಷಣ, ಲಕ್ಷಣವಾದ ನಿಮ್ಮ ಸಂಸರ್ಗ
ದಿಂದ ನಷ್ಟವಾದ ಸಮಸ್ತ ಪಾಪವುಳ್ಳ, ನಿಮ್ಮ ಅನುಗ್ರಹದಿಂದ ಅಭಿವೃ
ದ್ಧಿವಾದ ಭಗವದ್ಭಕ್ತಿರಸವುಳ್ಳ ನಮ್ಮಗಳಿಂದ, ಪ್ರಾರ್ಥಿಸಲ್ಪಡುವ ಭಗ
ವತ್ಪ್ರಾಪ್ತಿರೂಪವಾದ ಪರಮ ಪುರುಷಾರ್ಥವನ್ನ ನಮ್ಮಗಳಿಗೆ ನೀವೇ
ಸಂಪಾದಿಸಿಕೊಡಿರಿ.

ತಾಯಿಯು ಸ್ನೇಹದಿಂದ ಪುತ್ರರಿಗೆ ಸ್ತನ್ಯರೂಪವಾದ ರಸವನ್ನ ಕೊ
ಡುವಂತೆ ನೀವುಗಳು ಭಗವಂತನಲ್ಲಿ ನಿಮ್ಮಗಳಿಗಿರುವ ಪ್ರೇಮದಲ್ಲಿ ಏಕ
ದೇಶವನ್ನು ನಮಗೆ ಕೊಟ್ಟು ಭಗವತ್ಸ್ವೀಕಾರ ಯೋಗ್ಯರನ್ನಾಗಿ ಮಾ
ಡಿರಿ. (ಭಗವದನುಭವಕ್ಕೆ ಉಪಯೋಗವಾದ ಐಹಿಕ ಸಮೃದ್ಧಿಯನ್ನೂ
ಬ್ರಹ್ಮಾನುಭವವನ್ನೂ ಉಂಟುಮಾಡಿರಿ) ಎಂದು ಪರಮ ತಾತ್ಪರ್ಯವು.

ಶ್ಲೋ॥ ಸೂರ್ಯಶ್ಚೇತ್ಯನುವಾಕಸ್ಯ, ಅಗ್ನಿಋಷಿಃ, ದೇವೀಗಾಯತ್ರೀ
ಚ್ಛಂದಃ, ಸೂರ್ಯೋದೇವತಾ, ಅಪಾಂಪ್ರಾಶನೇವಿನಿಯೋಗಃ॥

ಎಂದು ಹಸ್ತದಲ್ಲಿ ಆಚಮನಕ್ಕೋಪಾದಿಯಲ್ಲಿ ಉದಕವನ್ನು ತೆಗೆದು
ಕೊಂಡು.

ಮೂ॥ ಸೂರ್ಯಶ್ಚಮಾಮನ್ಯುಶ್ಚಮನ್ಯುಪತಯಶ್ಚಮನ್ಯುಕೃತೇ

ಭ್ಯಃ, ಪಾಪೇಭ್ಯೋರಕ್ಷಂತಾಂ, ಯದ್ರಾತ್ರಿಯಾಪಾಪಮ

ಕಾರ್ಷಂ, ಮನಸಾವಾಚಾಹಸ್ತಾಭ್ಯಾಂ, ಪದ್ಭ್ಯಾಮು

ದರೇಣಶಿಶ್ನಾ, ರಾತ್ರಿಸ್ತದವಲುಂಪತು, ಯತ್ಕಿಂಚದುರಿತಂ

ಮಯಿ, ಇದಮಹಂಮಾಮಮೃತಯೋನೌಸೂರ್ಯೇಜ್ಯೋ

ತಿಷಿಜುಹೋಮಿಸ್ವಾಹಾ॥

ಎಂಬ ಈ ಅನುವಾಕದಿಂದ ಉದಕಪ್ರಾಶನ ಮಾಡುವುದು.

ಪದಚ್ಛೇದಃ॥ ಸೂರ್ಯಃ, ಚ, ಮಾ, ಮನ್ಯುಃ, ಚ, ಮನ್ಯುಪತಯ
ಚ, ಮನ್ಯುಕೃತೇಭ್ಯಃ, ಪಾಪೇಭ್ಯಃ, ರಕ್ಷಂತಾಂ, ಯತ್, ರಾತ್ರಿಯ
ಪಾಪಂ, ಅಕಾರ್ಷಂ, ಮನಸಾ, ವಾಚಾ, ಹಸ್ತಾಭ್ಯಾಂ, ಪದ್ಭ್ಯಾಂ,
ದರೇಣ, ಶಿಶ್ನಾ, ರಾತ್ರಿಃ, ತತ್, ಅವಲುಂಪತು, ಯತ್, ಕಿಂಚ, ದುರಿತ
ಮಯಿ, ಇದಂ, ಅಹಂ, ಮಾಂ, ಅಮೃತಯೋನೌ, ಸೂರ್ಯೇ, ಜ್ಯೋತಿ
ಜುಹೋಮಿ, ಸ್ವಾಹಾ.

ಅರ್ಥ॥ ಸೂರ್ಯಶ್ಚ-ಪರಮಾತ್ಮನೂ, (ಸು-ಚೆನ್ನಾಗಿ, ಈರಯ
ಪ್ರೇರಿಸುವನು, ಎಂದು ನಿರುಪಾಧಿಕ ಪ್ರೇರಕನಾದ ಪರಮಾತ್ಮನೂ)
ನ್ಯುಶ್ಚ-ಕೋಪವೂ, ಮನ್ಯುಪತಯಶ್ಚ-ಕೋಪೋತ್ಪಾದಕಗಳಾದ
ಗಾದಿಗಳೂ, ಮಾ-ನನ್ನನ್ನ, ಮನ್ಯುಕೃತೇಭ್ಯಃ-ಕೋಪಾದಿಗಳಿಂದ ಮ
ಡಲ್ಪಟ್ಟ, (ಉಂಟಾದ) ಪಾಪೇಭ್ಯಃ-ಪಾಪಗಳ ದೆಸೆಯಿಂದ, ರಕ್ಷಂತಾ
ರಕ್ಷಿಸಲಿ, (ಸರ್ವೇಶ್ವರನಾದ ಪುರುಷೋತ್ತಮನೇ ಕೋಪವೇ ಮೊದ
ದವುಗಳನ್ನು ನಿವೃತ್ತಿಮಾಡಿ ನನ್ನನ್ನ ಪಾಪಸಮೂಹಗಳ ದೆಸೆಯಿಂ
ಮುಕ್ತರನ್ನಾಗಿ ಮಾಡಲಿ ಇದರಿಂದ ಉತ್ತರ ಪಾಪಾಶ್ಲೇಷವು ಹೇ
ಟ್ಟದ್ದಾಯಿತು) ರಾತ್ರ್ಯಾ-ರಾತ್ರಿಯಲ್ಲಿ, ಮನಸಾ-ಮನಸ್ಸಿಂದಲೂ,
ಚಾ-ವಾಕ್ಕಿನಿಂದಲೂ, ಹಸ್ತಾಭ್ಯಾಂ-ಕೈಗಳಿಂದಲೂ, ಪದ್ಭ್ಯಾಂ-ಪ
ಗಳಿಂದಲೂ, ಉದರೇಣ-ಉದರದಿಂದಲೂ, ಶಿಶ್ನಾ-ಗುಹ್ಯದಿಂದಲೂ,
ತ್-ಯಾವ, ಪಾಪಂ-ಪಾಪವನ್ನು, ಅಕಾರ್ಷಂ-ಮಾಡಿದೆನೋ, ತತ್-
ಪಾಪವನ್ನು, ರಾತ್ರಿಃ-ಪರಮಾತ್ಮನು. (ರಾ-ಆದಾನೆ, ತ್ರೈಜ್ ಪಾಲನ
ಎಂದು ಜಗತ್ಸಂಹರ್ತನಾಗಿಯೂ, ಜಗದ್ರಕ್ಷಕನಾಗಿಯೂ ಚತುರ್ವಿ
ಪುರುಷಾರ್ಥದಾತೃವಾಗಿಯೂ, ನಿರುಪಾಧಿಕ ರಕ್ಷಕನಾಗಿಯೂ ಇರ
ಪರಮಾತ್ಮನು) ಅವಲುಂಪತು-ನಾಶಮಾಡಲಿ, ಯತ್ಕಿಂಚ-ಇನ್ನೂ ಇ
ವಾದ, ದುರಿತಂ-ಪ್ರಾರಬ್ಧರೂಪವಾದ ಪಾಪವು, ಮಯಿ-ನನ್ನಲ್ಲಿ,
ದೆಯೋ ಅದನ್ನೂ ನಾಶಮಾಡಲಿ, ಇದಂ ಅಹಂ-ಅನನ್ಯಗತಿಕನಾಗಿರು

[illegible]ಯೂ ಇರುವ ನಾನು, ಅಮೃತಯೋನೌ-ಮೋಕ್ಷಕ್ಕೆ ಕಾರಣ[illegible]ಷಿ-ನಿರುಪಾಧಿಕ ತೇಜಸ್ಸನ್ನುಳ್ಳ, ಸೂರ್ಯೆ-ನಿಯಂತೃವಾದ [illegible]ನಲ್ಲಿ, ಸ್ವಾಹಾ-ಸ್ವಾಹಾ ಎಂದು, ಮಾಂ-ನನ್ನನ್ನು, ಜುಹೋಮಿ-ಸಮರ್ಪಣೆ ಮಾಡುವೆನು.

ತಾ[illegible]ಸೂರ್ಯಶಬ್ದವಾಚ್ಯನಾದ ಪರಮಾತ್ಮನೂ, ಕೋಪೋತ್ಪಾದಕಕರ್[illegible]ಗಾದಿಗಳೂ ಸಹ ನನ್ನಿಂದ ಕ್ರೋಧಾವೇಶದ್ದೆಸೆಯಿಂದ ರಾತ್ರಿಯಲ್ಲಿ [illegible]ಲ್ಪಟ್ಟ ಅಭಕ್ಷ್ಯಭಕ್ಷಣ, ಅಭೋಜ್ಯಭೋಜನ, ಅಪೇಯಪಾನ, [illegible]ಯಾಜನ, ಅಸತ್ಪ್ರತಿಗ್ರಹಣ, ಪರದಾರಾಭಿಮರ್ಶನ, ಪರ[illegible]ರಣ, ಪ್ರಾಣಿಹಿಂಸನವೇ ಮೊದಲಾದ ಕಾಯಿಕ (ಶರೀರದಿಂ ಮಾಡಲ್[illegible]) ಪಾಪಗಳನ್ನೂ, ವಾಕ್ಪಾರುಷ್ಯ, ಅನೃತ, ದುರ್ವಿವಾದ, ಶ್ರು[illegible] ವಿಕ್ರಯವೇ ಮೊದಲಾದ ವಾಚಿಕ ಪಾಪಗಳನ್ನೂ, ಪರಾಭಿಮಾ[illegible]ಧ, ಲೋಭ, ಮೋಹ, ಅಹಂಕಾರವೇ ಮೊದಲಾದ ಮಾನಸಿಕ [illegible]ನ್ನೂ ಮತ್ತೂ ಜನ್ಮಾಂತರದಲ್ಲಿ ಮಾಡಲ್ಪಟ್ಟದ್ದಾಗಿಯೂ, ಈ ಜನ್[illegible]ಯೇ ಬಾಲ್ಯಾವಸ್ಥೆಯಲ್ಲಿ ಮಾಡಲ್ಪಟ್ಟದ್ದಾಗಿಯೂ ತಿಳುವಳಿಕೆಯಿಲ್ಲ[illegible]ದಿಂದ ಮಾಡಲ್ಪಟ್ಟದ್ದಾಗಿಯೂ ಇರುವ ಸರ್ವವಿಧ ಪಾಪಗಳ[illegible] ನಾಶಮಾಡಲಿ.

ಹೀಗೆ ಸಕಲ ಪಾಪ[illegible]ಬಿಡಲ್ಪಟ್ಟ ನನ್ನನ್ನು, ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವ ನಿತ್ಯ[illegible]ಮಿತ್ತಿಕಾದಿ ಕರ್ಮಾನುಷ್ಠಾನ ದ್ವಾರಾ ಭಗವಂತನನ್ನು ಆರಾಧಿಸಬೇಕೆಂಬುಯುಳ್ಳ ನಾನು, ಮೋಕ್ಷಪ್ರದನಾಗಿಯೂ, [illegible] ಶಬ್ದವಾಚ್ಯನಾಗಿಯೂ, "ನಾರಾಯಣಪರೋಜ್ಯೋತಿಃ" ಎಂಬ [illegible]ಗಿ ಪ್ರಸಿದ್ಧನಾದ ಪರಮಾತ್ಮನಲ್ಲಿ ಸಮರ್ಪಿಸುವೆನು, (ಸ್ವಾಹಾ) ನಿನ್ನ ಸ್ವತ್ತನ್ನ ನೀನು ಸ್ವೀಕರಿಸು.

ಆದರೆ ಸರ್ವವೂ ಭಗವಂತನ ಸ್ವತ್ತಾಗಿಯೇ ಇರುವಲ್ಲಿ, ಅಂತಹ [illegible]ನವನ್ನವನು ಪ್ರಾಗ ಸಮರ್ಪಣ ಮಾತಬಹುದು. ಅವನ ಸ್ವತ್ತ[illegible] ಅವನಿಗೆ ಸಮರ್ಪಿಸುವದು ದಾನವಾಗುವದೇ ಎಂದರೆ.

[illegible]

[illegible]ಗಿರುವದು.

ಜಗತ್ಕಾರಣಭೂತನಾಗಿಯೂ, ಮೋಕ್ಷಪ್ರದನಾಗಿಯೂ ಇರುವ ಪರಮಾತ್ಮನಲ್ಲಿ ಈ ಜೀವಾತ್ಮನನ್ನ ಸಮರ್ಪಣ ಮಾಡಿದ್ದಾದರೆ ಆ ಪರಬ್ರಹ್ಮನು ಸಕಲ ಪ್ರತಿಬಂಧಕ ನಿವೃತ್ತಿ ಪೂರ್ವಕವಾಗಿ ಬ್ರಹ್ಮಾನುಭವವಂ ಕೊಡುವನೆಂದು ಪರಮ ತಾತ್ಪರ್ಯವು.

ಆಚಮ್ಯ॥ ದಧಿಕ್ರಾವ್ಣ್ಣ ಇತಿಮಂತ್ರಸ್ಯ, ವಾಮದೇವ ಋಷಿಃ, ಅನುಷ್ಟುಪ್‌ಛಂದಃ, ದಧಿಕ್ರಾವಾದೇವತಾ, ಅಪಾಂ ಪ್ರೋಕ್ಷಣೇವಿನಿಯೋಗಃ.

ಮಂ॥ ದಧಿಕ್ರಾವ್ಣ್ಣೋಅಕಾರಿಷಂ, ಜಿಷ್ಣೋರಶ್ವಸ್ಯ ವಾಜಿನಃ, ಸುರಭಿನೋಮುಖಾಕರತ್, ಪ್ರಣಆಯೂಗ್ಂಷಿತಾರಿಷತ್, ಆಪೋಹಿಷ್ಠಾಮಯೋಭುವಃ, ತಾನಊರ್ಜೇದಧಾತನ, ಮಹೇರಣಾಯಚಕ್ಷಸೇ, ಯೋವಶ್ಶಿವತಮೋರಸಃ, ತಸ್ಯಭಾಜಯತೇಹನಃ, ಉಶತೀರಿವಮಾತರಃ, ತಸ್ಮಾ ಅರಂಗಮಾಮವಃ, (ಇತಿ ಶಿರಸಿಪ್ರೋಕ್ಷ್ಯ) ಯಸ್ಯಕ್ಷಯಾಯಜಿನ್ವಥ, (ಇತಿಪಾದದ್ವಯೇ), ಆಪೋಜನಯಥಾಚನಃ, (ಇತಿಶಿರಸಿಪ್ರೋಕ್ಷ್ಯ,) ಓಂ ಭೂರ್ಭುವಸ್ಸುವಃ, ಇತ್ಯಾತ್ಮಾನಂಪರಿಷಿಚ್ಯ ॥

ಪದಚ್ಛೇದ—ದಧಿಕ್ರಾವ್ಣ್ಣಃ, ಅಕಾರಿಷಂ, ಜಿಷ್ಣೋಃ, ಅಶ್ವಸ್ಯ, ವಾಜಿನಃ, ಸುರಭಿ, ನಃ, ಮುಖಾ, ಕರತ್, ಪ್ರ, ನಃ, ಆಯೂಗ್ಂಷಿ, ತಾರಿಷತ್.

ಅರ್ಥ॥ ಜಿಷ್ಣೋಃ-ದುಷ್ಟನಿಗ್ರಹದಲ್ಲಿ ಜಯಶೀಲನಾಗಿಯೂ, ಅಶ್ವಸ್ಯ-ಅಂತರ್ಬಹಿಃ ಸರ್ವವ್ಯಾಪಕನಾಗಿಯೂ, ವಾಜಿನಃ-ಭಕ್ತರಕ್ಷಣದ

ತ್ವರೆಯುಳ್ಳವನಾಗಿಯೂ ಇರುವ, ದಧಿಕ್ರಾವ್ಣಃ-ಜಗತ್ತನ್ನ ಆಕ್ರಮಿಸುವ ಪರಮಾತ್ಮನನ್ನ, ಅಕಾರಿಷಂ-ಸ್ತೋತ್ರ ಮಾಡುವೆನು, ಸಃ-ಆ ಪರಮಾತ್ಮನು, ನಃ-ನಮ್ಮಗಳ, ಮುಖಾ-ಮುಖಗಳನ್ನೂ, ಅವಯವಗಳನ್ನೂ, ಮನಸ್ಸನ್ನೂ ಸಹ, ಸುರಭಿ-ಪರಿಶುದ್ಧವಾದವುಗಳನ್ನಾಗಿ, ಕರತ್-ಮಾಡುವನು, ನಃ-ನಮ್ಮಗಳಿಗೆ, ಆಯೂಗ್ಂಷಿ-ಆಯುಸ್ಸುಗಳನ್ನು, ಪ್ರತಾರಿಷತ್-ಅಭಿವೃದ್ಧಿ ಮಾಡುವನು.

ಯೋಜನಾರ್ಥಃ॥ ದಧಿಕ್ರಾವ್ಣಃ-ನವನೀತ (ಬೆಣ್ಣೆ) ಚೋರನಾದ, ವಾಜಿನಃ-ವೇಗಶಾಲಿಯಾದ, ಅಶ್ವಸ್ಯ-ಕೇಶಿಯೆಂಬ ಅಶ್ವರೂಪನಾದ ರಾಕ್ಷಸನನ್ನ, ಜಿಷ್ಣೋಃ-ಜಯಿಸಿದ (ಸಂಹರಿಸಿದವನಾದ ಗೋಪೀಜನವಲ್ಲಭನಾದ ಪರಮಾತ್ಮನ ಪಾದಾರವಿಂದದಲ್ಲಿ,) ಅಕಾರಿಷಂ-ಆತ್ಮಸಮರ್ಪಣವನ್ನು ಮಾಡಿದೆನು, ಸುರಭಿನೋಮುಖಾಕರತ್-ಅದುಕಾರಣ ಆ ಪರಮಾತ್ಮನು ನನ್ನ ಅಂಗವನ್ನೂ, ಜೀವಾತ್ಮನನ್ನೂಕೂಡಾ ಪರಿಶುದ್ಧವನ್ನಾಗಿ ಮಾಡುವನು, ಪ್ರಣಆಯೂಗ್ಂಷಿತಾರಿಷತ್-ಹಾಗೆಯೆ, (ಪಶ್ಯೇಮಶರದಶ್ಶತಂ) ಎಂಬಂತೆ ಆಯುಸ್ಸುಗಳನ್ನೂ ಅಭಿವೃದ್ಧಿ ಮಾಡುವನು.

ತಾತ್ಪರ್ಯ। "ಅಂತರ್ಬಹಿಶ್ಚತತ್ಸರ್ವಂವ್ಯಾಪ್ಯನಾರಾಯಣಸ್ಥಿತಃ" ಎಂಬಂತೆ ಸರ್ವವ್ಯಾಪಿಯಾದ, ಭಕ್ತರಕ್ಷಣದಲ್ಲಿ ತ್ವರೆಯುಳ್ಳ ತ್ರಿವಿಕ್ರಮಾವತಾರದಲ್ಲಿ ಜಗತ್ತನ್ನ ಆಕ್ರಮಿಸಿದ ಪರಮಾತ್ಮನನ್ನ ಸ್ತೋತ್ರ ಮಾಡುವೆನು, ಆ ಪರಮಾತ್ಮನು ನಮ್ಮ ದೇಹವನ್ನೂ, ಮನಸ್ಸನ್ನೂ ಸಹಾ ಪರಿಶುದ್ಧ ಮಾಡುತ್ತಾನೆ, ಅಲ್ಲದೆ ಆಯುಸ್ಸನ್ನೂ ಅಭಿವೃದ್ಧಿಮಾಡುತ್ತಾನೆ.

(ಜನ್ಮಾಂತರೀಯ ಕರ್ಮಾನುಸಾರ ಆಯುಸ್ಸಿಲ್ಲದಿದ್ದಾಗ್ಯೂ, ನಿಯತವಾದ ಆಯುಸ್ಸಿನಲ್ಲಿ ವ್ಯಾಧಿಯೇ ಮೊದಲಾದ ಉಪದ್ರವಗಳಿದ್ದಾಗ್ಯೂ ಭಗವಂತನನ್ನ ಸ್ತೋತ್ರಮಾಡಲು ಶಕ್ತಿ ಇಲ್ಲದೇ ಹೋಗುವದಾದ ಪ್ರಯುಕ್ತ, ಭಗವಂತನ ಸ್ತೋತ್ರೋಪಯುಕ್ತವಾಗಿ ಆಯುರಾರೋಗ್ಯಗಳು ಪ್ರಾರ್ಥಿಸಲ್ಪಟ್ಟಿರುವದರಿಂದ ಮುಮುಕ್ಷುತ್ವಕ್ಕೆ ಹಾನಿಯಿಲ್ಲವೆಂದು ಅರಿಯತಕ್ಕದ್ದು.

ಪ್ರಾಣಾನಾಯಮ್ಯ, ಉತ್ಥಾಯ, ಓಂ ಅರ್ಘ್ಯಪ್ರದಾನಮಂತ್ರಸ್ಯ, ವಿಶ್ವಾಮಿತ್ರಋಷಿಃ, ದೇವೀಗಾಯತ್ರೀಛಂದಃ, ಸವಿ

ತಾದೇವತಾ,- ಇತಿನ್ಯಸ್ಯ, ಅರ್ಘ್ಯಪ್ರದಾನೇವಿನಿಯೋಗಃ,
ಇತ್ಯುಕ್ತ್ವಾ, ಸಪ್ರಣವವ್ಯಾಹೃತಿಕಗಾಯತ್ರ್ಯಾ
(ಓಂಭೂರ್ಭುವಸ್ಸುವಃತತ್ಸವಿತುರ್ವರೇಣ್ಯಂಭರ್ಗೋದೇವ
ಸ್ಯಧೀಮಹಿಧಿಯೋಯೋನಃಪ್ರಚೋದಯಾತ್.)

ಸೂರ್ಯಮಂಡಲಾಂತರ್ವರ್ತಿಯಾದ ಭಗವಂತನನ್ನ ಧ್ಯಾನಿಸುವನಾಗಿ ಪಾದಗಳ ಹಿಂಭಾಗವನ್ನ ಸ್ವಲ್ಪ ಮೇಲಕ್ಕೆ ಎತ್ತಿ ತರ್ಜನೀ ಅಂಗುಷ್ಠ ಸಂಯೋಗ ರೂಪವಾದ ರಾಕ್ಷಸಮುದ್ರಾರಹಿತವಾದ ಉದಕಾಂಜಲಿಯನ್ನ ಹುಬ್ಬುಗಳ ಮಧ್ಯ ಪರ್ಯಂತವಾಗಿಯೂ ಎತ್ತಿ ಜಲಮಧ್ಯದಲ್ಲಿ ಅರ್ಘ್ಯ ಪ್ರಕ್ಷೇಪಮಾಡತಕ್ಕದ್ದು, ಹೀಗೆ ಅರ್ಘ್ಯತ್ರಯವನ್ನು ಕೊಡತಕ್ಕದ್ದು ಅರ್ಘ್ಯಪ್ರದಾನಕ್ಕೆ ಪೂರ್ವದಲ್ಲಿಯೇ ಸೂರ್ಯೋದಯ ವಾದದ್ದಾದರೆ ಪ್ರಾಣಾಯಾಮವ್ನು, ಪ್ರಾತಸ್ಸಂಧ್ಯಾ ಕಾಲಾತಿಕ್ರಮ ಪ್ರಾಯಶ್ಚಿತ್ತಾ ರ್ಥಂ ತುರ್ಯಾರ್ಘ್ಯಪ್ರದಾನಂಕರಿಷ್ಯೇ, ಎಂದು ಸಂಕಲ್ಪಮಾಡಿ.

ಓಂ ಭೂರ್ಭುವಸ್ಸುವಃ, ಎಂದು ತನ್ನನ್ನ ಪರಿಷೇಚನಮಾಡಿಕೊಂ ಡು, ಪ್ರದಕ್ಷಿಣವಾಗಿ ತಿರಿಗಿ,

ಅಸಾವಾದಿತ್ಯೋಬ್ರಹ್ಮ.

ಎಂದು ಆದಿತ್ಯಾಂತರ್ವರ್ತಿಯಾದ ನಾರಾಯಣನನ್ನ ಧ್ಯಾನಮಾಡಿ ಆಚಮ್ಯ-ಮಾರ್ಗಶೀರ್ಷಾದಿ ಮಾಸೇಶಾನ್ತರ್ಪಯೇತ್- ತತ್ರ ಮಂತ್ರಃ ಓಂಕೇಶವಂತರ್ಪಯಾಮಿ-ಓಂನಾರಾಯಣಂ ತರ್ಪಯಾಮಿ. ಓಂಮಾಧ ವಂ ತರ್ಪಯಾಮಿ, ಓಂಗೋವಿಂದಂ ತರ್ಪಯಾಮಿ, ಓಂವಿಷ್ಣುಂತರ್ಪ ಯಾಮಿ, ಓಂ ಮಧುಸೂದನಂ ತರ್ಪಯಾಮಿ, ಓಂತ್ರಿವಿಕ್ರಮಂ ತರ್ಪ ಯಾಮಿ. ಓಂ ವಾಮನಂ ತರ್ಪಯಾಮಿ, ಓಂಶ್ರೀಧರಂ ತರ್ಪಯಾಮಿ, ಓಂಹೃಷೀಕೇಶಂ ತರ್ಪಯಾಮಿ, ಓಂಪದ್ಮನಾಭಂ ತರ್ಪಯಾಮಿ. ಓಂ ದಾಮೋದರಂ ತರ್ಪಯಾಮಿ, ಇತಿಸಂತರ್ಪ್ಯ, ಆಚಮ್ಯ.

## ಅಥಜಪ ವಿಧಿಃ.

ಶುಚಿಸ್ಥಲಂಗತ್ವಾ॥ ಪರಿಶುದ್ಧವಾದ ಸ್ಥಳವನ್ನ ಹೊಂದಿ ಓಂ ಭೂ

ರ್ಭುವಸ್ಸ್ವಃ, ಎಂದು ಪ್ರೋಕ್ಷಿಸಿ, ಆ ಸ್ಥಳದಲ್ಲಿ ಪೂರ್ವಾಗ್ರವಾದ ದರ್ಭೆಗಳಲ್ಲಿ ನಿಂತುಕೊಂಡು.

ಆಸನಮಂತ್ರಸ್ಯ, ಪೃಥಿವ್ಯಾ ಮೇರುಃ, ಪೃಷ್ಠ ಋಷಿಃ, ಸುತಲಂ ಛಂದಃ, ಶ್ರೀ ಕೂರ್ಮೋ ದೇವತಾ, ಇತಿನ್ಯಸ್ಯ, ಆಸನೇ ವಿನಿಯೋಗಃ, ಇತ್ಯುಕ್ತ್ವಾ

ಶ್ಲೋ॥ ಪೃಥ್ವಿತ್ವಯಾಧೃತಾಲೋಕಾಃದೇವಿತ್ವಂವಿಷ್ಣುನಾಧೃತಾ ।
ತ್ವಂಚಧಾರಯಮಾಂದೇವಿಪವಿತ್ರಂಕುರುಚಾಸನಂ ॥

ಎಂದು ಭೂಮಿಯನ್ನು ಪ್ರಾರ್ಥಿಸಿ, ತ್ರಿಃಪ್ರಾಣಾನಾಯಮ್ಯ.

## ಪ್ರಾಣಾಯಾಮ ವಿಧಿಃ.

ಸ್ಮೃತಿರತ್ನಾಕರೇ॥ ಮನುಃ॥ ದಹ್ಯಂತೇಧ್ಮಾಯಮಾನಾನಾಂಧಾತೂನಾಂಹಿಯಥಾಮಲಾಃ। ತಥೇಂದ್ರಿಯಾಣಾಂದಹ್ಯಂತೇದೋಷಾಃಪ್ರಾಣಸ್ಯನಿಗ್ರಹಾತ್ ॥

ತಾತ್ಪರ್ಯ॥ ಪುಟಪಾಕಶೋಧನೆಯಿಂದ ಸ್ವರ್ಣಾದಿ ಲೋಹಗಳ ಕಲ್ಮಷಗಳು ಹೇಗೆ ನಾಶ ಹೊಂದುವವೋ, ಹಾಗೆ ಪ್ರಾಣಾಯಾಮದ ದೆಸೆಯಿಂದ ಇಂದ್ರಿಯಗತವಾದ ದೋಷಗಳೆಲ್ಲವೂ ನಾಶ ಹೊಂದುವವು.

ಸಂವರ್ತಃ॥ ಮಾನಸಂವಾಚಿಕಂಪಾಪಂಕಾಯೇನೈವತುಯತ್ಕೃತಂ । ತತ್ಸರ್ವಂನಶ್ಯತೇತೂರ್ಣಂಪ್ರಾಣಾಯಾಮತ್ರಯೇಕೃತೇ ॥

ತಾತ್ಪರ್ಯ॥ ತ್ರಿರಾವೃತ್ತಿ ಪ್ರಾಣಾಯಾಮವು ಮಾಡಲ್ಪಟ್ಟದ್ದಾದರೆ, ಮನೋವಾಕ್ಕಾಯಗಳಿಂದ ಮಾಡಲ್ಪಟ್ಟ ಸಕಲ ಪಾಪಗಳೂ ನಾಶ ಹೊಂದುವವು.

ತ್ರಿವಿಧಮಾನಸಪಾಪವಿವರಣಂ॥ ಪರದ್ರವ್ಯೇಷ್ವಭಿಧ್ಯಾನಂ ಮನಸಾನಿಷ್ಟಚಿಂತನಂ । ವಿತಥಾಭಿನಿವೇಶಶ್ಚ ಮಾನಸಂತ್ರಿವಿಧಂ ಸ್ಮೃತಂ ।

ತಾತ್ಪರ್ಯ॥ ಪರದ್ರವ್ಯಗಳಲ್ಲಿ ಲೋಭವೂ, ಪರರಿಗೆ ಅನಿಷ್ಟಚಿಂತನವೂ, ವ್ಯರ್ಥವಾದ ಆಗ್ರಹವೂ ಮಾನಸಿಕ ಪಾಪಗಳೆನಿಸುವವು.

ಪಾರುಷ್ಯಮನೃತಂಚೈವಪೈಶುನ್ಯಂಪಿಸರ್ವಶಃ । ಅನಿಬದ್ಧಪ್ರಲಾಪಶ್ಚವಾಚಿಕಂಸ್ಯಾಚ್ಚತುರ್ವಿಧಂ ॥

ತಾತ್ಪರ್ಯ॥ ಕ್ರೂರವಾದ ವಾಕ್ಯ, ಅಬದ್ಧವೂ, ಪಿಶುನತ್ವ (ಚಾಡಿ ಹೇಳುವದು) ವೂ, ಅಸಂಬದ್ಧ ಪ್ರಲಾಪವೂ, ಈ ನಾಲ್ಕು ವಾಚಿಕವಾದ ಪಾಪವೆನಿಸುವದು.

ಅದತ್ತಾನಾಮುಪಾದಾನಂಹಿಂಸಾಚೈವಾವಿಧಾನತಃ । ಪರದಾರೋಪಸೇವಾಚಕಾಯಿಕಂತ್ರಿವಿಧಂಸ್ಮೃತಂ ।

ತಾತ್ಪರ್ಯ॥ ಅನುಮತಿ ಇಲ್ಲದೇ ಪರಸ್ವತ್ತನ್ನ ತೆಗೆದುಕೊಳ್ಳುವದು, ಯಜ್ಞಾದಿ ಶಾಸ್ತ್ರೀಯ ವಿಧಾನವನ್ನು ಹೊರತಾಗಿ ಪ್ರಾಣಹಿಂಸೆ ಮಾಡುವುದು, ಪರದಾರ ಗಮನವೂ ಈ ಮೂರು ಕಾಯಿಕವಾದ ಪಾಪವೆನಿಸುವದು. ಈ ತ್ರಿಪ್ರಕಾರವಾದ ಪಾಪಗಳೂ ಪ್ರಾಣಾಯಾಮದಿಂದ ನಾಶ ಹೊಂದುವವು.

ಯೋಗಯಾಜ್ಞವಲ್ಕ್ಯಃ॥ ಏವಂಸಮ್ಮಾರ್ಜನಂಕೃತ್ವಾಬಾಹ್ಯಶುದ್ಧ್ಯರ್ಥಮಾತ್ಮನಃ । ತತೋಽಭ್ಯಂತರಶುದ್ಧ್ಯರ್ಥಂಪ್ರಾಣಾಯಾಮಾನ್ಸಮಾಚರೇತ್ ॥

ತಾತ್ಪರ್ಯ॥ ಹೀಗೆ ಶರೀರಶುದ್ಧ್ಯರ್ಥವಾಗಿ ಶಾಸ್ತ್ರೋಕ್ತ ಪ್ರಕಾರದಿಂದ ಸ್ನಾನಮಾಡಿ ಅಂತರಂಗ ಶುದ್ಧ್ಯರ್ಥವಾಗಿ ಪ್ರಾಣಾಯಾಮಗಳನ್ನು ಮಾಡತಕ್ಕದ್ದು.

ಸವ್ಯಾಹೃತಿಂಸಪ್ರಣವಾಂಗಾಯತ್ರೀಂಶಿರಸಾಸಹ । ತ್ರಿಃಪಠೇದಾಯತಪ್ರಾಣಃಪ್ರಾಣಾಯಾಮಸ್ಸಉಚ್ಯತೇ ॥

ತಾತ್ಪರ್ಯ॥ ಸಪ್ತವ್ಯಾಹೃತಿಯಿಂದಲೂ, ಪ್ರಣವದಿಂದಲೂ ಕೂಡಿರುವ ಸಶಿರಸ್ಕವಾದ ಗಾಯತ್ರಿಯನ್ನು ತ್ರಿರಾವೃತ್ತಿ ಜಪಿಸುವದೇ ಪ್ರಾಣಾಯಾಮವೆಂಬುವುದು, "ಇಲ್ಲಿ ಪಠೇತ್ ಎಂದು ಇದ್ದಾಗ್ಯೂ ಚಂದ್ರಿಕಾ, ಎಂಬ ಗ್ರಂಥದಲ್ಲಿ"

'ಪಠೇದಿತಿವಚನಾದ್ವಾಚಾವಚನೀಯಮಿತಿನಭ್ರಮಿತವ್ಯಂ, ಜಪೇನ್ಮನಸಾ' ಎಂದು ವ್ಯಾಖ್ಯಾನ ಮಾಡಿರುತ್ತಾರೆ.

ಕರ್ಮಪ್ರದೀಪೆ। ದೇವಾರ್ಚನೇ ಜಪೇ ಹೋಮೇ ಸ್ವಾಧ್ಯಾಯೇ ಶ್ರಾ
ದ್ಧಕರ್ಮಣಿ। ಸ್ನಾನೇ ದಾನೇ ತಥಾ ಧ್ಯಾನೇ ಪ್ರಾಣಾಯಾಮಾ
ಸ್ತ್ರಯಸ್ತ್ರಯಃ॥ ಆದಾವಂತೇ ಚ ಗಾಯತ್ರ್ಯಾಃ ಪ್ರಾಣಾಯಾ
ಮಾಸ್ತ್ರಯಸ್ತ್ರಯಃ । ಸಂಧ್ಯಾಯಾಮರ್ಘ್ಯದಾನೇ ಚ ಪ್ರಾ
ಣಾಯಾಮೈಕ ಉಚ್ಯತೇ ॥ ಅಂಗುಷ್ಠಾನಾಮಿಕಾಭ್ಯಾಂ ತು ತ
ಥೈವ ಚ ಕನಿಷ್ಠಯಾ । ಪ್ರಾಣಾಯಾಮಸ್ತು ಕರ್ತವ್ಯೋ ಮಧ್ಯ
ಮಾಂ ತರ್ಜನೀಂ ವಿನಾ ॥ ತರ್ಜನೀಮಧ್ಯಯೋರ್ಯೋಗಂ ಪ್ರಾ
ಣಾಯಾಮೇ ತು ವರ್ಜಯೇತ್ । ತರ್ಜನೀಂ ಮಧ್ಯಮಾಂ ಸ್ಪೃ
ಷ್ಟ್ವಾ ಜಪಃ ಶೂದ್ರಸಮೋ ಭವೇತ್ ॥

ತಾತ್ಪರ್ಯ॥ ದೇವಾರ್ಚನದಲ್ಲಿಯೂ, ಜಪದಲ್ಲಿಯೂ, ಹೋಮದಲ್ಲಿ
ಯೂ, ಉಪಾಕರ್ಮದಲ್ಲಿಯೂ, ಶ್ರಾದ್ಧಕರ್ಮದಲ್ಲಿಯೂ, ಸ್ನಾನದಲ್ಲಿ
ಯೂ, ದಾನದಲ್ಲಿಯೂ, ಧ್ಯಾನದಲ್ಲಿಯೂ, ತ್ರಿರಾವೃತ್ತಿ ಪ್ರಾಣಾಯಾಮ
ವು ಮಾಡತಕ್ಕದ್ದು. ಗಾಯತ್ರಿಯ ಆದ್ಯಂತಗಳಲ್ಲಿ ತ್ರಿಃಪ್ರಾಣಾಯಾಮ
ವು ಕರ್ತವ್ಯವು. ಸಂಧ್ಯಾವಂದನದಲ್ಲಿಯೂ, ಅರ್ಘ್ಯಪ್ರದಾನದಲ್ಲಿಯೂ,
ಸಕೃತ್ (ಒಂದು) ಪ್ರಾಣಾಯಾಮವು. ಅಂಗುಷ್ಠ, ಅನಾಮಿಕಾ, ಕನಿ
ಷ್ಠಿಕಾ, ಬೆರಳುಗಳಿಂದ ಪ್ರಾಣಾಯಾಮವು ಮಾಡತಕ್ಕದ್ದು. ಮಧ್ಯ
ಮಾ, ತರ್ಜನೀ, ಬೆರಳುಗಳನ್ನು ಪ್ರಾಣಾಯಾಮದಲ್ಲಿ ಉಪಯೋಗಿಸ
ಕೂಡದು. ತರ್ಜನೀ, ಮಧ್ಯಮಾ, ಬೆರಳುಗಳಿಂದ ಕೂಡಿ ಪ್ರಾಣಾಯಾ
ಮ ಮಾಡುವವನು ಶೂದ್ರಸಮನಾಗುವನು (ಅಪರಿಶುದ್ಧನಾಗುವನು).

ಆಂಗಿರಾದರ್ಶೇ ॥ ಪ್ರಾತಸ್ತಿಷ್ಠನ್ ಪ್ರಾಣಾಯಾಮೇನ ಶುಧ್ಯತಿ ।
ಸಾಯಮಾಸೀನಃ ಪ್ರಾಣಾಯಾಮೇನ ಶುದ್ಧ್ಯತಿ ॥

ತಾತ್ಪರ್ಯ॥ ಪ್ರಾತಃಕಾಲದಲ್ಲಿ ನಿಂತುಕೊಂಡು ಪ್ರಾಣಾಯಾಮವು ಮಾಡಿ
ಶುದ್ಧನಾಗುವನು, ಸಾಯಂಕಾಲದಲ್ಲಿ ಕುಳಿತುಕೊಂಡು ಪ್ರಾಣಾಯಾಮ
ಮಾಡಿದರೆ ಶುದ್ಧನಾಗುವನು.

ನಾರದೀಯೇ ॥ ರೇಚಕಃ ಪೂರಕಶ್ಚೈವ ಕುಂಭಕಃ ಶೂನ್ಯಕಸ್ತಥಾ।
ಏವಂ ಚತುರ್ವಿಧಃ ಪ್ರೋಕ್ತಃ ಪ್ರಾಣಾಯಾಮೋ ಮನೀಷಿಭಿಃ॥

ಅಗರ್ಭಶ್ಚ ಸಗರ್ಭಶ್ಚ ದ್ವಿತೀಯಸ್ತು ತಯೋರ್ವರಃ ।
ಅಪಿಧ್ಯಾನಂವಿನಾಗರ್ಭಃ ಸಗರ್ಭಸ್ತತ್ಸಮನ್ವಿತಃ॥

ತಾತ್ಪರ್ಯ॥ ರೇಚಕ, ಪೂರಕ, ಕುಂಭಕ, ಶೂನ್ಯಕ, ಎಂಬದಾಗಿ ಪ್ರಾಣಾಯಾಮವು ನಾಲ್ಕು ಭೇದವುಳ್ಳದ್ದಾಗಿರುವದು. ಪುನಃ ಅಗರ್ಭ ಪ್ರಾಣಾಯಾಮವೆಂಬದಾಗಿಯೂ, ಸಗರ್ಭ ಪ್ರಾಣಾಯಾಮವೆಂಬದಾಗಿಯೂ, ಎರಡುಪ್ರಕಾರವಾಗಿರುವದು. ಭಗವಂತನನ್ನ ಧ್ಯಾನಿಸದೇ ಮಾಡಲ್ಪಡುವ ಪ್ರಾಣಾಯಾಮವು ಅಗರ್ಭವೆನಿಸುವದು. ಭಗವದ್ಧ್ಯಾನದಿಂದ ಕೂಡಿರುವ ಪ್ರಾಣಾಯಾಮವು ಸಗರ್ಭ ಪ್ರಾಣಾಯಾಮವೆಂಬುವದು, ಇದು ಶ್ರೇಷ್ಠವಾದುದು.

ಶ್ಲೋ॥ ವಾಮೇನರೇಚಯೇದ್ವಾಯುಂರೇಚನಾದ್ರೇಚಕಸ್ಮೃತಃ ।
ಪೂರಯೇದ್ದಕ್ಷಿಣೇನೈವ ಪೂರಣಾತ್ಪೂರಕಸ್ಮೃತಃ ॥
ಸ್ವದೇಹೇಪೂರಿತಂವಾಯುಂನಿಗೃಹ್ಯನವಿಮುಂಚತಿ ।
ಸಂಪೂರ್ಣಕುಂಭವತ್ತಿಷ್ಠೇತ್ ಕುಂಭಕಸ್ಸಹಿವಿಶ್ರುತಃ ॥
ನಗೃಹ್ಣಾತಿನತ್ಯಜತಿವಾಯುಮೇತಂಬಹಿಸ್ಥಿತಂ ।
ಜ್ಞೇಯಂತತ್ ಶೂನ್ಯಕಂನಾಮಪ್ರಾಣಾಯಾಮೋಯಥಾಸ್ಥಿತಂ।
ಯಪ್ಯದ್ರೂಪಂಮಹಾವಿಷ್ಣೋಃತದ್ಧ್ಯಾಯೇತ್ತು ಮಹಾತ್ಮನಃ।
ತೇನಧ್ಯಾನೇನತುಷ್ಟಾತ್ಮಾ ಹರಿರ್ಮೋಕ್ಷಂದದಾತಿವೈ ॥

ತಾತ್ಪರ್ಯ॥ ವಾಮನಾಸಿಕ (ಎಡಮೂಗು) ದಿಂದ ಅಂತಸ್ಥಿತವಾದ ವಾಯುವನ್ನು ಹೊರಡಿಸುವದೇ ರೇಚಕವೆನಿಸುವದು. ದಕ್ಷಿಣ ನಾಸಿಕದಿಂದ ಬಹಿಸ್ಥಿತವಾದ ವಾಯುವನ್ನು ಅಂತಃ ತುಂಬುವದೇ ಪೂರಕವು. ತನ್ನ ದೇಹದಲ್ಲಿ ತುಂಬಲ್ಪಟ್ಟಿರುವ ವಾಯುವನ್ನ ನಿಗ್ರಹಿಸಿ ಹೊರಗೆ ಬಿಡದೇ ಸಂಪೂರ್ಣವಾದ ಕುಂಭದೋಪಾದಿಯಲ್ಲಿರುವದೇ ಕುಂಭಕವು. ವಾತವನ್ನ ಹೊರಕ್ಕೆ ಬಿಡದೆಯೂ, ಬಹಿಸ್ಥಿತವಾದ ವಾಯುವನ್ನು ದೇಹಕ್ಕೆ ತೆಗೆದುಕೊಳ್ಳದೆಯೂ, ಮಾಡಲ್ಪಡುವ ಪ್ರಾಣಾಯಾಮವೇ, ಶೂನ್ಯಕವೆನಿಸುವದು.

ಪ್ರಾಣಾಯಾಮ ಕಾಲದಲ್ಲಿ ಮಹಾವಿಷ್ಣುವಿನ ದಿವ್ಯಮಂಗಳ ವಿಗ್ರಹವನ್ನ ಧ್ಯಾನಮಾಡತಕ್ಕದ್ದು. ಆ ಧ್ಯಾನದಿಂದ ಸಂತುಷ್ಟನಾದ ಪರಮ

ತ್ರನು ಇಹಲೋಕದಲ್ಲಿ ಇಷ್ಟಾರ್ಥವನ್ನ ಕೊಡುವನಲ್ಲದೇ ಮೋಕ್ಷ ಸಾಮ್ರಾಜ್ಯವನ್ನೂ ಕೊಡುವನು.

ಸ್ಮೃತಿರತ್ನಾಕರೇ॥ ಸಪ್ತವ್ಯಾಹೃತಿಸಂಯುಕ್ತಾಂಗಾಯತ್ರೀಂಶಿರಸಾಸಹ। ದಶವಾರಂಜಪಿತ್ವೈವಗಾಯತ್ರೀಂಚತತೋಜಪೇತ್॥

ತಾತ್ಪರ್ಯ॥ ಪ್ರಾಣಾಯಾಮತ್ರಯಾನಂತರ ಸಪ್ತವ್ಯಾಹೃತಿಯಿಂದ ಸಂಯುಕ್ತವಾದ ಗಾಯತ್ರಿಯನ್ನು, ಗಾಯತ್ರೀಶಿರಸ್ಸಿನೊಡನೆ ಕೂಡಾ ದಶವಾರ (ಹತ್ತಾವೃತ್ತಿ) ಜಪಮಾಡಿ ಅನಂತರ ಗಾಯತ್ರಿಯನ್ನ ಆವಾಹನೆ ಮಾಡಿ ಜಪಿಸತಕ್ಕದ್ದು.

ಈ ಜಪಕ್ರಮದಲ್ಲಿ ಸಂಪ್ರದಾಯವು ಎರಡು ಪ್ರಕಾರವಾಗಿರುವದು. ವೈದಿಕ ಸಾರ್ವಭೌಮ ಪಕ್ಷರೀತ್ಯಾ, ಪ್ರಥಮತಃ, ತ್ರಿರಾವೃತ್ತಿ ಪ್ರಾಣಾಯಾಮವೂ, ಅನಂತರ ದಶಪ್ರಾಣಾಯಾಮವೂ, ಅತಃಪರ ಗಾಯತ್ರ್ಯಾವಾಹನ ಪೂರ್ವಕ ಗಾಯತ್ರೀ ಜಪವೂ, ಈಪ್ರಕಾರವೇ ಮೇಲೆ ಉದಹರಿಸಲ್ಪಟ್ಟಿರುವದು.

ಶ್ರೀ॥ ನಿಗಮಾಂತದೇಶಿಕರವರು ಪಾಂಚರಾತ್ರ ರಕ್ಷೆಯಲ್ಲಿ ಉದಹರಿಸಿರುವ ಕ್ರಮವು ಇದಕ್ಕೆ ಭಿನ್ನವಾಗಿರುವದು. ಈ ಪಕ್ಷವನ್ನೇ ಶ್ರೀ॥ ಗೋಪಾಲ ದೇಶಿಕರು ತಮ್ಮ ಆಹ್ನಿಕದಲ್ಲಿ ವಿವರಿಸಿ, ನಿಕ್ಷೇಪ ಚಿಂತಾಮಣಿ ದ್ವಿತಿಯಾಧಿಕಾರದಲ್ಲಿ ಪೂರ್ವಪಕ್ಷ ಸಿದ್ಧಾಂತದ್ವಾರಾ ನಿಷ್ಕರ್ಷೆ ಮಾಡಿದ್ದಾರೆ. ಆಕ್ರಮವನ್ನ ಅನುಸರಿಸಿಯೇ ಮುಂದೆ ಪ್ರಯೋಗವು ಬರಿಯಲ್ಪಡುವದು ಉಪದೇಶಾನುಸಾರ ಅನುಷ್ಠಾನ ಮಾಡತಕ್ಕದ್ದು.

"ಪೃಥ್ವಿತ್ವಯಾಕುರುಚಾಸನಂ" ಎಂದು ಭೂಮಿಯನ್ನ ಪ್ರಾರ್ಥಿಸಿದನಂತರ.

ಮೂ॥ ಪ್ರಣವಸ್ಯಋಷಿರ್ಬ್ರಹ್ಮಾ ದೇವೀಗಾಯತ್ರೀಚ್ಛಂದಃ; ಪರಮಾತ್ಮಾದೇವತಾ, ಭೂರಾದಿಸಪ್ತವ್ಯಾಹೃತೀನಾಂ, ಅತ್ರಿಭೃಗುಕುತ್ಸವಸಿಷ್ಠಗೌತಮಕಾಶ್ಯಪಾಂಗಿರಸಋಷಯಃ, ಗಾಯತ್ರ್ಯುಷ್ಣಿಗನುಷ್ಟುಬ್ಬೃಹತೀಪಙ್ಕ್ತಿತ್ರಿಷ್ಟುಬ್ಜಗತ್ಯಃ ಛಂದಾಂಸಿ, ಅಗ್ನಿವಾಯ್ವರ್ಕವಾಗೀಶವರುಣೇಂದ್ರವಿಶ್ವೇದೇವಾದೇವತಾಃ, ಸಾವಿತ್ರ್ಯಾಋಷಿಃವಿಶ್ವಾಮಿತ್ರಃ, ದೇವೀಗಾಯತ್ರೀ

ಚ್ಛಂದಃ, ಸವಿತಾದೇವತಾ, ಗಾಯತ್ರೀಶಿರಸೋಬ್ರಹ್ಮಾ ಋಷಿಃ, ಅನುಷ್ಟುಪ್‌ಛಂದಃ, ಪರಮಾತ್ಮಾ ದೇವತಾ, ಇತಿನ್ಯಸ್ಯ, ಸರ್ವೇಷಾಂ ಪ್ರಾಣಾಯಾಮೇವಿನಿಯೋಗಃ, ಇತ್ಯುಕ್ತ್ವಾ.

ಓಂಭೂಃ-ಪಾದಯೋಃ, ಓಂಭುವಃ-ಜಂಘಯೋಃ, ಓಗ್‌ಂಸುವಃ-ಜಾನ್ವೋಃ, ಓಂಮಹಃ-ಉದರೇ, ಓಂಜನಃ-ಕಂಠೇ, ಓಂತಪಃ-ಮುಖೇ, ಓಗ್‌ಂಸತ್ಯಂ-ಮಸ್ತಕೇ, ನ್ಯಸೇತ್.

ತಾತ್ಪರ್ಯ| ಓಂಭೂಃ-ಎಂದು ಕಾಲುಗಳಲ್ಲಿಯೂ, ಓಂಭುವಃ-ಎಂದು ಮೊಣಕಾಲುಗಳಲ್ಲಿಯೂ, ಓಗ್‌ಂಸುವಃ-ಎಂದು ಮುಂಡಿಗಳಲ್ಲಿಯೂ, ಓಂಮಹಃ-ಎಂದು ಉದರದಲ್ಲಿಯೂ, ಓಂಜನಃ-ಎಂದು ಕಂಠದಲ್ಲಿಯೂ, ಓಂತಪಃ-ಎಂದು ಮುಖದಲ್ಲಿಯೂ, ಓಗ್‌ಂಸತ್ಯಂ-ಎಂದು ಶಿರಸ್ಸಿನಲ್ಲಿಯೂ ಎರಡುಹಸ್ತಗಳಲ್ಲಿಯೂ, ಸ್ಪರ್ಶಮಾಡುವದು.

## ಸಪ್ತವ್ಯಾಹೃತಿಧ್ಯಾನ ಕ್ರಮಃ.

ಮೂ|| ಶ್ವೇತ, ಶ್ಯಾಮ, ಪೀತ, ಪಿಶಂಗ, ನೀಲ, ಲೋಹಿತ, ಕನಕ, ವರ್ಣೋಜ್ವಲಾಃ । ಕ್ಷೌಮವಸ್ತ್ರಪರೀಧಾನಾ । ಸ್ವರ್ಣಾಭರಣಭೂಷಿತಾಃ। ದಿವ್ಯಚಂದನಲಿಪ್ತಾಂಗಾಃದಿವ್ಯಮಾಲ್ಯೈರಲಂಕೃತಾಃ । ಸಿತೋಪವೀತಹೃದಯಾಃಸಪವಿತ್ರಚತುಷ್ಕರಾಃ । ಉನ್ನಿದ್ರವದನಾಂಭೋಜಪ್ರಭಾಮಂಡಲಮಂಡಿತಾಃ| ಜಟಾಕಲಾಪ ಪೂರ್ಣೇಂದುಪ್ರಭಾ ಪೂರಿತದಿಙ್ಮುಖಾಃ । ಅಭಯಾಕ್ಷಸ್ರಗಪ್ಪಾತ್ರವರಹಸ್ತಸರೋರುಹಾಃ || ಏವಂಹೋಮಜಪಾರಂಭೇಧ್ಯೇಯಾವ್ಯಾಹೃತಯೋದ್ವಿಜೈಃ || ಎಂದು ಈ ಶ್ಲೋಕಗಳಿಂದ ಧ್ಯಾನಿಸಿ.

ಮೂ|| ಓಂ, ತತ್ಸವಿತುಃ, ಜ್ಞಾನಾಯಹೃದಯಾಯನಮಃ,
ಓಂ, ವರೇಣ್ಯಂ, ಐಶ್ವರ್ಯಾಯಶಿರಸೇಸ್ವಾಹಾ,
ಓಂ, ಭರ್ಗೋದೇವಸ್ಯ, ಶಕ್ತ್ಯೈಶಿಖಾಯೈ, ವೌಷಟ್,
ಓಂ, ಧೀಮಹಿಬಲಾಯಕವಚಾಯಹುಂ,
ಓಂ, ಧಿಯೋಯೋನಃ ತೇಜಸೇನೇತ್ರಾಭ್ಯಾಂವೌಷಟ್,

ಓಂ, ಪ್ರಚೋದಯಾತ್-ವೀರ್ಯಾಯ ಅಸ್ತ್ರಾಯಫಟ್,
ಏವಂ ಅಂಗನ್ಯಾಸಂ ಕುರ್ಯಾತ್.

ತಾತ್ಪರ್ಯ ॥ (ಓಂ ತತ್ಸವಿತುಃ) ಎಂದು ಅಂಗುಷ್ಠದಿಂಕೂಡಿದ ತರ್ಜನೀ ಬೆರಳಿನಿಂದ ಹೃದಯದಲ್ಲಿಯೂ, (ಓಂ ವರೇಣ್ಯಂ ಐಶ್ವರ್ಯಾಯ ಶಿರಸೇಸ್ವಾಹಾ) ಎಂದು ಅಂಗುಷ್ಠ ಭಿನ್ನವಾದ ನಾಲ್ಕು ಬೆರಳುಗಳಿಂದ ಶಿರಸ್ಸಿನಲ್ಲಿಯೂ, (ಓಂ ಭರ್ಗೋದೇವಸ್ಯ ಶಕ್ತ್ಯೈ ಶಿಖಾಯೈವಷಟ್) ಎಂದು ಅಧೋಮುಖವಾಗಿ ಮಾಡಲ್ಪಟ್ಟ ಅಂಗುಷ್ಠನಾಳದಿಂದ (ಹೆಬ್ಬೆಟ್ಟಿನಿಂದ) ಶಿಖಾ (ಗಂಟುಹಾಕಲ್ಪಟ್ಟ ಜುಟ್ಟು) ಮಧ್ಯದಲ್ಲಿಯೂ, (ಓಂ ಧೀಮಹಿ ಬಲಾಯ ಕವಚಾಯಹುಂ) ಎಂದು ಕಂಠಾರಭ್ಯ ಕಟಿ (ಸೊಂಟ) ಪರ್ಯಂತ ಶರೀರವನ್ನು ಎರಡು ಕೈಗಳಿಂದಲೂ ಕವಚಹಾಕಿದಂತೆಯೂ, (ಓಂ ಧಿಯೋಯೋನಃ ತೇಜಸೇ ನೇತ್ರಾಭ್ಯಾಂವೌಷಟ್) ಎಂದು ತರ್ಜನೀ ಮಧ್ಯ ಬೆರಳುಗಳ ತುದಿಯಿಂದ ಏಕಕಾಲದಲ್ಲಿ ನೇತ್ರದ್ವಯದಲ್ಲಿಯೂ, ಸ್ಪರ್ಶಮಾಡಿ (ಓಂ ಪ್ರಚೋದಯಾತ್ ವೀರ್ಯಾಯ ಅಸ್ತ್ರಾಯಫಟ್) ಎಂದು ಅಸ್ತ್ರಮಂತ್ರದಿಂ ಕೂಡಿದ ಛೋಟಿ (ಚಿಟಿಕೆ ಹಾಕುವದು) ದಿಂದ ಅಷ್ಟದಿಗ್ಬಂಧನ ಮಾಡುವದು.

## ಅಥ ಗಾಯತ್ರೀಧ್ಯಾನಂ.

ಮೂ॥ ಮುಕ್ತಾವಿದ್ರುಮಹೇಮನೀಲಧವಳಚ್ಛಾಯೈರ್ಮುಖೈಸ್ತ್ರೀಕ್ಷಣೈರ್ಯುಕ್ತಾಮಿಂದುಕಲಾನಿಬದ್ಧಮುಕುಟಾಂ ತತ್ವಾರ್ಥವರ್ಣಾತ್ಮಿಕಾಂ । ಗಾಯತ್ರೀಂ ವರದಾಭಯಾಂ ಕುಶಕಶಾಶ್ಶುಭ್ರಂಕಪಾಲಂಗುಣಂ ಶಂಖಂಚಕ್ರಮಥಾರವಿಂದಯುಗಳಂಹಸ್ತೈರ್ವಹಂತೀಂಭಜೇ॥ ಎಂದು ಧ್ಯಾನಿಸುವದು.

ಸ್ಮೃತಿರತ್ನಾಕರದಲ್ಲಿ, ಪ್ರಣವಕ್ಕೂ, ಗಾಯತ್ರೀಶಿರಸ್ಸಿಗೂ, ಧ್ಯಾನಶ್ಲೋಕಗಳು ಪ್ರತ್ಯೇಕವಾಗಿ ಉಕ್ತವಾಗಿರುವವು.

ಪ್ರಣವಧ್ಯಾನಂ ॥ ವಿಷ್ಣುಂಭಾಸ್ವತ್ಕಿರೀಟಾಂಗದವಲಯಯುಗಳಾಕಲ್ಪಹಾರೋಜ್ವಲಾಂಗಂಶ್ರೋಣೀಭೂಷಾಸುವಕ್ಷೋಮಣಿಮಕುಟನಹಾಕ್ಕುಂಡಲೈರ್ಮಂಡಿತಾಂಗಂ । ಹಸ್ತೋದ್ಯಚ್ಛಂಖ

ಚಕ್ರಾಂಬುಜಗದಮುಮಲಂಪೀತಕೌಶೇಯವಾಸಂ ವಿದ್ಯೋತ-
ದ್ಭಾಸಮುದ್ಯದ್ಧಿನಕರಸದೃಶಂಪದ್ಮಸಂಸ್ಥಂನಮಾಮಿ.

ಗಾಯತ್ರೀಶಿರೋಧ್ಯಾನಂ ॥ ಅಂಭೋಜಾಸನಸಂಸ್ಥಿತಂ ಸರಸಿಜಂ
ಶಂಖಂರಥಾಂಗಂಗದಾಂಬಿಭ್ರಾಣಂವರಪೀತವಸ್ತ್ರಮತುಲಂಭಾ-
ಸ್ವತ್ಕಿರೀಟಾಂಗದಂ । ಶ್ರೀವತ್ಸೋರಸಮುತ್ಪಲಾಭಮಖಿಲೈ-
ರ್ಭೂಷಾಗಣೈರ್ಭೂಷಿತಂವಂದೇಪದ್ಮನಿವಾಸಿನೀಸಹಚರಂವಿ-
ಷ್ಣುಂಸುರೈರ್ವಂದಿತಂ ॥ ಇತಿ.

ಓಮಾಪೋಜ್ಯೋತೀರಸೋಮೃತಂ ಬ್ರಹ್ಮಭೂರ್ಭುವಸ್ಸು-
ವರೋಂ॥

ಎಂದು ಗಾಯತ್ರೀ ಶಿರೋಮಂತ್ರದಿಂದ ಹಸ್ತದ್ವಯದಿಂದಲೂ, ಶಿರ
ಪ್ರಭೃತಿ ಪಾದಪರ್ಯಂತ ಉಭಯಪಾರ್ಶ್ವಗಳಲ್ಲಿಯೂ ಸ್ಪರ್ಶರೂಪ ವ್ಯಾ
ಪಕನ್ಯಾಸ ಮಾಡತಕ್ಕದ್ದು. (ಸ್ಪರ್ಶ ಮಾಡತಕ್ಕದ್ದು)

ಅರ್ಕಮಂಡಲಮಧ್ಯಸ್ಥಂಸೂರ್ಯಕೋಟಿಸಮಪ್ರಭಂ । ಬ್ರಹ್ಮಾದಿ-
ಸೇವ್ಯಪಾದಾಬ್ಜಂನೌಮಿಬ್ರಹ್ಮರಮಾಸಖಂ ॥

ಎಂದು ಹೇಳಿ ತ್ರಿರಾವೃತ್ತಿ ಪ್ರಾಣಾಯಾಮ ಮಾಡುವದು.

## ಪ್ರಾಣಾಯಾಮ ಪ್ರಯೋಗಃ.

ಪ್ರಾಣಾಯಾಮವು ರೇಚಕ, ಪೂರಕ, ಕುಂಭಕ, ಎಂಬ ಅವಸ್ಥಾ
ತ್ರಯದಿಂ ಕೂಡಿರುವದು. ಸ್ವದೇಹೋತ್ಪನ್ನವಾದ ವಾಯುವೇ ಪ್ರಾಣ
ವೆಂಬುವದು. ಅದನ್ನ ತಡಿಯುವದೇ ಪ್ರಾಣಾಯಾಮವು.

ಅದರಲ್ಲಿ ಕನಿಷ್ಠಿಕಾನಾಮಿಕಾ ಬೆರಳುಗಳಿಂದ ವಾಮನಾಸಿಕ (ಮೂಗಿ
ನ ಎಡಸೊಳ್ಳೆ) ವನ್ನ ಚನ್ನಾಗಿ ತಡೆದು ಕಣ್ಣುಗಳನ್ನ ಚನ್ನಾಗಿ ಮು
ಚ್ಚಿಕೊಂಡು ಬಲನಾಸಿಕದಿಂದ ಪ್ರಾಣವಾಯುವನ್ನ ಉಚ್ಛ್ವಾಸ (ಉಸು
ರು) ದೊಡನೆ ಹೊರಗೆ ಹೊರಡಿಸುವದೇ ರೇಚಕವೆನಿಸುವದು.

ಅಂಗುಷ್ಠದಿಂದ ಬಲನಾಸಿಕವನ್ನ ಚನ್ನಾಗಿ ತಡೆದು ಎಡಮೂಗಿನಿಂದ
ಬಾಹ್ಯವಾಯುವನ್ನ ಒಳಗೆ ತುಂಬುವದೇ ಪೂರಕವು.

ಆದೇ ಬೆರಳು (ಕನಿಷ್ಠಾನಾಮಿಕಾಂಗುಷ್ಠ) ಗಳಿಂದ ನಾಸಿಕಾದ್ವಯ (ಮೂಗಿನ ಎರಡು ಪಾರ್ಶ್ವ) ವನ್ನೂ, ಚನ್ನಾಗಿ ಹಿಡಿದು, ಓಷ್ಠಗಳಿಂದ ಆಸ್ಯ (ಬಾಯಿ) ವನ್ನು ಮುಚ್ಚಿಕೊಂಡು, ಪ್ರಾಣವಾಯು ಬಾಹ್ಯವಾಯುಗಳನ್ನ ಏಕಕಾಲದಲ್ಲಿ ಬಂಧನಮಾಡುವದೇ ಕುಂಭಕವು.

ಈ ರೇಚಕ, ಪೂರಕ, ಕುಂಭಕಗಳು ಮಾತ್ರ (ಶೀಘ್ರವಾಗಿಯೂ, ವಿಳಂಬವಾಗಿಯೂ, ಅಲ್ಲದೇ ಸಾಧಾರಣ ಗತಿಯಿಂದ ಮಂಡಿಯನ್ನ ಹಸ್ತದಿಂದ ಪ್ರದಕ್ಷಿಣಮಾಡಿ ಅಂಗುಷ್ಠಮಾಧ್ಯಮಾ ಬೆರಳುಗಳಿಂದ ಚಿಟಿಕಿ ಹೊಡಿಯುವ ಕಾಲ) ಭೇದದ್ವಿಸೆಯಿಂದ ಉತ್ತಮ ಮಧ್ಯಮಾಧಮಗಳಾಗುವವು, ಉತ್ತಮವು (೩೬) ಮಾತ್ರಾಕಾಲವು, ಮಧ್ಯಮವು (೨೪) ಮಾತ್ರಾಕಾಲವು, (೧೨) ಮಾತ್ರಾಕಾಲವು ಅಧಮವೆನಿಸುವದು.

ಇದರಲ್ಲಿ ಕುಂಭಕಾವಸ್ಥೆಯಲ್ಲಿ ಮುಂದೆ ಬರೆಯಲ್ಪಡುವ ಪ್ರಾಣಾಯಾಮ ಮಂತ್ರಗಳನ್ನು ತ್ರಿರಾವೃತ್ತಿ ಮನಸ್ಸಿನಲ್ಲಿ ಜಪಿಸುವದೇ ಪ್ರಾಣಾಯಾಮವು.

ಕನಿಷ್ಠಪಕ್ಷ (೧೨) ಮಾತ್ರಾಕಾಲದಲ್ಲಿ ವಾಯುವನ್ನು ಹೊರಕ್ಕೆ ಬಿಟ್ಟು (೧೨) ಮಾತ್ರಾಕಾಲದಲ್ಲಿ ಬಹಿರ್ವಾಯುವನ್ನು ಅಂತಃಪೂರಣ ಮಾಡಿ (೧೨) ಮಾತ್ರಾಕಾಲ ವಾಯುವನ್ನು ತಡೆದು ಆ ಕಾಲದಲ್ಲಿ ತ್ರಿರಾವೃತ್ತಿ (ಮೂರು ಬಾರಿ) ಪ್ರಾಣಾಯಾಮ ಮಂತ್ರವನ್ನ ಮನದೋಳ್ ಜಪಿಸಿ ಮೆಲ್ಲಮೆಲ್ಲಗೆ ಅಂತಸ್ಥವಾದ ವಾಯುವನ್ನು ದಕ್ಷಿಣ ನಾಸಿಕದಿಂದ ಹೊರಗೆ ಬಿಡುವದೇ ಪ್ರಾಣಾಯಾಮವೆಂದು ಪರಮತಾತ್ಪರ್ಯವು.

ಮಂ॥ ಓಂ ಭೂಃ, ಓಂ ಭುವಃ, ಓಗ್ಂ ಸುವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಗ್ಂ ಸತ್ಯಂ, ಓಂ ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯಧೀಮಹಿ, ಧಿಯೋಯೋನಃಪ್ರಚೋದಯಾತ್, ಓಮಾಪೋಜ್ಯೋತೀರಸೋಮೃತಂಬ್ರಹ್ಮಭೂರ್ಭುವಸ್ಸುವರೋಂ.

ಮೂಲಂ॥ ಓಂ.

ಪದಚ್ಛೇದಃ॥ ಅ, ಉ, ಮ್.

ಅರ್ಥ॥ "ಅಕಾರ, ಉಕಾರ, ಮಕಾರ, ಇತಿ" ಎಂಬ ಶ್ರುತ್ಯನುಸಾರ ವಾಗಿ ಪ್ರಣವ (ಓಂಕಾರ) ವು, ಅ, ಉ, ಮ್, ಎಂದು ಮೂರು ಪದವುಳ್ಳ ದ್ದು. ಇದರಲ್ಲಿ ಅ ಎಂಬುವ ಪದವು ಲುಪ್ತವಾದ ಚತುರ್ಥೀ ವಿಭಕ್ತಿಯು ಳ್ಳದ್ದಾಗಿಯೂ, ಅವ, ರಕ್ಷಣೆ ಎಂಬ ಧಾತುವಿನ ಪ್ರಕಾರ ನಿರುಪಾಧಿಕ ರಕ್ಷಣಾರ್ಥ ಪ್ರತಿಪಾದಕವಾಗಿಯೂ, ರಕ್ಷಕತ್ವೋಪಯುಕ್ತಗಳಾದ ದಯಾವಾತ್ಸಲ್ಯಾದಿ ಗುಣಗಳಿಗೆ ಆಕರ್ಷಕವಾಗಿಯೂ, "ಅಕಾರೋವೈ ಸರ್ವಾವಾಕ್" ಎಂಬ ಪ್ರಮಾಣಾನುಸಾರ ಸರ್ವವಾಚಕ (ಪದ) ಗಳಿ ಗೂ ಕಾರಣವಾದ ಪ್ರಯುಕ್ತ ಸರ್ವವಾಚ್ಯ (ಅರ್ಥ) ಕ್ಕೂ ಕಾರಣಭೂ ತವಾದ ಬ್ರಹ್ಮ ಪ್ರತಿಪಾದಕವಾಗಿಯೂ, ಕಾರಣತ್ವಕ್ಕೆ ಉಪಯುಕ್ತ ವಾದ ಜ್ಞಾನಶಕ್ತ್ಯಾದಿ ಸೂಚಕವಾಗಿಯೂ, "ಅ, ನಿಷೇಧೇ, ಪ್ರಮಾಣೇ ವಿಷ್ಣೌ" ಎಂಬ ನಿಘಂಟಿನ ಪ್ರಕಾರ ವಿಷ್ಣುಪರವಾಗಿಯೂ, ಇರುವದು. ಇದರೊಳ್ ಆಯ ಎಂಬ ಚತುರ್ಥಿಯು ಶೇಷತ್ವಮಂ ಪೇಳುವುದು.

ಉ ಎಂಬ ಪದವು, ಲಕ್ಷ್ಮೀವಾಚಕ (ಲಕ್ಷ್ಮಿಯನ್ನು ಹೇಳುವದಾಗಿ ಯೂ) ವಾಗಿಯೂ, "ತಮುಚಂದ್ರಮಾಃ" ಎಂಬ ಶ್ರುತಿಯಲ್ಲಿ 'ಉ' ಕಾ ರವು ಅವಧಾರಣಾರ್ಥಕದಲ್ಲಿರುವಂತೆ ಇಲ್ಲಿಯೂ ಅವಧಾರಣಾರ್ಥಕವಾಗಿ ಏವಕಾರಸ್ಥಾನದಲ್ಲಿಯೂ ಇರುವದು, (ಅವನು ಎಂದು ಹೇಳುವದನ್ನು ಅವನೇ ಎಂದು ಏವಕಾರದೊಡನೆ ಪೇಳುವದೇ ಅವಧಾರಣವು.)

'ಮ್' ಎಂಬ ಪದವು, 'ಮನ' ಅವಬೋಧನೇ ಎಂಬ ಧಾತುವಿನಿಂ ಜ್ಞಾನಗುಣಾರ್ಥಕವಾಗಿಯೂ, ಜ್ಞಾನ ಸ್ವರೂಪಾರ್ಥಕವಾಗಿಯೂ ಇರುವದು.

ಜ್ಞಾನವನ್ನೇ ಸ್ವರೂಪವನ್ನಾಗಿಯೂ, ಗುಣವನ್ನಾಗಿಯೂ ಉಳ್ಳ ಜೀ ವಾತ್ಮನು ಸರ್ವರಕ್ಷಕನಾಗಿಯೂ, ಸರ್ವ ಕಾರಣನಾಗಿಯೂ, ಲಕ್ಷ್ಮೀವಿ ಶಿಷ್ಟನಾಗಿಯೂ ಇರುವ ನಾರಾಯಣನಿಗೇನೇ ಶೇಷಭೂತ (ದಾಸ) ನೆಂ ತಾತ್ಪರ್ಯವು.

---

೧ ಅ ಎಂಬುವ ಪದದಲ್ಲಿ ಚತುರ್ಥೀಲೋಪಾದಿ ವಿಚಾರಗಳು ಮೂಲಮಂತ್ರ ಪ್ರಕರಣದಲ್ಲಿ ವಿವರಿಸಲ್ಪಡುವವು.

ಪದ್ಮೋಕ್ತಸ್ವವಸಂಹಿತೆಯಲ್ಲಿ॥ ಅಕಾರೇಣೋಚ್ಯತೇವಿಷ್ಣುಃಸರ್ವ
ಲೋಕೇಶ್ವರೋಹರಿಃ । ಉಕಾರೇಣೋಚ್ಯತೇಲಕ್ಷ್ಮೀಃಮ
ಕಾರೋದಾಸವಾಚಕಃ ॥ ಎಂದು ಹೇಳಲ್ಪಟ್ಟಿರುವದು.

ತಾತ್ಪರ್ಯ॥ ಸರ್ವ ಲೋಕನಾಯಕನಾದ ವಿಷ್ಣುವೇ, ಅಕಾರಾರ್ಥವು, ಲಕ್ಷ್ಮಿಯೇ ಉಕಾರಾರ್ಥವು, ಆ ಲಕ್ಷ್ಮೀನಾರಾಯಣರುಗಳಿಗೆ ದಾಸನಾದ ಜೀವಾತ್ಮನೇ ಮಕಾರ ಶಬ್ದಾರ್ಥವು. ಇಲ್ಲಿ ಬರೆಯತಕ್ಕ ವಿಶೇಷ ವಿಚಾರಗಳು ಮೂಲಮಂತ್ರ ಪ್ರಕರಣದಲ್ಲಿ ವಿಸ್ತಾರವಾಗಿ ಬರೆಯಲ್ಪಡುವವು.

ಮೂ॥ ಓಂ ಭೂಃ, ಓಂ ಭುವಃ, ಓಗ್ಂಸುವಃ, ಓಂ ಮಹಃ, ಓಂ ಜನಃ, ಓಂ ತಪಃ, ಓಗ್ಂಸತ್ಯಂ.

ಅರ್ಥ॥ ಓಂ ಭೂಃ-ಭೂಲೋಕ ಶರೀರಕನಾಗಿಯೂ, ಓಂ ಭುವಃ-ಭುವರ್ಲೋಕ ಶರೀರಕನಾಗಿಯೂ, ಓಗ್ಂ ಸುವಃ-ಸುವರ್ಲೋಕ ಶರೀರಕನಾಗಿಯೂ, ಓಂಮಹಃ-ಮಹರ್ಲೋಕ ಶರೀರಕನಾಗಿಯೂ, ಓಂ ಜನಃ-ಜನೋಲೋಕ ಶರೀರಕನಾಗಿಯೂ, ಓಂ ತಪಃ-ತಪೋಲೋಕ ಶರೀರಕನಾಗಿಯೂ, ಓಗ್ಂಸತ್ಯ-ಸತ್ಯಲೋಕ ಶರೀರಕನಾಗಿಯೂ, ಇರುವ ಅಥವಾ ಓಂ ಭೂಃ-ಕಾರಣರೂಪನಾಗಿಯೂ, ಭುವಃ-(ಭುವನಾನ್ಯಸ್ಮಿನ್ ಸಂತಿ ಭುವನೇಷುವಾ ಅಯಂವಸತಿ) ಎಂಬ ವ್ಯುತ್ಪತ್ತಿಯ ಪ್ರಕಾರ ಭುವನ ಶಬ್ದವಾಚ್ಯನಾಗಿಯೂ, ಸುವಃ (ಸೋಃಪ್ರಸೂತೀ, ತಾಂಬಿಯು ಕ್ತ್ಯ ಶ್ರೀತ್ರಿಸುವಃ, ಸೂರ್ಜ್ಯಪ್ರಾಣಿಪ್ರಸವೇ, ತತ್ಸ್ವಾಶ್ವಾತವೇವಾಸುಪ್ರಾಪ್ರಃಕ್, ಜಗದ್ವ್ಯಾಪಾರವರ್ಜಂ, ಪ್ರಕರಣಾದ ಸನ್ನಿಹಿತತ್ವಾಚ್ಚ, ಸೃಷ್ಟಿಸ್ಥಿತ್ಯಂತಕರಣೀಂ ಬ್ರಹ್ಮವಿಷ್ಣುಶಿವಾತ್ಮಿಕಾಂ । ಸಸಂಜ್ಞಾಂಯಾತಿಭಗವಾನೇಕಏವಜನಾರ್ದನಃ ॥ ಇತ್ಯಾದಿ ಪ್ರಮಾಣಾನುಸಾರ) ಜನಾರ್ದನ ಶಬ್ದವಾಚ್ಯನಾಗಿಯೂ, ಮಹಃ-ತೇಜೋರೂಪನಾಗಿಯೂ, ಜನಃ-(ಜಂತೂನಾಂಜನಕತ್ವಾಜ್ಜನೋಪದಿಶ್ಯತೇಜನಃ ಎಂಬ ವ್ಯುತ್ಪತ್ತಿಯ ಪ್ರಕಾರ) ಸರ್ವ ಪ್ರೇರಕನಾಗಿಯೂ, ತಪಃ-ಸೂರ್ಯಾಗ್ನಿರೂಪದಿಂದ ತಪಿಸುವನಾಗಿಯೂ, ಸತ್ಯಂ-ಶಾಶ್ವತನಾಗಿಯೂ, ಸತ್ಯಜ್ಞಾನಾದಿವಾಕ್ಯ ಪ್ರತಿಪಾದ್ಯನಾಗಿಯೂ ಇರುವ.

ಮೂ॥ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ,

ಧಿಯೋಯೋನಃಪ್ರಚೋದಯಾತ್ ॥

ಪದಂ॥ ತತ್, ಸವಿತುಃ, ವರೇಣಿಯಂ, ಭರ್ಗಃ, ದೇವಸ್ಯ, ಧೀಮಹಿ, ಧಿಯಃ, ಯಃ, ನಃ, ಪ್ರಚೋದಯಾತ್.

ಅರ್ಥ॥ ದೇವಸ್ಯ-(ದಿವ್‌ಕ್ರೀಡಾಕಾಂತಿಗತಿಷು ಎಂಬ ಧಾತುವಿನ ಪ್ರಕಾರ) ಚೇತನಾಚೇತನಾತ್ಮಕವಾದ ಜಗತ್ಕ್ರೀಡೆಯಲ್ಲಿ ಆನಂದಯುಕ್ತನಾಗಿಯೂ, ನಿರತಿಶಯ ಕಾಂತಿಯುಕ್ತನಾಗಿಯೂ ಇರುವ, ಸವಿತುಃ-ಸಕಲ ಜಗತ್ಕರ್ತೃವಾದ ವಾಸುದೇವನ, ವರೇಣಿಯಂ-ಎಲ್ಲಾ ಮಹಾತ್ಮರುಗಳಿಂದ ಪ್ರಾರ್ಥನೀಯವಾಗಿಯೂ, ತತ್-ವೇದಾಂತ ಪ್ರಸಿದ್ಧನಾಗಿಯೂ ಇರುವ, ಭರ್ಗಃ-ಸರ್ವಾಜ್ಞಾನ ನಿವರ್ತಕವಾಗಿಯೂ, ಸರ್ವ ಕರ್ಮಫಲ ವಿಪಾಕ ಹೇತುವಾಗಿಯೂ, ಸರ್ವಧಾರಕವಾಗಿಯೂ ಇರುವ ತೇಜಸ್ಸನ್ನು, ಧೀಮಹಿ-ಧ್ಯಾನ ಮಾಡುವೆವು, ಯಃ-ಯಾವ ತೇಜಸ್ಸು, ನಃ-ನಮಗೆ, ಧಿಯಃ-ತ್ಯಾಜ್ಯೋ (ಬಿಡತಕ್ಕದ್ದು) ಪಾದೇಯಾ (ಸ್ವೀಕರಿಸತಕ್ಕದ್ದು.) ದಿ-ವಿಷಯಕವಾದ ಧ್ಯಾನಾದ್ಯುಪಯುಕ್ತವಾದ ಸರ್ವ ಜ್ಞಾನಗಳನ್ನೂ, ಪ್ರಚೋದಯಾತ್-ಪ್ರೇರಿಸಲಿ.

ತಾತ್ಪರ್ಯ॥ ಜಗತ್ಕಾರಣತ್ವದಿಂದ ಉಪಾಸನ (ಧ್ಯಾನ) ಮಾಡಲ್ಪಟ್ಟ ಪುರುಷೋತ್ತಮನಾದ ಪರಂಬ್ರಹ್ಮನು, ತೈಲಧಾರೆ-(ಎಳ್ಳೆಣ್ಣೆಯ ಧಾರೆ) ಯೋಪಾದಿಯಲ್ಲಿ, ಅವಿಚ್ಛಿನ್ನವಾದ ಸ್ಮೃತಿ ಸಂತಾನರೂಪವಾದ ಭಕ್ತಿಯನ್ನ ನಮಗೆ ಉಂಟುಮಾಡುವನು.

ಉಪಾಯಾಂತರ ಪರಿತ್ಯಾಗಪೂರ್ವಕವಾಗಿ ಪರಮ ಪುರುಷನೊಬ್ಬನನ್ನೇ ಸಾಧನವಾಗಿವುಳ್ಳ ಪ್ರಪನ್ನನಿಂದ ಸರ್ವದಾ ಜಪಿಸಲರ್ಹವಾದ ದ್ವಯಮಂತ್ರಾರ್ಥವನ್ನೇ ಈ ಗಾಯತ್ರಿಯು ಪ್ರತಿಪಾದಿಸುವುದು.

ತತ್ಸವಿತುಃ, ಇವು ಬೇರೆ ಪದವು, "ತಚ್ಛಬ್ದವಾಚಕಶ್ರೀರ್ಮಾಗಾಯತ್ರ್ಯರ್ಥ ಇತೀರಿತಃ" ಎಂಬ ಪ್ರಮಾಣಾನುಸಾರ 'ತತ್' ಎಂಬ ಶಬ್ದಕ್ಕೆ ಸಕಲಶ್ರುತಿ ಪ್ರಸಿದ್ಧನಾಗಿಯೂ, ಇತರ ವ್ಯಾವರ್ತಕನಾಗಿಯೂ,

ಶ್ರೀಯಃಪತಿತ್ವ ವಿಶಿಷ್ಟನಾಗಿಯೂ ಇರುವ ಪರಮ ಪುರುಷನೇ ಅರ್ಥವಾದ ಪ್ರಯುಕ್ತ ದ್ವಯಮಂತ್ರದಲ್ಲಿರುವ ಶ್ರೀಮತ್ ಎಂಬ ಶಬ್ದದ ಅರ್ಥವು ಇವರೋಳ್ ಹೇಳಲ್ಪಡುವುದು.

ಸವಿತುಃ-ಷೂಙ್‌ಪ್ರಾಣಿಪ್ರಸವೇ ಎಂಬ ಧಾತುವಿನಿಂದಲೂ, 'ಸವಿತಾ ಸಕಲೋತ್ಪತ್ತಿ ಸ್ಥಿತಿಸಂಹಾರಕಾರಣಂ' ಎಂಬ ಪ್ರಮಾಣಾನುಸಾರವಾಗಿಯೂ, ಏರ್ಪಟ್ಟ ಸಕಲ ಜಗತ್ಕಾರಣತ್ವವೂ ಅದಕ್ಕೆ ಉಪಯುಕ್ತವಾದ ಅವಾಪ್ತ ಸಮಸ್ತ ಕಾಮತ್ವ (ಸಕಲ ಇಷ್ಟಾರ್ಥಗಳನ್ನು ಪಡೆದಿರುವಿಕೆ) ಸರ್ವಜ್ಞತ್ವ ಸರ್ವ ಶಕ್ತತ್ವಾದಿ ಗುಣಗಣಗಳೂ ವುಳ್ಳ, ದೇವಸ್ಯ-ದಿವ್ ಕ್ರೀಡಾಕಾಂತಿಷು ಎಂಬ ಧಾತುವಿನಪ್ರಕಾರ ನಿರತಿಶಯಾನಂದಯುಕ್ತನಾಗಿಯೂ, ನಿರತಿಶಯಕಾಂತಿಯುಳ್ಳವನಾಗಿಯೂ ಇರುವ ನಾರಾಯಣನ, ವರೇಣ್ಯಂ-ಆಶ್ರಯಿಸಲರ್ಹವಾದ, ಇದರಿಂದ ಆಶ್ರಯಿಸುವವಕ್ಕೆ ಅರ್ಹವಾದ ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯಾದಿ ಗುಣಗಳು ತೋರ್ಪಡುವವು.

ಸವಿತುಃ, ದೇವಸ್ಯ, ವರೇಣ್ಯಂ, ಎಂಬ ಶಬ್ದಗಳಿಂದ ನಾರಾಯಣ ಶಬ್ದಾರ್ಥಗಳು ಪುಷ್ಕಲವಾಗಿ ಹೇಳಲ್ಪಟ್ಟವು. ಭರ್ಗಃ, ನಿರತಿಶಯೌಜ್ವಲ್ಯ ಸೌಂದರ್ಯಾದಿ ಗುಣವಿಶಿಷ್ಟ ವಿಗ್ರಹವನ್ನು, ಇಲ್ಲಿ ವಿಗ್ರಹಶಬ್ದವು ಪ್ರಕೃತೋಪಯುಕ್ತವಾದ ಚರಣರೂಪವಾದ ಅವಯವ ವಿಶೇಷವಂ ಹೇಳುವುದು.

ಈ ಪರ್ಯಂತವೂ ಗಾಯತ್ರಿಯಲ್ಲಿ (ತತ್ಸವಿತುರ್ವರೇಣ್ಯಂಭರ್ಗೋದೇವಸ್ಯ) ಶ್ರೀಮನ್ನಾರಾಯಣಚರಣೌ, ಎಂಬ ಪರ್ಯಂತವಾದ ಶಬ್ದಗಳ ಅರ್ಥಗಳು ಪ್ರತಿಪಾದಿಸಲ್ಪಟ್ಟವು. ಧೀಮಹಿ=ಶರಣ್ಯತ್ವೇನ ಧ್ಯಾನ ಮಾಡುವೆವು. ಇದರಿಂದ "ಶರಣಂಪ್ರಪದ್ಯೇ" ಎಂಬ ಶಬ್ದಾರ್ಥವು ಹೇಳಲ್ಪಡುವುದು. ಈ ಗಾಯತ್ರೀ ಪೂರ್ವ ಖಂಡದಿಂದ ದ್ವಯಮಂತ್ರದ ಪೂರ್ವಖಂಡಾರ್ಥವು ಹೇಳಲ್ಪಟ್ಟಿತು.

ಯಃ-ಎಂಬ ಪದವು ಸಕಲಪ್ರಮಾಣ ಪ್ರಸಿದ್ಧನಾಗಿಯೂ, ಲಕ್ಷ್ಮೀ ವಿಶಿಷ್ಟನಾಗಿಯೂ ಇರುವ ನಾರಾಯಣ ಪ್ರತಿಪಾದಕವಾದ "ತತ್" ಎಂಬ ಶಬ್ದಕ್ಕೆ ಪ್ರತಿಸಂಬಂಧಿಯಾಗಿರುವುದು. ಯಃ-ಯಾವ ನಾರಾಯಣನು,

ನೇ-ಭಗವಂತನನ್ನೇ ಉಪಾಯ (ಸಾಧ (ನ) ಕ)ವಾಗಿಯೂ, ಉಪೇಯ (ಪ್ರಾಪ್ಯ) ವಾಗಿಯೂ ಹೊಂದಿರುವ ನಮಗೆ, ಧಿಯಃ-ಪರಿಪೂರ್ಣನ ರತ ನಿತ್ಯವಿಶದತಮ ಅನನ್ಯಪ್ರಯೋಜನ ಅನವಧಿಕಾತಿಶಯ ಅತಿಪ್ರಿಯ ಭಗವದನುಭವಜನಿತ ಪ್ರೀತಿಕಾರಿತ ಕೈಂಕರ್ಯವಿಷಯ ಜ್ಞಾನಗಳನ್ನು ಪ್ರಚೋದಯಾತ್-ಪ್ರೇರಿಸಲಿ, ಸ್ವಮುಖೋಲ್ಲಾಸ ಹೇತುಭೂತವಾದ ಶುಶ್ರೂಷೆಯಲ್ಲಿ ಆಜ್ಞಾಪಿಸಲಿ ಎಂದು ತಾತ್ಪರ್ಯವು. ಇಲ್ಲಿ ಪ್ರಾರ್ಥನಾರ್ಥಕವಾದ ಲಕಾರದಿಂದ ಕೈಂಕರ್ಯಪ್ರಾರ್ಥನೆಯು ಹೇಳಲ್ಪಟ್ಟಿತು. ಯಃ-ಎಂಬ ಪದದಿಂದ ಶ್ರೀಮತೇ ನಾರಾಯಣಾ, ಎಂಬ ಶಬ್ದಾರ್ಥವೂ, ನೋಧಿಯಃಪ್ರಚೋದಯಾತ್-ಎಂಬ ಶಬ್ದಗಳಿಂದ ಕೈಂಕರ್ಯ ಪ್ರಾರ್ಥನಾವಾಚಕವಾದ "ಆಯ" ಎಂಬ ಶಬ್ದಾರ್ಥವೂ, ಕೈಂಕರ್ಯದಲ್ಲಿ ಭಗವಂತನಿಂದಲೇ ಪ್ರೇರಿಸಲ್ಪಟ್ಟವನು ಎಂಬ ತಾತ್ಪರ್ಯದಿಂದ ಮಮಕಾರ ನಿವೃತ್ತಿಯಂ ಹೇಳುವ "ನಮಃ" ಎಂಬ ಶಬ್ದಾರ್ಥವೂ ಹೇಳಲ್ಪಟ್ಟಿತು.

ಮೂ॥ ಓಮಾಪೋಜ್ಯೋತೀರಸೋಽಮೃತಮ್ಬ್ರಹ್ಮ
ಭೂರ್ಭುವಸ್ಸುವರೋಮ್ ॥

ಪದಂ॥ ಓಂ ಆಪ, ಜ್ಯೋತಿಃ, ರಸಃ, ಅಮೃತಂ, ಬ್ರಹ್ಮ, ಭೂಃ, ಭುವಃ, ಸುವಃ, ಓಂ.

ಅರ್ಥ॥ ಆಪಃ-ಉದಕಗಳೂ, ಜ್ಯೋತಿಃ-ತೇಜಸ್ಸೂ, ಇದು ಪಂಚಭೂತಗಳಿಗೂ (ಪೃಥಿವ್ಯಪ್ತೇಜೋವಾಯ್ವಾಕಾಶ) ಉಪಲಕ್ಷಕವು, ರಸಃ-ರಸವಿಷಯವೂ, ಇದು ಪಂಚವಿಷಯ (ಗಂಧ, ರಸ, ರೂಪ, ಸ್ಪರ್ಶ ಶಬ್ದ) ಗಳಿಗೂ ಉಪಲಕ್ಷಕವು. ಅಮೃತಂ, ಕಾಲವೂ, ಬ್ರಹ್ಮ, ಮೂಲ ಪ್ರಕೃತಿಯೂ, ಭೂಃ-ಭೂಲೋಕವೂ, ಭುವಃ-ಭುವರ್ಲೋಕವೂ, ಸುವಃ-ಸುವರ್ಲೋಕವೂ, (ಇದು ಸರ್ವ ಲೋಕಗಳಿಗೂ ಉಪಲಕ್ಷಣವು) ಓಂ ಬ್ರಹ್ಮಾತ್ಮಕವು ಆದ್ಯಂತಗಳಲ್ಲಿ ಪ್ರಣವವಿರುವುದರಿಂದ ಪರಬ್ರಹ್ಮನ ದೆಸೆಯಿಂದಲೇ ಉತ್ಪತ್ತಿಯೂ ಪರಬ್ರಹ್ಮನಲ್ಲಿಯೇ ಲಯವೂ ಎಂಬ ಅರ್ಥವು ಹೇಳಲ್ಪಟ್ಟಿತು.

ತಾತ್ಪರ್ಯ॥ ಗಾಯತ್ರಿಯಲ್ಲಿ ಪ್ರಥಮತಃ ಪ್ರಣವದಿಂದ ಜೀವಾತ್ಮ

ನಿಗೆ ಭಗವದ್ವಿಭೂತಿತ್ವವೂ, ಗಾಯತ್ರಿ, ಶಿರಸ್ಸಿನಿಂ (ಓಮಾಪೋಜ್ಯೋತೀ ರಸೋಮೃತಂಬ್ರಹ್ಮಭೂರ್ಭುವಸ್ಸುವರೋಂ) ದ ಅಚೇತನ ಸ್ವರೂಪ ಕ್ಕೆ ಭಗವದಾತ್ಮಕತ್ವವೂ ಪ್ರತಿಪಾದಿಸಲ್ಪಟ್ಟಿತು. ಹೀಗೆ ಗಾಯತ್ರಿ ಯಿಂದ ಚೇತನಾಚೇತನಾತ್ಮಕ ಪ್ರಪಂಚವಿಶಿಷ್ಟನಾದ ಪರಮಾತ್ಮನ ಉಪಾಸನವು ಪ್ರತಿಪಾದಿಸಲ್ಪಟ್ಟಿರುವುದು.

## ಅಥ ಗಾಯತ್ರೀ ಜಪವಿಧಿಃ.

ಭರದ್ವಾಜಃ ॥ ಆಯಾತ್ವಿತ್ಯನುವಾಕೇನಹೃದಯೇವಾರ್ಕಮಂಡಲೇ ।
ದೇವೀಮಾವಾಹ್ಯಗಾಯತ್ರೀಂ ತತೋಧ್ಯಾಯೇದ್ದ್ವಿಜೋತ್ತಮಃ॥

ತಾತ್ಪರ್ಯ॥ ಮುಂದೆ ಬರೆಯಲ್ಪಡುವ "ಆಯಾತು" ಎಂಬ ಅನು ವಾಕದಿಂದ ಹೃದಯಾಬ್ಜದಲ್ಲಿಯೋ, ಅಥವಾ ಸೂರ್ಯಮಂಡಲದಲ್ಲಿಯೋ, ಗಾಯತ್ರೀದೇವಿಯನ್ನ ಆವಾಹನೆ ಮಾಡಿ, ಅನಂತರ ಬ್ರಾಹ್ಮಣನು ಧ್ಯಾ ನಿಸತಕ್ಕದ್ದು.

ಶ್ಲೋ॥ ಏಷಾಜಪ್ತಾತುಗಾಯತ್ರೀಸರ್ವಪಾಪಪ್ರಣಾಶನೀ ।
ವಿಜ್ಞಾತವ್ಯಾಪ್ರಯತ್ನೇನದ್ವಿಜೈಸ್ಸರ್ವಶುಭೇಪ್ಸುಭಿಃ ॥

ತಾತ್ಪರ್ಯ॥ ಈ ಗಾಯತ್ರೀ ಮಂತ್ರಜಪದಿಂದ ಸಕಲವಾದ ಪಾಪಗ ಳೂ ನಾಶವಾಗುವವೆಂದೂ ಸಕಲವಾದ ಇಷ್ಟಾರ್ಥಗಳೂ ಕೈಗೂಡುವು ವೆಂದೂ ತಿಳಿಯತಕ್ಕದ್ದು.

ಶ್ಲೋ॥ ದ್ವಿಜಸ್ಯಜಪ್ಯಂಧ್ಯೇಯಂಚನಗಾಯತ್ರ್ಯಾಃಪರಂಪರಂ । ಪ್ರಾ
ಯಃಕಿಂಜಲ್ಪನೈರ್ವ್ಯರ್ಥೈಃಭೂಯೋಭೂಯೋವಿಮೋಹನೈಃ॥
ಗಾಯತ್ರ್ಯಾಸ್ತುಪರಂನಾಸ್ತಿದೈವತಂಸದ್ದ್ವಿಜನ್ಮನಾಂ ॥

ತಾತ್ಪರ್ಯ॥ ಬ್ರಾಹ್ಮಣನಿಗೆ ಜಪಿಸುವುದಕ್ಕೂ ಧ್ಯಾನಿಸುವುದಕ್ಕೂ ಗಾಯತ್ರಿಗಿಂತಲೂ ಶ್ರೇಷ್ಠವಾದ ಮಂತ್ರವಿಲ್ಲವು. ಪ್ರಾಯಃ ಬುದ್ಧಿಮೋ ಹಕರಗಳಾದ ಜಲ್ಪನಗಳಿಂದ ಉಪಯೋಗವೇನು? ಗಾಯತ್ರಿಗಿಂತ ಶ್ರೇ ಷ್ಠವಾದ ದೈವವಿಲ್ಲವು.

ಮನುಃ। ಪೂರ್ವಾಂಸಂಧ್ಯಾಂಜಪಂಸ್ತಿಷ್ಠನ್ನೈಶಮೇನೋವ್ಯಪೋ
ಹತಿ । ಪಶ್ಚಿಮಾಂತುಸಮಾಸೀನೋಮಲಂಹಂತಿದಿವಾಕೃತಂ॥

ತಾತ್ಪರ್ಯ ॥ ಪ್ರಾತಸ್ಸಂಧ್ಯೆಯಲ್ಲಿ ನಿಂತು ಗಾಯತ್ರಿಯು ಜಪಿಸಿದ್ದಾದರೆ ರಾತ್ರಿಯಲ್ಲಿ ಮಾಡಲ್ಪಟ್ಟಿರುವ ಪಾಪಗಳಿಂದ ಬಿಡಲ್ಪಡುವನು. ಸಾಯಂಕಾಲ ಕುಳಿತುಕೊಂಡು ಗಾಯತ್ರೀ ಜಪಮಾಡಿ ಹಗಲು ಮಾಡಿರುವ ಪಾಪಗಳಿಂದ ಬಿಡಲ್ಪಡುವನು.

ಸ್ಮೃತಿರತ್ನಾಕರೇ-ಭರದ್ವಾಜಸಂವರ್ತವ್ಯಾಸಾಃ ॥
ಸಹಸ್ರಪರಮಾಂದೇವೀಂಶತಮಧ್ಯಾಂದಶಾವರಾಂ।
ಗಾಯತ್ರೀಂಪ್ರೈಜಪೇದ್ವಿದ್ವಾನ್ಪ್ರಾಙ್ಮುಖಃಪ್ರಯತಃಸ್ಥಿತಃ ॥

ತಾತ್ಪರ್ಯ। ಪೂರ್ವಾಭಿಮುಖನಾಗಿ ನಿಂತುಕೊಂಡು ಗಾಯತ್ರಿಯನ್ನ ಸಹಸ್ರಾವೃತ್ತಿ ಜಪಿಸಿದರೆ ಉತ್ತಮವು, ಒಂದುನೂರಾವೃತ್ತಿ ಜಪಿಸುವುದು ಮಧ್ಯಮವು, ಹತ್ತಾವೃತ್ತಿ ಜಪಿಸುವುದು ಕನಿಷ್ಠಪಕ್ಷವು.

ಸ್ಮೃತಿರತ್ನಾಕರೇ ॥ ತುರೀಯಂತುಪದಂತಸ್ಯಾಃಪರೇಬ್ರಹ್ಮಣಿ ಸಂಸ್ಥಿತಂ । ಉಪಸ್ಥಾಯತುರೀಯೇಣ ಜಪೇತ್ತಾಂತುಸಮಾಹಿತಃ॥ಗಾಯತ್ರ್ಯಾಸ್ತುತುರೀಯಸ್ಯಋಷಿರ್ವಿಮಲಉಚ್ಯತೇ। ಛಂದಸ್ತುರೀಯಗಾಯತ್ರೀಪರಮಾತ್ಮಾತುದೇವತಾ ।

ತಾತ್ಪರ್ಯ॥ ಗಾಯತ್ರಿಯ ನಾಲ್ಕನೇ ಪಾದವು ಸಾಕ್ಷಾತ್ ಪರಬ್ರಹ್ಮ ಪ್ರತಿಪಾದಕವು. ಅದುಕಾರಣ ತುರೀಯ ಗಾಯತ್ರಿಯನ್ನ ಜಪಿಸಿ ಉಪಸ್ಥಾನ ಮಾಡಿ ತದನಂತರ ಗಾಯತ್ರಿಯನ್ನ ಜಪಿಸತಕ್ಕದ್ದು. ತುರೀಯ ಗಾಯತ್ರಿಗೆ, ಋಷಿಗಳು ವಿಮಲರು. ತುರೀಯಗಾಯತ್ರಿಯೇ ಛಂದಸ್ಸು, ಪರಮಾತ್ಮನೇ ದೇವತೆ ಎಂದು ಭಾವವು.

ಇಲ್ಲಿ ತುರೀಯಪದವು ಉಪದೇಶದಿಂದಲೇ ತಿಳಿಯತಕ್ಕದ್ದೆಂದು ಬರೆಯಲ್ಪಡುವದಿಲ್ಲ.

## ತುರೀಯ ಗಾಯತ್ರೀಧ್ಯಾನಂ.

ಯದ್ದೇವಾಸುರಪೂಜಿತಾರುಣನಿಭಂ ಸೋಮಾರ್ಕತಾರಾಗಣೈಃಪ್ರ
ನ್ನಗಾಂಬುಜನಾಗಪುಷ್ಪಮುಕುಳೈರ್ವ್ಯಾಸ್ತೈಸ್ಸುರೈರರ್ಚಿತಂ।
ನಿತ್ಯಂಧ್ಯಾನಸಮಸ್ತಯೋಗಕರಣಂಕಾಲಾಗ್ನಿರುದ್ರೋಪಮಂ॥
ತತ್ಸಂಹಾರಕರಂನಮಾಮಿಸತತಂ ಕಾಲಾಗ್ನಿಸಪ್ತಂಮುಖಂ ।

ಯೋನಿಮುದ್ರಾ ಸಾರಭೇಯಮಹಾಯೋನಿಸ್ತಥೈವಚ । ಸುರ
ಭ್ಯಜಾಲಿಂಗಮುದ್ರಾಮಹಾಮುದ್ರಾನಮಸ್ಕ್ರಿಯಾ ॥

ತಾ॥ ಯೋನಿಮುದ್ರೆಯೇ ಮೊದಲಾದ ಮುದ್ರೆಗಳನ್ನು ತೋರಿಸಬೇಕು.

ಬ್ರಹ್ಮಾ॥ ಮನಃಪ್ರಹರ್ಷಣಂಶೌಚಂ ಮೌನಂಮಂತ್ರಾರ್ಥಚಿಂತ
ನಂ । ಅವ್ಯಗ್ರತ್ವಮನಿರ್ವೇದೋಜಪಸಂಪತ್ತಿಹೇತವಃ ॥

ತಾತ್ಪರ್ಯ॥ ಮನೋಹರ್ಷವೂ, ಪರಿಶುದ್ಧಿಯೂ, ಮೌನವೂ, ಮಂ
ತ್ರದ ಅರ್ಥ ಪರ್ಯಾಲೋಚನವೂ, ಆತುರಪಡದೇ ಇರುವಿಕೆಯೂ, ಬೇ
ಸರಿಕೆ ಇಲ್ಲದಿರುವಿಕೆಯೂ ಜಪಸಂಪತ್ತುಗಳಿಗೆ ಕಾರಣಗಳು.

ಭರದ್ವಾಜಃ॥ ನಿಷ್ಠೀವಜೃಂಭಣಕ್ರೋಧ ನಿದ್ರಾಲಸ್ಯಕ್ಷುಧಾಮ
ದಾಃ । ಪತಿತಶ್ವಾಂತ್ಯಜಾಲೋಕಾದಶೈತೇಜಪವೈರಿಣಃ ॥

ತಾತ್ಪರ್ಯ॥ ಉಗಿಯುವಿಕೆ, ಆಕಳಿಕೆಯಂ ಬಿಡುವಿಕೆ, ಕೋಪ, ನಿದ್ರೆ,
ಬೇಸರಿಕೆ, ಹಸಿವು, ಮದವು, ಪತಿತರು, ನಾಯಿಗಳು, ಚಂಡಾಲರು, ಇವ
ರುಗಳ ನೋಡುವಿಕೆ ಈ ಹತ್ತೂ ಜಪಕ್ಕೆ ವಿರೋಧಿಯಾದದ್ದು.

ವ್ಯಾಸಃ॥ ನಪ್ರಕ್ರಮನ್ನಹಸನ್ನಪಾರ್ಶ್ವಮವಲೋಕಯನ್ ।
ನಾಪಾಶ್ರಿತೋನಜಲ್ಪಂಶ್ಚನಪ್ರಾವೃತಶಿರಾಸ್ತಥಾ॥ ನಪದಾಪಾದ
ಮಾಕ್ರಮ್ಯನಚೈವಹಿತಥಾಕರೌ । ನಚಾಸಮಾಹಿತಮನಾನ
ಚಸಂಶ್ರಾವಯನ್‌ಜಪೇತ್॥

ತಾತ್ಪರ್ಯ॥ ಸಂಚಾರ ಮಾಡುವನಾಗಿಯೂ, ನಗುವನಾಗಿಯೂ, ಪಾ
ರ್ಶ್ವಗಳನ್ನು ನೋಡುವನಾಗಿಯೂ, ಸ್ತಂಭಾದಿಗಳನ್ನು ಆಶ್ರಯಿಸಿ (ಒರ
ಗಿ) ಕೊಂಡೂ, ಇತರರೊಡನೆ ಮಾತನಾಡುವನಾಗಿಯೂ, ಶಿರಸ್ಸನ್ನು ವಸ್ತ್ರ
ದಿಂದ ಮುಚ್ಚಿಕೊಂಡೂ, ಕಾಲಿನಮೇಲೆ ಕಾಲನ್ನಿಟ್ಟುಕೊಂಡೂ, ಹಸ್ತದಲ್ಲಿ
ಹಸ್ತವನ್ನು ಇಟ್ಟುಕೊಂಡೂ, ಸಮಾಧಾನವಿಲ್ಲದ ಮನಸ್ಸಿನಿಂದಲೂ, ಇತರ
ರಿಗೆ ಕೇಳಿಸುವಂತೆಯೂ, ಜಪ ಮಾಡಬಾರದು.

ಶ್ಲೋ॥ ಪರ್ವಭಿಸ್ತುಜಪೇದ್ದೇವೀಂನಾಕ್ಷಮಾಲಾಭಿಭಿಸ್ತಥಾ ।
ಗಾಯತ್ರ್ಯಾವೇದಮಾತ್ರೈತ್ವಾ ದ್ವೇದಃಪರ್ವಸುಗೀಯತೇ ।

ತಾತ್ಪರ್ಯ। ಗಾಯತ್ರೀ ಜಪಸಂಖ್ಯೆಯನ್ನು ಬೆರಳುಗಳ ಪರ್ವಗ

(ಗೆಣ್ಣು) ಳಿಂದ ಮಾಡಬೇಕೇ ವಿನಹಾ ಜಪಮಾಲಿಕೆಗಳಲ್ಲಿ ಮಾಡಬಾರದು. ಗಾಯತ್ರಿಯು ವೇದಮಾತೆಯಾದ ಪ್ರಯುಕ್ತ ವೇದಗಳಿಗೆ ಹೇಗೋಹಾಗೆ ಬೆರಳುಗಳ ಪರ್ವ (ಗೆಣ್ಣು) ಗಳಲ್ಲಿಯೇ ಗಣನೆಮಾಡಬೇಕು.

ಸಂವರ್ತಃ॥ ಗಾಯತ್ರೀಮಾತ್ರಸಾರೋಪಿವರೋವಿಪ್ರಸ್ಸುಯಂ
ತ್ರಿತಃ॥

ವಿಶ್ವಾಮಿತ್ರಃ॥ ವೇದಾಧ್ಯಯನಹೀನೋಪಿಶ್ರದ್ಧಾನೋಜಿತೇಂದ್ರಿ
ಯಃ। ಮುಚ್ಯತೇಸರ್ವಪಾಪೇಭ್ಯೋಪರಂಬ್ರಹ್ಮಾಧಿಗಚ್ಛತಿ॥

ತಾತ್ಪರ್ಯ॥ ವೇದಾಧ್ಯಯನ ಮಾಡದೇ ಇದ್ದಾಗ್ಯೂ ಗಾಯತ್ರೀ ಜಪದಲ್ಲಿ ನಿರತನಾಗಿಯೂ, ಆಸ್ತಿಕನಾಗಿಯೂ, ಜಿತೇಂದ್ರಿಯನಾಗಿಯೂ ಇರುವ ಮನುಷ್ಯನು ಸರ್ವ ಪಾಪಗಳಿಂದಲೂ ಬಿಡಲ್ಪಟ್ಟು ಪರಬ್ರಹ್ಮನನ್ನು ಹೊಂದುತ್ತಾನೆ.

ಬ್ರಹ್ಮಾ॥ ಗಾಯತ್ರ್ಯಾನಪರಂಜಪ್ಯಂ ಗಾಯತ್ರ್ಯಾನಪರಂತಪಃ।
ಗಾಯತ್ರ್ಯಾನಪರಂಧ್ಯಾನಂಗಾಯತ್ರ್ಯಾನಪರಂಹುತಂ॥

ತಾತ್ಪರ್ಯ॥ ಗಾಯತ್ರೀಜಪಕ್ಕಿಂತಲೂ ಶ್ರೇಷ್ಠವಾದ ಜಪವಿಲ್ಲವು, ಗಾಯತ್ರೀ ಜಪಕ್ಕಿಂತಲೂ ಶ್ರೇಷ್ಠವಾದ ತಪಸ್ಸಿಲ್ಲವು, ಗಾಯತ್ರೀಜಪಕ್ಕಿಂತಲೂ ಶ್ರೇಷ್ಠವಾದ ಧ್ಯಾನವಿಲ್ಲವು, ಗಾಯತ್ರೀ ಜಪಕ್ಕಿಂತಲೂ ಶ್ರೇಷ್ಠವಾದ ಹೋಮವಿಲ್ಲವು.

## ಅಥಗಾಯತ್ರೀ ಜಪಪ್ರಯೋಗಃ

ತ್ರಿರಾವೃತ್ತಿ ಪ್ರಾಣಾನಾಯಮ್ಯ, ಅಷ್ಟೋತ್ತರ ಸಹಸ್ರಂ (೧೦೦೮) ಅಷ್ಟೋತ್ತರಶತಂ (೧೦೮) ದಶವಾರಂ (೧೦) ಓಮಯಾದ್ವಾ (ಉದಯ ಪರ್ಯಂತ) ಗಾಯತ್ರೀಮಂತ್ರ ಜಪಂಕರಿಷ್ಯೇ, ಎಂದು ಸಂಕಲ್ಪಮಾಡಿ.

ಶ್ಲೋ॥ ಗ್ರಹಸ್ಥೋಬ್ರಹ್ಮಚಾರೀಚ ಶತಮಷ್ಟೋತ್ತರಂಜಪೇತ್॥
ವಾನಪ್ರಸ್ಥೋಯತಿಶ್ಚೈವಜಪೇದಷ್ಟಸಹಸ್ರಕಂ॥

ಎಂಬ ಸಂವರ್ತ ಸ್ಮೃತಿಯ ಪ್ರಕಾರ ಗೃಹಸ್ಥರೂ, ಬ್ರಹ್ಮಚಾರಿಗಳೂ ನೂರೆಂಟು ಗಾಯತ್ರಿಯನ್ನೂ ವಾನಪ್ರಸ್ಥ ಸನ್ಯಾಸಿಗಳು (೧೦೦೮) ಗಾಯತ್ರಿಯನ್ನೂ ಅಶಕ್ತಿ ವಿಷಯದಲ್ಲಿಯೂ, ಆಶೌಚಾದಿ ಸಂಭವದಲ್ಲಿಯೂ (೧೦) ಗಾಯತ್ರಿಯನ್ನೂ ಮಾಡತಕ್ಕದ್ದು.

ಆಯಾತ್ವಿತ್ಯನುವಾಕಸ್ಯವಾಮದೇವಋಷಿಃ, ಅನುಷ್ಟುಪ್ಛಂದಃ, ಗಾಯತ್ರೀದೇವತಾ, ಎಂದು ನ್ಯಾಸಮಾಡಿ ಗಾಯತ್ರ್ಯಾವಾಹನೇವಿನಿಯೋಗಃ ಎಂದು ಹೇಳಿ,

ಆಯಾತುವರದಾದೇವೀ ಅಕ್ಷರಮ್ಬ್ರಹ್ಮಸಮ್ಮಿತಂ। ಗಾಯತ್ರೀಂ ಛಂದಸಾಂಮಾತೇದಮ್ಬ್ರಹ್ಮಜುಷಸ್ವನಃ । ಓಜೋಸಿಸಹೋಸಿ ಬಲಮಸಿಭ್ರಾಜೋಸಿ ದೇವಾನಾ। ನ್ಧಾಮನಾಮಾಸಿವಿಶ್ವಮಸಿ ವಿಶ್ವಾಯುಸ್ಸರ್ವಮಸಿಸ್ಸರ್ವಾಯುರಭಿಭೂರೋಂಗಾಯತ್ರೀ ಮಾವಾಹಯಾಮಿ. ಎಂದು ಆವಾಹನೆ ಮಾಡಿ, ಪ್ರಾತರ್ಧ್ಯಾಯಾಮಿಗಾಯತ್ರೀಂ ರವಿಮಂಡಲಮಧ್ಯಗಾಂ। ಋಗ್ವೇದಮುಚ್ಚಾರಯಂತೀಂ ರಕ್ತವರ್ಣಾಂ ಕುಮಾರಿಕಾಂ। ಅಕ್ಷಮಾಲಾಕರಾಂ ಬ್ರಹ್ಮ ದೈವತ್ಯಾಂಹಂಸವಾಹನಾಂ। ಎಂದು ಧ್ಯಾನಮಾಡಿ ಆಸನಾದ್ಯುಪಚಾರಗಳನ್ನು ಪ್ರಣವದಿಂದ ಮನಸ್ಸಿನಿಂದ ಸಮರ್ಪಿಸಿ,

ಪ್ರಣವಸ್ಯಋಷಿಃಬ್ರಹ್ಮಾದೇವೀಗಾಯತ್ರೀಚ್ಛಂದಃ, ಪರಮಾತ್ಮಾ ದೇವತಾ, ಭೂರಾದಿವ್ಯಾಹೃತಿತ್ರಯಸ್ಯ ಅತ್ರಿಭೃಗುಕುತ್ಸಾಋಷಯಃಗಾಯತ್ರ್ಯುಷ್ಣಿಗನುಷ್ಟುಭಃ ಛಂದಾಂಸಿಅಗ್ನಿವಾಯ್ವರ್ಕಾಃ ದೇವತಾಃ, ಸಾವಿತ್ರ್ಯಾಋಷಿಃ ವಿಶ್ವಾಮಿತ್ರಃ ದೇವೀ ಗಾಯತ್ರೀಚ್ಛಂದಃ ಸವಿತಾದೇವತಾ, ಎಂದು ನ್ಯಾಸಮಾಡಿ. ಪ್ರಾತಸ್ಸಂಧ್ಯಾ ಜಪೇವಿನಿಯೋಗಃ, ಎಂದು ಹೇಳಿ,

ಅಸ್ತ್ರಮಂತ್ರದಿಂದ (ವೀರ್ಯಾಯಾಸ್ತ್ರಾಯಫಟ್) ಕರತಲ (ಅಂಗೈ) ಕರಪೃಷ್ಠ (ಕೈಹಿಂಭಾಗ) ಗಳಲ್ಲಿ ಶುದ್ಧಿಯನ್ನು ಮಾಡಿ,

ತತ್ಸವಿತುರ್ವರೇಣ್ಯಂ, ಭರ್ಗೋದೇವಸ್ಯಧೀಮಹಿ, ಧಿಯೋ ಯೋನಃ ಪ್ರಚೋದಯಾತ್, ಎಂದು ಗಾಯತ್ರಿಯಿಂದ ಮೊ

ಳಕ್ಕೆಮೊದಲು ಅಂಗುಳ್ಯಗ್ರಪರ್ಯಂತ ಪರ್ಯಾಯವಾಗಿ ಕರಸ್ಪರ್ಶರೂಪ ವಾದ ವ್ಯಾಪಕನ್ಯಾಸವಂಮಾಡಿ ಪ್ರಣವದಿಂದ ಪ್ರಕೋಷ್ಠ (ಮೊಣಕೈ ಕೆಳಗಡೇ ಮುಂಗೈವರಿಗೂ) ಪರ್ಯಂತವಾಗಿ ಹಸ್ತತಲಗಳನ್ನೂ ಹಸ್ತಗಳ ಹಿಂಭಾಗಗಳನ್ನೂ ಪರ್ಯಾಯವಾಗಿ ಸ್ಪರ್ಶಮಾಡಿ ಹಸ್ತತಲಗಳಲ್ಲಿ ಪ್ರಣ ವವನ್ನು ಬರೆದು,

ಓಂಭೂಃ ಅಂಗುಷ್ಠಾಭ್ಯಾಂನಮಃ, ಎಂದು ಅಂಗುಷ್ಠಗಳಲ್ಲಿ ಮೂಲಾ ರಭ್ಯ ಅಗ್ರಪರ್ಯಂತ ತರ್ಜನೀಬೆರಳುಗಳಿಂದ ನ್ಯಾಸಮಾಡಿ ಹೀಗೆಯೇ ಮುಂದೆಯೂ ತಿಳಿಯತಕ್ಕದ್ದು.

ಓಂ ಭುವಃ ತರ್ಜನೀಭ್ಯಾಂನಮಃ, ಎಂದು ತರ್ಜನೀ ಬೆರಳುಗಳಲ್ಲಿ ಅಂಗುಷ್ಠಗಳಿಂದ ನ್ಯಾಸಮಾಡಿ (ಸ್ಪರ್ಶಮಾಡುವುದೆಂದರ್ಥವು) ಹೀಗೆ ಯೇ ಮುಂದೆಯೂ ತಿಳಿಯುವುದು.

ಓಗ್ಂಸುವಃ ಮಧ್ಯಮಾಭ್ಯಾಂನಮಃ, ಎಂದು ಮಧ್ಯಮ ಬೆರಳುಗಳಲ್ಲಿ ಅಂಗುಷ್ಠಗಳಿಂದ ನ್ಯಾಸಮಾಡಿ, ಓಂತತ್ಸವಿತುರ್ವರೇಣ್ಯಂ ಅನಾಮಿಕಾ ಭ್ಯಾನಮಃ, ಎಂದು ಅನಾಮಿಕಾಬೆರಳುಗಳಲ್ಲಿ ಅಂಗುಷ್ಠಗಳಿಂದ ನ್ಯಾಸ ಮಾಡಿ, ಓಂ ಭರ್ಗೋದೇವಸ್ಯಧೀಮಹಿ, ಕನಿಷ್ಠಿಕಾಭ್ಯಾಂನಮಃ ಎಂದು ಕನಿಷ್ಠಿಕಾಬೆರಳುಗಳಲ್ಲಿ ಅಂಗುಷ್ಠಗಳಿಂದ ನ್ಯಾಸಮಾಡಿ ಓಂ ಧಿಯೋ ಯೋನಃ ಪ್ರಚೋದಯಾತ್ ಕರತಲಕರಪೃಷ್ಠಾಭ್ಯಾಂನಮಃ, ಎಂದು ಕರತಲಕರಪೃಷ್ಠಗಳಲ್ಲಿ ಸ್ಪರ್ಶಮಾಡಿ, ಹೀಗೆ ಹಸ್ತನ್ಯಾಸವಂಮಾಡಿ ಅನಂತರ ಗಾಯತ್ರಿಯಿಂದ ಹಸ್ತಗಳಿಂದ ಶಿರಃಪ್ರಭೃತಿ ಪಾದಪರ್ಯಂತ ತನ್ನ ಎರಡುಪಾರ್ಶ್ವಗಳಲ್ಲಿಯೂ ಸ್ಪರ್ಶರೂಪವಾದ ವ್ಯಾಪಕನ್ಯಾಸವಂ ಮಾಡಿ, ಓಂ ಭೂಃ ಜ್ಞಾನಾಯಹೃದಯಾಯನಮಃ, ಎಂದು ಅಂಗುಷ್ಠ ಯುಕ್ತ ತರ್ಜನೀಬೆರಳಿನಿಂದ ಹೃದಯದಲ್ಲಿ ನ್ಯಾಸಮಾಡಿ ಓಂ ಭುವಃ ಐಶ್ವರ್ಯಾಯಶಿರಸೇಸ್ವಾಹಾ, ಎಂದು ಅಂಗುಷ್ಠರಹಿತವಾದ ನಾಲ್ಕು ಬೆರ ಳುಗಳಿಂದ ಸಿರಸ್ಸಿನಲ್ಲಿ ನ್ಯಾಸಮಾಡಿ, ಓಂ ಸುವಃ ಶಕ್ತ್ಯೈಶಿಖಾಯೈವ ಷಟ್ ಎಂದು ಅಂಗುಷ್ಠನಾಳದಿಂದ ಅಧೋಮುಖವಾದ ಮುಷ್ಟಿಯಿಂದ ಶಿಖಾ (ಗಂಟುಹಾಕಿದ ಜುಟ್ಟು) ಮಧ್ಯದಲ್ಲಿ ನ್ಯಾಸಮಾಡಿ, ಓಂ ತತ್ಸವಿ ತುಃ ವರೇಣ್ಯಂ ಬಲಾಯಕವಚಾಯಹುಂ, ಎಂದು ಕಂಠವನ್ನು ಆರಂ

ಭೆನ ಕಟಿ (ಸೊಂಟ) ಪರ್ಯಂತವಾಗಿ ಕವಚದೋಪಾದಿಯಲ್ಲಿ ಹಸ್ತಗಳಿಂದ ಸ್ಪರ್ಶಮಾಡಿ, ಓಂ ಭರ್ಗೋದೇವಸ್ಯ ಧೀಮಹಿ, ತೇಜಸೇ ನೇತ್ರಾಭ್ಯಾಂ ವೌಷಟ್, ಎಂದು ತರ್ಜನೀ ಮಧ್ಯಮಬೆರಳುಗಳ ಅಗ್ರದಿಂದ ಏಕಕಾಲದಲ್ಲಿ ನೇತ್ರದ್ವಯದಲ್ಲಿ ನ್ಯಾಸಮಾಡಿ, ಓಂ ಧಿಯೋಯೋನಃ ಪ್ರಚೋದಯಾತ್ ವೀರ್ಯಾಯಾಸ್ತ್ರಾಯಫಟ್, ಎಂದು ಅಸ್ತ್ರಮಂತ್ರಸಹಿತವಾದ ಛೋಟಿ (ಚಿಟಿಕೆಹಾಕುವುದು) ದಿಂದ ದಿಗ್ಬಂಧನವಂ ಮಾಡುವುದು. ಹೀಗೆ ಅಂಗನ್ಯಾಸವಂ ಮಾಡಿದನಂತರ,

ಧ್ಯಾನಂ॥ ಯೋದೇವಸ್ಸವಿತಾಸ್ಮಾಕಂಧಿಯೋಧರ್ಮಾದಿಗೋಚರಾಃ।
ಪ್ರೇರಯೇತ್ತಸ್ಯಯದ್ಭರ್ಗಃ ತದ್ವರೇಣ್ಯಮುಪಾಸ್ಮಹೇ ॥

ಈ ಶ್ಲೋಕಾರ್ಥವು ಗಾಯತ್ರ್ಯರ್ಥ ಲೇಖನಾನಂತರ ಬರೆಯಲ್ಪಡುವುದು.

ಆದಿತ್ಯಮಂಡಲೇಧ್ಯಾಯೇತ್ಪರಮಾತ್ಮನಮವ್ಯಯಂ। ವಿಷ್ಣುಂ ಚತುರ್ಭುಜಂರಕ್ತಪಂಕಜಾಸನಮಧ್ಯಗಂ ॥ ಕಿರೀಟಹಾರಕೇಯೂರ ಕಟಕಾದಿವಿಭೂಷಿತಂ ॥ ಶ್ರೀವತ್ಸವನಮಾಲಾಶ್ರ ತುಲಸೀಕೌಸ್ತುಭೋಜ್ವಲಂ। ಹರಿಂಪೀತಾಂಬರಧರಂ ಶಂಖಚಕ್ರ ಗದಾಧರಂ। ಪ್ರಸನ್ನವದನಂ ರತ್ನಕುಂಡಲೈರ್ಮಂಡಿತಾನನಂ ॥ ಸರ್ವರತ್ನಸಮಾಯುಕ್ತ ಸರ್ವಾಭರಣಭೂಷಿತಂ ॥ ಏವಂ ಭಗವಂತಂಧ್ಯಾತ್ವಾ ॥

ತಾ॥ ನಾಶರಹಿತನಾಗಿಯೂ, ಸರ್ವವ್ಯಾಪಿಯಾಗಿಯೂ, ಚತುರ್ಭುಜವುಳ್ಳವನಾಗಿಯೂ, ಕಮಲಾಸನ ಮಧ್ಯವರ್ತಿಯಾಗಿಯೂ, ಕಿರೀಟ, ಮುಕ್ತಾಹಾರ, ಬಾಹುಪುರಿ, ಕೈಬಳೆಯೇ ಮೊದಲಾದ ಆಭರಣಗಳಿಂದ ಅಲಂಕೃತನಾಗಿಯೂ, ಶ್ರೀವತ್ಸವೆಂಬ ಮಚ್ಚೆಯಿಂದಲೂ, ವನಮಾಲಿಕಾ ತುಲಸೀಮಾಲಿಕೆಗಳಿಂದಲೂ, ಕೌಸ್ತುಭಮಣಿಯಿಂದಲೂ ಪ್ರಕಾಶಮಾನನಾಗಿಯೂ, ಪೀತಾಂಬರಧಾರಿಯಾಗಿಯೂ, ಶಂಖಚಕ್ರಗದಾಧಾರಿಯಾಗಿಯೂ, ನಿರ್ಮಲವಾದ ಮುಖಮಂಡಲವುಳ್ಳವನಾಗಿಯೂ, ರತ್ನಖಚಿತವಾದ ಕುಂಡಲಗಳಿಂದ ಅಲಂಕೃತವಾದ ಮುಖವುಳ್ಳವನಾಗಿಯೂ, ಸರ್ವ

ವಿಧ (ನವವಿಧ) ವಾದ ರತ್ನಗಳಿಂದ ಕೂಡಿರುವ ಸರ್ವಾಭರಣಗಳಿಂದ ಭೂಷಿತನಾಗಿಯೂ ಇರುವ ಭಗವಂತನಾದ ಪರಮಾತ್ಮನನ್ನ ಸೂರ್ಯ ಮಂಡಲದಲ್ಲಿ ಧ್ಯಾನಿಸುವುದು.

ಅನಂತರ ಸ್ವಲ್ಪವಾಗಿ ಬಗ್ಗಿಸಲ್ಪಟ್ಟ ಬೆರಳುಗಳ ತುದಿಯು ಳ್ಳೊಳಗೆ ಹೇಗೋ ಹಾಗೆ ಪರಸ್ಪರವಾಗಿ ಕೂಡಿರುವ, ಬೆರಳುಗಳುಳ್ಳ ಹಸ್ತದ್ವಯವನ್ನು ಮುಖಪರ್ಯಂತರ ಎತ್ತಿ, ಬಲಗೈಯಿನ ಕನಿಷ್ಠಿಕಾ (ಚಿಕ್ಕ) ಬೆರಳಿನ ಮೂಲವನ್ನ ಆರಂಭಿಸಿ ಪ್ರದಕ್ಷಿಣವಾಗಿ ಅನಾಮಿಕಾ ಬೆರಳಿನ ಮೂಲಪರ್ಯಂತವಾಗಿ ಗಣನೆಯಿಂದ ಸಂಕಲ್ಪಾನುಗುಣವಾಗಿ ಪಂಚಾವಸಾನವುಳ್ಳ ಜಪವನ್ನು (ಓಂ—ಭೂರ್ಭುವಸ್ಸುವಃ—ತತ್ಸವಿತುರ್ವರೇಣಿಯಂ—ಭರ್ಗೋದೇವಸ್ಯಧೀಮಹಿ—ಧಿಯೋಯೋನಃಪ್ರಚೋದಯಾತ್) ಮಾಡತಕ್ಕದ್ದು.

ಪ್ರತಿದಶಸಂಖ್ಯಾ ಜಪಾನಂತರ ವಾಮ (ಎಡ) ಹಸ್ತದ ತರ್ಜನೀ ಬೆರಳಿನ ಮೂಲಪರ್ವ (ಗೆಣ್ಣು) ರಭ್ಯ ಪ್ರತಿಯೊಂದು ಗೆಣ್ಣಿನಲ್ಲಿಯೂ ಪ್ರದಕ್ಷಿಣವಾಗಿ ವಾಮಾಂಗುಷ್ಠಾಗ್ರವನ್ನ ಇಟ್ಟು ಗಣನೆಮಾಡತಕ್ಕದ್ದು.

(ಸೌಕರ್ಯಕ್ಕಾಗಿ ಪುನಃ ಮಂತ್ರವು ಬರಿಯಲ್ಪಡುವುದು.)

ಮೂಲಂ॥ ಆಯಾತುವರದಾದೇವೀ, ಅಕ್ಷರಂಬ್ರಹ್ಮಸಮ್ಮಿತಂ। ಗಾಯತ್ರೀಂಛಂದಸಾಮ್ಮಾತೇದಂಬ್ರಹ್ಮಜುಷಸ್ವನಃ, ಓಜೋಽಸಿಸಹೋಽಸಿ ಬಲಮಸಿಭ್ರಾಜೋಽಸಿ ದೇವಾನಾಂ ಧಾಮನಾಮಾಸಿ ವಿಶ್ವಮಸಿ ವಿಶ್ವಾಯುಸ್ಸರ್ವಮಸಿ ಸರ್ವಾಯುರಭಿಭೂರೋಂಗಾಯತ್ರೀ ಮಾವಾಹಯಾಮಿ।

ಪದಂ॥ ಆಯಾತು, ವರದಾ, ದೇವೀ, ಅಕ್ಷರಂ, ಬ್ರಹ್ಮಸಮ್ಮಿತಂ, ಗಾಯತ್ರೀಂ, ಛಂದಸಾಂ, ಮಾತಾ, ಇದಂ, ಬ್ರಹ್ಮ, ಜುಷಸ್ವ, ನಃ, ಓಜಃ, ಅಸಿ, ಸಹಃ, ಅಸಿ, ಬಲಂ, ಅಸಿ, ಭ್ರಾಜಃ, ಅಸಿ, ದೇವಾನಾಂ, ಧಾಮ, ನಾಮ, ಅಸಿ, ವಿಶ್ವಂ, ಅಸಿ, ವಿಶ್ವಾಯುಃ, ಸರ್ವಂ, ಅಸಿ, ಸರ್ವಾಯುಃ, ಅಭಿಭೂಃ, ಓಂ, ಗಾಯತ್ರೀಂ, ಆವಾಹಯಾಮಿ,

ಅರ್ಥ|| ವರದಾ-ಆಶ್ರಿತರುಗಳಿಗೆ ಇಷ್ಟಾರ್ಥಫಲಪ್ರದೆಯಾದ ದೇವೀ-ಬ್ರಹ್ಮಾತ್ಮಿಕೆಯಾದ ಗಾಯತ್ರಿಯು, ಆಯಾತು-ನಮ್ಮ ಅನುಗ್ರಹಾರ್ಥ ವಾಗಿ ಸಾಕ್ಷಾತ್ತಾಗಿ ಆಸೀರ್ಭವಿಸಲಿ, (ಆ ಗಾಯತ್ರಿಯು ಎಂತಹವಳೆಂದರೆ) ಅಕ್ಷರಂ-ನಾಶರಹಿತೆಯಾಗಿಯೂ, ಬ್ರಹ್ಮ-ವೇದಕ್ಕೆ, ಸಮ್ಮಿತಂ-ಸಮಾನಳಾಗಿಯೂ, ಇರುವಳ ಅಥವಾ ಬ್ರಹ್ಮ-ಪ್ರಣವಕ್ಕೆ, ಸಮ್ಮಿತಂ-ಸಮಾನಳಾದವಳು, ಅಂದರೆ ಪ್ರಣವದೋಪಾದಿಯಲ್ಲಿ ಸರ್ವಾರ್ಥ ಸಂಗ್ರಾಹಿಕೆ ಎಂದು ಭಾವವು. ಅಥವಾ, ಬ್ರಹ್ಮ-ಪರಮಾತ್ಮನೊಡನೆ, ಸಮ್ಮಿತಂ-ಸಮಾನೆಯಾದವಳು (ಸರ್ವ ಜಗತ್ಕಾರಣನಾದ ಪರಮಾತ್ಮನೋಪಾದಿಯಲ್ಲಿ ಸರ್ವವಾಙ್ಮಯಭೂತವಾದ ವೇದಕ್ಕೆ ಮಾತೃ ಎಂದು ತಾತ್ಪರ್ಯ) ಅಂತಹ, ಛಂಧಸಾಂ-ತ್ರಿಷ್ಟುಪ್ ಮೊದಲಾದ ಛಂದಸ್ಸುಗಳಿಗೆ (ವೇದಗಳಿಗೆ) ಮಾತಾ-ಪ್ರಧಾನೆಯಾದ, ಗಾಯತ್ರೀಂ-ಗಾಯತ್ರಿಯಾದ ನೀನು, ನಃ-ನಮ್ಮಗಳ, ಇದಂ-ಈ, ಬ್ರಹ್ಮ-ಸ್ತೋತ್ರವನ್ನು, ಜುಷಸ್ವ-ಗ್ರಹಿಸು, ಬಜೋಸಿ-ಇಂದ್ರಿಯಗಳಿಗೆ ಶಕ್ತಿಯಾಗಿರುವೆ, ಸಹೋಸಿ-ವೇಗವುಳ್ಳವುಗಳಿಗೆ ವೇಗವಾಗಿರುವೆ, ಬಲಮಸಿ-ಭರಿಸತಕ್ಕ ಬಲವಾಗಿರುವೆ, ಭ್ರಾಜೋಸಿ-ಪ್ರಕಾಶ ಉಳ್ಳವರಿಗೆ ಪ್ರಕಾಶವಾಗಿರುವೆ, ದೇವಾನಾಂ-ದೇವತೆಗಳಿಗೆ, ನಾಮ-ಪ್ರಸಿದ್ಧವಾದ, ಧಾಮಾಸಿ-ಸ್ಥಾನವಾಗಿರುವೆ, ವಿಶ್ವಮಸಿ-ಸರ್ವವ್ಯಾಪಕನಾದ ವಿಷ್ಣುವೋಪಾದಿಯಲ್ಲಿ ಸರ್ವಾಕ್ರಮಣಸಮರ್ಥೆಯಾಗಿರುವೆ, ವಿಶ್ವಾಯುಃ-ವಿಶ್ವ-ಸಮಸ್ತ ಭೂತಗಳ, ಆಯುಃ-ಆಯುರ್ವರ್ಧಕೆಯಾಗಿರುವೆ, ಸರ್ವಮಸಿ-ಎಲ್ಲರಿಗೂ ನಿರ್ವಾಹಕಳಾಗಿರುವೆ, ಸರ್ವಾಯುಃ-ಸಕಲರಿಗೂ ಕಾಲವ್ಯವಸ್ಥೆಯಂ ಮಾಡುತ್ತೀಯೆ, ಅಭಿಭೂಃ-ಸಮಸ್ತಪಾಪಗಳನ್ನೂ ಹೋಗಲಾಡಿಸುವೆ. ಇಂತಹ, ಗಾಯತ್ರೀಂ-ಗಾಯತ್ರಿಯಾದ ನಿನ್ನನ್ನು, ಓಂ-ಓಂ ಎಂಬ ಮಂತ್ರದಿಂದ, ಆವಾಹಯಾಮಿ-ನನ್ನಲ್ಲಿ ಬರುವಂತೆ ಪ್ರಾರ್ಥಿಸುವೆನು.

ತಾ|| ಪರಮಾತ್ಮನಾದ ನಾರಾಯಣನೇ ಗಾಯತ್ರೀ ಪ್ರತಿಪಾದ್ಯನೆಂದು ನಿರ್ವಹಿಸಲ್ಪಟ್ಟಿರುವುದರಿಂದ ಆವಾಹನದಲ್ಲಿಯೂ ಪರಮಾತ್ಮನಿಗೆ ಪ್ರಾಧಾನ್ಯವು ಹೇಳಲ್ಪಟ್ಟಿತು.

ಅಸ್ಯೈವಮಯೋಜನಾಂತರಂ ॥ ದೇವೀ-ದೇವಪತ್ನಿಯಾದ ಲಕ್ಷ್ಮಿಯೇ ವರದಾ-ಇಷ್ಟಾರ್ಥವಂ ಕೊಡುವಳಾಗಿ, ಆಯಾತು-ಬರುವಳಾಗು, ಅಕ್ಷರಂ-ನಾಶರಹಿತವಾದ (ಅಪಕ್ಷಯ, ವಿನಾಶ, ಪರಿಣಾಮ, ವೃದ್ಧಿ, ವರ್ಜಿತವಾಗಿ ಅವಿಕಾರಾದಿ ಶಬ್ದವಾಚ್ಯವಾದ) ಸಮ್ಮಿತಂ-ಚೆನ್ನಾಗಿ (ಸರ್ವಕಾರಣ, ಸರ್ವಾತ್ಮಕ, ಸರ್ವಶಕ್ತಿ, ಸರ್ವವ್ಯಾಪಿ, ಸರ್ವಜ್ಞ, ಸರ್ವೇಶ್ವರತ್ವಾದಿ ಸರ್ವಕಲ್ಯಾಣಗುಣಾಕರವೆಂಬದಾಗಿ ಸರ್ವಶೃತಿಸ್ಮೃತ್ಯಾದಿಗಳಿಂದ) ತಿಳಿಯಲ್ಪಟ್ಟ ಬ್ರಹ್ಮ, ನಾರಾಯಣ ಪರಂಬ್ರಹ್ಮ, ಎಂಬದಾಗಿ ಶ್ರುತಿಪ್ರಸಿದ್ಧವಾದ ಪರಂಬ್ರಹ್ಮವೂ, (ವೇ) ವರದಂ-ಇಷ್ಟಾರ್ಥವನ್ನ ಕೊಡುವದಾಗಿ, ಆಗಚ್ಛತು-ಬರಲಿ, (ಛಾ) ಛಂದಸಾಂ-ಉಷ್ಣಿಗಾದಿ ಛಂದಸ್ಸುಗಳಿಗೆ, ಮಾತಾ-ಮಾತೆಯಾದ, ಗಾಯತ್ರಿ-ಗಾಯತ್ರಿಯೇ, ನಃ - ನಮ್ಮಗಳ, ಪುರೋವರ್ತಿನಿಯಾದ, ಈಂ-ಅಕಾರಶಬ್ದವಾಚ್ಯನಾದ ನಾರಾಯಣನಿಗೆ ಪತ್ನಿಯಾಗಿ ಈಕಾರಶಬ್ದವಾಚ್ಯೆಯಾದ ಲಕ್ಷ್ಮಿಯನ್ನೂ, ಇದಂಬ್ರಹ್ಮ-ಈ ಪುರೋವರ್ತಿ (ಮುಂದುಗಡೇ ಇರುವ) ಯಾದ ಬ್ರಹ್ಮನನ್ನೂ ಜುಷಸ್ವ-ಸಂತೋಷಪಡಿಸು. ನಾವು ಮಾಡತಕ್ಕ ಜಪದಿಂದ ಲಕ್ಷ್ಮೀನಾರಾಯಣರುಗಳನ್ನ ಸಂತೋಷಪಡಿಸು.

ಹೀಗೆ ಅಭಿಮುಖನಾದ ಶ್ರೀಯಃಪತಿಯನ್ನ ಹೃದಯಾರವಿಂದದಲ್ಲಿ ನೋಡುವನಾಗಿ ಸಂತುಷ್ಟನಾಗಿ ಪ್ರೀತಿಯಿಂದ ಉತ್ತರಮಂತ್ರದಿಂದ ಜಪಮಾಡುವನು ಸ್ತೋತ್ರಮಾಡುವನು.

ಓ ಜೋಸಿ, ಭೂ-ಪರ್ವತಾದಿ ಧಾರಣಶಕ್ತಿಯುಳ್ಳವನಾಗಿರುವೆ, ಸಹೋಸಿ-ಪರರನ್ನು ತಿರಸ್ಕರಿಸುವ ಶಕ್ತಿಯುಳ್ಳವನಾಗಿರುವೆ, ಬಲಮಸಿ-ಪ್ರಾಣಾದಿ ಬಲವುಳ್ಳವನಾಗಿರುವೆ, ಭ್ರಾಜೋಸಿ-ಶರೀರ ಕಾಂತಿಯುಳ್ಳವನಾಗಿರುವೆ, ದೇವಾನಾಂಧಾಮನಾಮಾಸಿ-ಇಂದ್ರಾದಿ ದೇವತೆಗಳಿಗೆ ಸುಖಸ್ಥಾನವಾಗಿಯೂ ಇಂದ್ರಾದಿ ನಾಮಕರ್ತೃವಾಗಿಯೂ ಇರುವೆ, ವಿಶ್ವಮಸಿ-ವಿಶ್ವಂ-ವಿಷ್ಣುಃ, ಇತ್ಯಾದಿ ಸಹಸ್ರನಾಮ ಉಳ್ಳವನಾಗಿದ್ದೀಯಾ, ವಿಶ್ವಾಯುಃ-ವಿಶ್ವ-ಪ್ರಪಂಚಕ್ಕೆ, ಆಯುಃ-ಆಧಾರಭೂತನು (ಗತಿಯು) ಸರ್ವಮಸಿ-ಸರ್ವಕಾರ್ಯಪ್ರಪಂಚಾನುಪ್ರವೇಶದಿಂದ ಸರ್ವಾತ್ಮಕನಾಗಿದ್ದೀಯೆ, ಸರ್ವಾಯುಃ-ಸರ್ವಪ್ರಪಂಚಕ್ಕೂ ಜೀವನಭೂತನಾದವನೇ, ಅಭಿ

ಭೂ-ಜಪ ವಿಘ್ನಕಾರಿಗಳಾದ ಪಾಪಗಳಿಗೆ ನಾಶಕರನಾಗಿದ್ಧೀಯೆ, ಓಂ-ಈ ಭಗವಂತನಾದ ನಿನಗೆ ಶೇಷಭೂತನಾದ ನಾನು, ಗಾಯತ್ರೀಂ-ನಿನ್ನ ಸಂತೋಷಕ್ಕೆ ಹೇತುವಾದ ಜಪದೇವತೆಯನ್ನು, ಆವಾಹಯಾಮಿ - ಜಪದಲ್ಲಿ ಅನುಸಂಧಾನಕ್ಕಾಗಿ ಕರೆಯುವೆನು (ಅದಕ್ಕೆ ಅನುಮತಿಯನ್ನು ಕೊಡು ಎಂದು ಭಾವವು.)

ಗಾಯತ್ರ್ಯಾವಾಹನಧ್ಯಾನಾನಂತರ ಪಂಚಾವಸಾನವಾಗಿ (ಓಂ-ಭೂರ್ಭುವಸ್ಸುವಃ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ ಧಿಯೋ ಯೋನಃಪ್ರಚೋದಯಾತ್)ರಹಸ್ಯವಾಗಿ ಜಪವನ್ನ ಮಾಡಬೇಕು.

ತ್ರಿಃಪ್ರಾಣಾನಾಯಮ್ಯ, ಪ್ರಾತಸ್ಸಂಧ್ಯೋಪಸ್ಥಾನಂಕರಿಷ್ಯೇ, ಎಂದು ಸಂಕಲ್ಪಮಾಡಿ, ಉತ್ತಮಇತ್ಯನುವಾಕಸ್ಯ ವಾಮದೇವ ಋಷಿಃ, ಅನುಷ್ಟುಪ್‌ಛಂದಃ, ಗಾಯತ್ರೀದೇವತಾ, ಗಾಯತ್ರ್ಯುದ್ವಾಸನೇವಿನಿಯೋಗಃ,

ಉತ್ತಮೇಶಿಖರೇದೇವಿ ಭೂಮ್ಯಾಂಪರ್ವತಮೂರ್ಧನಿ, ಬ್ರಾಹ್ಮಣೇಭ್ಯೋಹ್ಯನುಜ್ಞಾನಂ ಗಚ್ಛದೇವಿಯಥಾಸುಖಂ,

ಎಂದು ಗಾಯತ್ರ್ಯುದ್ವಾಸನವಂಮಾಡಿ,

ಪದಂ॥ ಉತ್ತಮೇ, ಶಿಖರೇ, ದೇವಿ, ಭೂಮ್ಯಾಂ, ಪರ್ವತಮೂರ್ಧನ್ನಿ, ಬ್ರಾಹ್ಮಣೇಭ್ಯಃ, ಹಿ, ಅನುಜ್ಞಾನಂ, ಗಚ್ಛ, ದೇವಿ, ಯಥಾಸುಖಂ,

ಅರ್ಥ॥ ಹೇದೇವಿ-ಓ ಗಾಯತ್ರಿಯೆ, ಪರ್ವತಮೂರ್ಧನಿ-ಪರ್ವತ-ಮೇರ್ವಾದಿಪರ್ವತಗಳ, ಮೂರ್ಧನಿ-ಊರ್ಧ್ವಭಾಗದಲ್ಲಿರುವ, ಉತ್ತಮೇ-ಶ್ರೇಷ್ಠವಾದ (ಭಾಗವತರುಗಳಿಂದ ಪರಿಗ್ರಹೀತವಾದ) ಶಿಖರೇ-ಶಿಖರದಲ್ಲಿ, ಯಥಾಸುಖಂ-ಹೇಗೆ ಸುಖವೋ ಹಾಗೆ, ಗಚ್ಛ-ಹೊರಟುಹೋಗು, ದೇವಿ-ಸರತಿಶಯಕಾಂತಿಯುಳ್ಳವಳೇ, ಬ್ರಾಹ್ಮಣೇಭ್ಯಃ-ಬ್ರಾಹ್ಮರುಗಳಿಂದ, ಅನುಜ್ಞಾನಂ-ಅನುಜ್ಞೆಯು, ಕೃತಂ-ಮಾಡಲ್ಪಟ್ಟಿತು.

ತಾ॥ 'ಅಹರಹಸ್ಸಂಧ್ಯೋಪಾಸನಾನಂತರ ಕರ್ತವ್ಯವಾದ ಅಭಿಗಮನ' ಉಪಾದನಾದಿಗಳಿಗೆ ನಿಯಮಿಸಬೇಕೆಂದು ತಾತ್ಪರ್ಯ.

ಅಥವಾ, ತಮೋಗುಣದಿಂದ ಬಿಡಲ್ಪಟ್ಟ ಪುಣ್ಯತಮವಾದ ಶಿಖರದಲ್ಲಿಯೋ, ಭೂಮಿಯಲ್ಲಿಯೋ, ಪರ್ವತಾಗ್ರದಲ್ಲಿಯೋ, ಯಾವಸ್ಥಳವಂ ಹೊಂದಿದ್ದಾರೆ ನಿನಗೆ ಸುಖವಾಗುವುದೋ ಅಂತಹ ಸ್ಥಾನವಂ ಕುರಿತು ಹೊರಟುಹೋಗಿಬಾ, ನಮ್ಮಿಂದ ಅನುಜ್ಞೆಯು ಕೊಡಲ್ಪಟ್ಟಿರುವದು. ಬ್ರಾಹ್ಮಣೋದ್ದೇಶ್ಯವಾಗಿಯೋ (ಪುನಃ ಬ್ರಾಹ್ಮಣರುಗಳ ಸಮೀಪವಂ ಹೊಂದುವದಕ್ಕೆ ಎದುರುನೋಡುವಳಾಗಿಯೆ) ಉತ್ತಮವಾದ ಸ್ಥಾನದಲ್ಲಿ ಇರು.

ಉತ್ತರತ್ರ ಅನುಷ್ಠಿಸಬೇಕಾದ ಅಭಿಗಮನಾದಿಗಳಿಗೋಸ್ಕರ ಅನುಜ್ಞಾಪುರಸ್ಸರವಾಗಿ ಗಾಯತ್ರ್ಯುದ್ವಾಸನವೆಂದು ಭಾವವು.

> ಮಿತ್ರಸ್ಯೇತ್ಯಾದ್ಯುಪಸ್ಥಾನಮಂತ್ರಾಣಾಂ, ಭೀರುಟ್ ಗಾಯತ್ರೀ, ತ್ರಿಷ್ಟುಪ್, ಛಂದಾಂಸಿ, ಮಿತ್ರೋದೇವತಾ, ಇತಿನ್ಯಸ್ಯ, ಪ್ರಾತಸ್ಸಂಧ್ಯೋಪಸಾನೇ ವಿನಿಯೋಗಃ, ಇತ್ಯುಕ್ತ್ವಾ

> ಮಿತ್ರಸ್ಯಚರ್ಷಣೀಧೃತಶ್ರವೋ ದೇವಸ್ಯಸಾನಸಿಂ
>
> ಸತ್ಯಂಚಿತ್ರಶ್ರವಸ್ತಮಂ, ಮಿತ್ರೋಜನಾನ್ಯಾತಯ
>
> ತಿ ಪ್ರಜಾನನ್ಮಿತ್ರೋದಾಧಾರಪೃಥಿವೀಮುತದ್ಯಾಂ,ಮಿ
>
> ತ್ರಃಕೃಷ್ಟೀರನಿಮಿಷಾಭಿಚಷ್ಟೆ ಸತ್ಯಾಯಹವ್ಯಂಘೃತ
>
> ವದ್ವಿಧೇಮ, ಪ್ರಸಮಿತ್ರಮರ್ತೋ ಅಸ್ತುಪ್ರಯ

ಸ್ವಾನ್ಯಸ್ತ ಆದಿತ್ಯಶಿಕ್ಷತಿವ್ರತೇನ, ನಹನ್ಯತೇ ನಜೀಯತೇ
ತ್ವೋತೋನೈನಮಗ್ಂಹೋ ಅಶ್ನೋತ್ಯಂತಿತೋನದೂರಾತ್,

ಇತಿಮಂತ್ರೈರರ್ಘೋದಿತಂ, ಸಹಸ್ರರಶ್ಮಿಂ, ಭಗವಂತಮಾದಿತ್ಯ ಮಂಡಲಾಂತ ಸ್ಥಮುಪಸ್ಥಾಯ.

ಪದಂ॥ ಮಿತ್ರಸ್ಯ, ಚರ್ಷಣೀಧೃತಃ, ಶ್ರವಃ, ದೇವಸ್ಯ, ಸಾನಸಿಃ, ಸತ್ಯಂ, ಚಿತ್ರಶ್ರವಸ್ತಮಂ, ಮಿತ್ರಃ, ಜನಾನ್, ಯಾತಯತಿ, ಪ್ರಜಾನನ್, ಮಿತ್ರಃ, ದಾಧಾರ, ಪೃಥಿವೀಂ, ಉತ, ದ್ಯಾಂ, ಮಿತ್ರಃ, ಕೃಷ್ಟೀಃ, ಅನಿಮಿಷಾ, ಅಭಿಚಷ್ಟೇ, ಸತ್ಯಾಯ, ಹವ್ಯಂ, ಘೃತವತ್, ವಿಧೇಮ, ಪ್ರ, ಸಃ, ಮಿತ್ರ, ಮರ್ತಃ, ಅಸ್ತು, ಪ್ರಯಸ್ವಾನ್, ಯಃ, ತೇ, ಆದಿತ್ಯ, ಶಿಕ್ಷತಿ, ವ್ರತೇನ, ನ, ಹನ್ಯತೇ, ನ, ಜೀಯತೇ, ತ್ವಾ, ಊತಃ, ನ, ಏನಂ, ಆಗ್ಂ, ಹಃ, ಅಶ್ನೋತಿ, ಅಂತಿತಃ, ನ, ದೂರಾತ್.

ಅರ್ಥ॥ ಚರ್ಷಣೀಧೃತಃ, ಚರ್ಷಣೀ-ಜ್ಞಾನಿಗಳನ್ನು, ಧೃತಃ-ಪೋಷಿಸುವನಾಗಿಯೂ, ದೇವಸ್ಯ-ಕ್ರೀಡಾಯುಕ್ತನಾಗಿಯೂ, ಮಿತ್ರಸ್ಯ-ಸರ್ವರಕ್ಷಕನಾದ ಅಪರಿಚ್ಛಿನ್ನ ಮಹಿಮೆಯುಳ್ಳ ಪರಮಾತ್ಮನ, ಶ್ರವಃ-ಯಶಸ್ಸು, ಸಾನಸಿಃ, ಸಾ-ಚೆನ್ನಾಗಿ, ನಸಿಂ-ಸೇವಿಸತಕ್ಕದ್ದು. ಆಯಶಸ್ಸು ಎಂತಹದು ಎಂದರೆ, ಸತ್ಯಂ-ಕಾಲಾಂತರದಲ್ಲಿಯೂ ನಾಶರಹಿತವಾಗಿಯೂ, ಚಿತ್ರಶ್ರವಸ್ತಮಂ-ಆಶ್ಚರ್ಯವಾದ ಭಗವದ್ವ್ಯಾಪಾರವಿಷಯಕವಾದಶ್ರವಣಯುಕ್ತ ಕೀರ್ತನವುಳ್ಳ ಅತ್ಯಧಿಕ ಸುಂದರವಾಗಿಯೂ ಇರುವುದು. ಅಂತಹ ಯಶಸ್ಸನ್ನ ಸ್ತೋತ್ರಮಾಡುವೆನು.

ಮಿತ್ರಃ-ಪರಮಾತ್ಮನು, ಜನಾನ್-ಪ್ರಾಣಿಮಾತ್ರಕ್ಕೆ [illegible] ಜನಗಳನ್ನು, ಪ್ರಜಾನನ್-[illegible] ಜನಗಳ [illegible] ಯಾತಯತಿ-ಅವರವರ ಕರ್ತ [illegible] ತನ್ನ ಗುಣಗಳಿಂದಲೇ ಪ್ರೇರಕನಾಗು [illegible] ಪೃಥಿವ್ಯಾ (ಭೂಮಿಯನ್ನು) [illegible] (ಸ್ವರ್ಗಲೋಕವನ್ನು) [illegible]

ಪೃಥಿವೀಂ-ಭೂಮಿಯನ್ನೂ, ಉತ-ಮತ್ತೇನೆಂದರೆ, ದ್ಯಾಂ-ಆಕಾಶವನ್ನೂ, ಮಿತ್ರಃ-ಪರಮಾತ್ಮನು, ದಾಧಾರ-ಧರಿಸಿದನು. ಕೃಷ್ಟೀಃ-ಪ್ರಜೆಗಳನ್ನು, ಅನಿಮಿಷಾ-ಯವೆಮುಚ್ಚದೆ (ಜಾಗರೂಕನಾಗಿ) ಮಿತ್ರಃ-ಪರಮಾತ್ಮನು, ಅಭಿಚಷ್ಟೇ-ಪ್ರಕಾಶಮಾಡುವನು, (ಜ್ಞಾನಪ್ರದಾನದಿಂದ ರಕ್ಷಿಸುವನು.)

ಸತ್ಯಾಯ-ವಿಕಾರಶೂನ್ಯನಾದ ಪರಮಾತ್ಮನಿಗೆ, ಹವ್ಯಂ-ಹವಿಸ್ಸನ್ನು, ಘೃತವತ್-ತುಪ್ಪದಿಂದ ಕಲಿಸಿ, ವಿಧೇಮ-ನಿವೇದನಮಾಡುವೆವು.

ಹೇ ಮಿತ್ರ-ಭಗವಂತನೇ, ಆದಿತ್ಯ-ಪ್ರಳಯಕಾಲದಲ್ಲಿ ಸಮಸ್ತವನ್ನೂ ಭಕ್ಷಿಸುವವನೇ, ಯಃ, ಮರ್ತಃ-ಯಾವ ಮನುಷ್ಯನು, ವ್ರತೇನ-ಪೂಜಾವ್ರತದೊಡನೆ ಕೂಡಿದವನಾಗಿ, ತೇ-ನಿನಗೋಸ್ಕರ, ಶಿಕ್ಷತಿ-ಅನ್ನಮುಂತಾದ ಪದಾರ್ಥಗಳಿಂದ ಉಪಚಾರಮಾಡುವನೋ, ಸಃ-ಆ ಮನುಷ್ಯನು, ಪ್ರ-ಅತ್ಯುತ್ಕೃಷ್ಟವಾದ, ಪ್ರಯಸ್ವಾನ್-ಅನ್ನಾದಿ ಸಂಪತ್ತುಳ್ಳವನಾಗಿ, ಅಸ್ತು-ಆಗುವನು.

ತ್ವಾ-ನಿನ್ನಿಂದ, ಉತಃ-ರಕ್ಷಿಸಲ್ಪಟ್ಟವನು, ನಹನ್ಯತೇ-ಮೃತ್ಯುವಿನಿಂದ ಕೊಡಲ್ಪಡಲಾರನು, ನಜೀಯತೇ-ಶಬ್ದಾದಿ ವಿಷಯಗಳಿಂದ ಜಯಿಸಲ್ಪಡಲಾರನು. ಏನಂ-ಈ ನಿನ್ನ ಭಕ್ತನನ್ನು, ಅಗ್‌ಂಹಃ-ಪಾಪವು, ಅಂತಿತಃ-ಈ ಜನ್ಮದಲ್ಲಿಯೂ, ದೂರಾತ್-ಪೂರ್ವಜನ್ಮದಲ್ಲಿಯೂ, ನಾಶ್ನೋತಿ-ಹೊಂದಲಾರದು.

ತಾ॥ ಆಶ್ಚರ್ಯಕರವಾದ ವ್ಯಾಪಾರ ಉಳ್ಳದ್ದಾಗಿಯೂ, ಕೇಳುವವಕ್ಕೆ ಇಂಪಾಗಿಯೂ ಇರುವ ಭಗವಂತನ ಯಶಸ್ಸನ್ನ ಕೊಂಡಾಡುವೆನು.

ನಾನಾವಿಧ ಜಂತುಸಮೂಹ ಪ್ರೇರಕತ್ವವೂ, ಪೃಥಿವ್ಯಾದಿ ಸಕಲ ತತ್ವಧಾರಕತ್ವವೂ, ಅಸಂಕುಚಿತಜ್ಞಾನದಿಂದ ಸರ್ವಜಂತುಗಳನ್ನೂ ಪ್ರಕಾಶಪಡಿಸುವದೂ ಪರಮಪುರುಷ ಚಿಹ್ನಗಳು.

ಶ್ರವಸ್ತಮಂ, ಎಂಬ ವಾಕ್ಯಪರ್ಯಂತ ಭಗವಂತನನ್ನ ಕುರಿತು ವಾಚಿಕಕೈಂಕರ್ಯವೂ, 'ಮಿತ್ರೋಜನಾನ್' ಇತ್ಯಾದಿ ವಾಕ್ಯಗಳಿಂದ ಮಾನಸಿಕ ಕೈಂಕರ್ಯವೂ, ಸತ್ಯಾಯಹವ್ಯಂ, ಇತ್ಯಾದಿ ವಾಕ್ಯಗಳಿಂದ ಕಾಯಿಕ ಕೈಂಕರ್ಯವೂ ಹೇಳಲ್ಪಟ್ಟಿತು.

ಯಾವಮನುಷ್ಯನು ಭಗವದಾರಾಧನ ಮಾಡದೇ ಭೋಜನ ಮಾಡ ಬಾರದೆಂಬ ನಿಯಮವುಳ್ಳವನಾಗಿ ಭಗವದಾರಾಧನವಂ ಮಾಡುವನೋ, ಅವನಿಗೆ ಭಗವಂತನಾದ ಪುರುಷೋತ್ತಮನು ಪ್ರಕೃಷ್ಟವಾದ ಅನ್ನವನ್ನು (ಬ್ರಹ್ಮಾನುಭವವನ್ನು) ಕೊಡುವನು.

ಯಾವನ್ಮೋಕ್ಷಪರ್ಯಂತರ ಆಧ್ಯಾತ್ಮಿಕಾದಿ ದುಃಖಗಳ ಬೇಸಯಿಂದ ಭಗವಂತನೇ ರಕ್ಷಿಸುವನು. ಉಪಾಯಾನುಷ್ಠಾನಾನಂತರ ಭಗವದ್ಭಕ್ತಿನ ಪೂರ್ವಪುಣ್ಯಪಾಪಗಳು ನಷ್ಟವಾಗಿಹೋಗುವವು. ಉತ್ತರತ್ರ ಪುಣ್ಯಪಾಪಗಳು ಸಂಬಂಧಿಸಲಾರವು.

ಸಂಧ್ಯಾಯೈನಮಃ, ಸಾವಿತ್ರ್ಯೈನಮಃ, ಗಾಯತ್ರ್ಯೈನಮಃ,
ಸರಸ್ವತ್ಯೈನಮಃ, ಸರ್ವಾಭ್ಯೋದೇವತಾಭ್ಯೋನಮೋನಮಃ,

ಎಂದು ಪಂಚ(೫)ದೇವತೆಗಳನ್ನು ಪ್ರದಕ್ಷಿಣವಾಗಿ ನಮಸ್ಕಾರಮಾಡಿ ಕಾಮೋಕಾರ್ಷೀತ್, ಮನ್ಯುರಕಾರ್ಷೀತ್ ಎಂದು ಅಂಜಲಿಬಂಧನವಂ, ಮಾಡಿ ಸೂರ್ಯನನ್ನ ನಮಸ್ಕರಿಸಿ ಅಭಿವಾದನಮಾಡೀ ಸಂಪ್ರದಾಯವಿ ರುವಕ್ಷ ದಿಙ್ನಮಸ್ಕಾರ ಮಾಡುವದು.

ಪ್ರಾಚ್ಯೈದಿಶೇನಮಃ, ದಕ್ಷಿಣಾಯೈದಿಶೇನಮಃ, ಪ್ರತೀಚ್ಯೈ
ದಿಶೇನಮಃ, ಉದೀಚ್ಯೈದಿಶೇನಮಃ,

ಎಂದು ಪೂರ್ವಾದಿ ದಿಙ್ನಮಸ್ಕಾರವಂಮಾಡಿ,

ಊರ್ಧ್ವಾಯನಮಃ, ಅಧರಾಯನಮಃ, ಅಂತರಿಕ್ಷಾಯನಮಃ,
ಭೂಮ್ಯೈನಮಃ, ವಿಷ್ಣವೇನಮಃ,
ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಸ್ಸರ
ಸಿಜಾಸನಸನ್ನಿವಿಷ್ಟಃ । ಕೇಯೂರವಾನ್ಮಕರಕುಂಡಲವಾನ್ಕಿ
ರೀಟೀಹಾರೀಹಿರಣ್ಮಯವಪುರ್ಧೃತಶಂಖಚಕ್ರಃ ॥ ಶಂಖಚಕ್ರ
ಗದಾಪಾಣೇ ದ್ವಾರಕಾನಿಲಯಾಚ್ಯುತ । ಗೋವಿಂದಪುಂಡರೀ
ಕಾಕ್ಷರಕ್ಷಮಾಂಶರಣಾಗತಂ ॥
ನಮಶ್ಛಾಯಾಪುರುಷೇ, ಯಶ್ಚಾಸಾವಾದಿತ್ಯೇ, ನನೇಕಃ,

ಎಂದು ಪರಮಾತ್ಮನನ್ನ ಪ್ರಣಾಮ ಮಾಡುವರು.

ತಾ॥ ಸೂರ್ಯಮಂಡಲಾಂತರ್ವರ್ತಿಯಾದ ರಮಣೀಯವಾದ ದಿವ್ಯಮಂಗಳ ವಿಗ್ರಹ ಉಳ್ಳ ಪುಂಡರೀಕಾಕ್ಷನೇ ಹೃದಯಗ್ರಹಾಂತರ್ವರ್ತಿಯಾದ ಜೀವಾಂತ್ಮಾಂತರ್ಯಾಮಿಯು. ಅದುಕಾರಣ ಅಂತಹ ಪುಂಡರೀಕಾಕ್ಷತ್ವಾದಿ ವಿಗ್ರಹವುಳ್ಳ ನಾರಾಯಣನೇಧ್ಯೇಯನು.

ಜಪಮಧ್ಯದಲ್ಲಿ ಭಾಗವತರುಗಳು ಬಂದದ್ದಾದರೆ ಅಭಿವಾದನಮಾಡಿ ಯೋಗಕ್ಷೇಮಾನಂತರ ಅವರ ಅನುಜ್ಞೆಯಿಂದ ಜಪಮಾಡತಕ್ಕದ್ದು.

ಜಪಮಧ್ಯೆ ನಿಯಮಾತಿಕ್ರಮವಾದರೆ ಶ್ರೀಕೃಷ್ಣನನ್ನ ಧ್ಯಾನಿಸುವದು.

## ಅಥ ಮೂಲಮಂತ್ರ ಜಪವಿಧಿಃ.

ಅವತರಣಿಕಾ॥ ಪ್ರಾತಸ್ಸಂಧ್ಯೋಪಸ್ಥಾನಾನಂತರ ಅಷ್ಟೋತ್ತರ ಶತ ಸಂಖ್ಯೆಯಿಂದ (೧೦೮) ಅಥವಾ ದಶವಾರ (೧೦) ಯಥಾಶಕ್ತಿಯಾಗಿಯೋ, ಮೂಲಮಂತ್ರಜಪಂಕರಿಷ್ಯೇ ಎಂದು ಸಂಕಲ್ಪಪುರಸ್ಸರವಾಗಿ ಜಪಮಾಡತಕ್ಕದ್ದು.

ಅವ್ಯಾಪಕಮಂತ್ರಗಳು ಅನೇಕನಾಗಿದ್ದಾಗ್ಯೂ, ಮೂಲಮಂತ್ರ, ದ್ವಯ, ಚರಮಶ್ಲೋಕಗಳೆಂಬ, ಮೂರು ಮಹಾಮಂತ್ರಗಳುಮಾತ್ರ ಸರ್ವತ್ರ ಉಪದೇಶದಲ್ಲಿರುವುದು ಸರ್ವಜನ ವಿದಿತವಾಗಿಯೇ ಇದೆ.

ಈ ಮೂರು ಮಂತ್ರಗಳಲ್ಲಿ, ಅಷ್ಟಾಕ್ಷರಿಯು (ಮೂಲಮಂತ್ರವು) ಸಕಲಶಾಸ್ತ್ರರುಚಿ ಪರಿಗೃಹೀತವೆಂಬದಾಗಿಯೂ, ಮಂತ್ರರತ್ನವು (ದ್ವಯ ಮಂತ್ರವು) ಆಚಾರ್ಯರುಚಿಪರಿಗೃಹೀತವೆಂಬದಾಗಿಯೂ, ಚರಮಶ್ಲೋಕವು ಶರಣ್ಯರುಚಿಪರಿಗೃಹೀತವೆಂಬದಾಗಿಯೂ ಸಂಪ್ರದಾಯಜ್ಞರು ಅಪ್ಪಣೆಕೊಡಿಸುವರು.

ಇದರಲ್ಲಿಯೂ ಮೂಲಮಂತ್ರವು ಪ್ರಶಸ್ತತಮವಾದದ್ದು. ಹಾಗೆ ಪ್ರಮಾಣಗಳು ಉದ್ಘೋಷಿಸುವವು.

> ಯಥಾಸರ್ವೇಷುದೇವೇಷು ನಾಸ್ತಿನಾರಾಯಣಾತ್ಪರಃ । ತಥಾ ಸರ್ವೇಷುಮಂತ್ರೇಷು ನಾಸ್ತಿಚಾಷ್ಟಾಕ್ಷರಾತ್ಪರಃ। ಘೂತ್ಯೋರ್ಧ್ವಬಾಹುರದ್ಯಾತ್ರಸತ್ಯ ಪೂರ್ವಂಬ್ರವೀಮಿವಃ । ಹೇಪುತ್ರಶಿಷ್ಯಾಃ ಶೃಣುತನಮಂತ್ರೋಷ್ಟಾಕ್ಷರಾತ್ಪರಃ। ಸರ್ವವೇದಾಂ

ತಸ್ಯಾರ್ಥಃ ಸಂಸಾರಾರ್ಣವತಾರಕಃ। ಗತಿರಷ್ಟಾಕ್ಷರೋನೄಣಾಂ ಅಪುನರ್ಭವಕಾಂಕ್ಷಿಣಾಂ। ಐಹಲೌಕಿಕಮೈಶ್ವರ್ಯಂ ಸ್ವರ್ಗಾದ್ಯಂಪಾರಲೌಕಿಕಂ । ಕೈವಲ್ಯಂಭಗವಂತಂಚ ಮಂತ್ರೋಯಂಸಾಧಯಿಷ್ಯತಿ। ಕಿಂತತ್ರಬಹುಭಿರ್ಮಂತ್ರೈಃ ಕಿಂತತ್ರಬಹುಭಿರ್ವ್ರತೈಃ । ನಮೋನಾರಾಯಣಾಯೇತಿ ಮಂತ್ರಸ್ಸರ್ವಾರ್ಥಸಾಧಕಃ। ಋಚೋಯಜೂಂಷಿಸಾಮಾನಿ ತಥೈವಾಥರ್ವಣಾನಿಚ । ಸರ್ವಮಷ್ಟಾಕ್ಷರಾಂತಸ್ಥಂ ಯಚ್ಚಾನ್ಯದಪಿವಾಙ್ಮಯಂ।ಅಷ್ಟಾಕ್ಷರಸ್ತು ಪ್ರಣವೇ ಅಕಾರೇಪ್ರಣವಸ್ಥಿತಃ॥ ತಸ್ಮಾದಷ್ಟಾಕ್ಷರಂಮಂತ್ರಂ ಮದ್ಭಕ್ತೈರ್ವಿಗತಕಲ್ಮಷೈಃ । ಸಂಧ್ಯಾಕಾಲೇಷುಜಪ್ತವ್ಯಂ ಸತತಂಚಾತ್ಮಶುದ್ಧಯೇ ॥ ಅನ್ಯೇಷಾಮಪಿವಿಪ್ರಾಣಾಂ ಕಿಲ್ಬಿಷಂಹಿಪ್ರಣಶ್ಯತಿ । ಉಭೇಸಂಧ್ಯೇ ಉಪಾಸೀತ ತಸ್ಮಾದ್ವಿಪ್ರೋವಿಶುದ್ಧಯೇ ॥

ತಾ। ಎಲೈ ಶಿಷ್ಯರೇ, ಪುತ್ರರೇ, ದಕ್ಷಿಣಬಾಹುವನ್ನ ಎತ್ತಿ ಪ್ರಮಾಣವಾಗಿ ಹೇಳುವೆನು. ದೇವತೆಗಳಲ್ಲಿ ಹೇಗೆ ನಾರಾಯಣನಿಂದಲೂ ಶ್ರೇಷ್ಠರಿಲ್ಲವೋ ಹಾಗೆ ಮಂತ್ರಗಳಲ್ಲಿ ಅಷ್ಟಾಕ್ಷರಕ್ಕಿಂತಲೂ ಶ್ರೇಷ್ಠವಾದ ಮಂತ್ರವಿಲ್ಲವು.

ಈ ಅಷ್ಟಾಕ್ಷರಿಯು ಸಕಲ ವೇದಾಂತಸಾರವಾದುದು. ಇಹದಲ್ಲಿ ಐಶ್ವರ್ಯವನ್ನು, ಕೈವಲ್ಯವನ್ನೂ, ಸಂಸಾರೋತ್ತಾರಕವಾದ ಮೋಕ್ಷಸಾಮ್ರಾಜ್ಯವನ್ನೂ ಕೂಡಾ ಅವರವರ ಇಷ್ಟಾನುಸಾರ ಕೊಡುವುದು. ಇತರವಾದ ಮಂತ್ರಗಳಿಂದಲೂ, ವ್ರತಗಳಿಂದಲೂ ಉಪಯೋಗವೇನು. ಮೂಲಮಂತ್ರವೇ ಸರ್ವಾರ್ಥಸಾಧಕವಾದದ್ದು.

ಋಕ್, ಯಜುಃ, ಸಾಮ, ಅಥರ್ವಣವೆಂಬ ವೇದಗಳ ಸಾರಾರ್ಥವೂ ಇತರವಾದ ಶಾಸ್ತ್ರಾರ್ಥಗಳೂಸಹಾ ಅಷ್ಟಾಕ್ಷರಿಯಲ್ಲಿಯೆ ಅಡಗಿರುವವು. ಇಂತಹ ಅಷ್ಟಾಕ್ಷರಾರ್ಥವು ಪ್ರಣವದಲ್ಲಿಯೂ ಆಪ್ರಣವಾರ್ಥವು ಅಕಾರದಲ್ಲಿಯೂ ಇರುವದು.

ಆದಕಾರಣ ಶುದ್ಧಮನಸ್ಕರಾದ ಜಗದ್ಭಕ್ತರುಗಳಿಂದ ಸಂಧ್ಯಾಕಾ

ಲಗಳಲ್ಲಿ ಆತ್ಮಶುದ್ಧ್ಯರ್ಥವಾಗಿ ಮೂಲಮಂತ್ರವು ಅವಶ್ಯಕವಾಗಿ ಜಪಿಸತಕ್ಕದ್ದು.

ಅಷ್ಟಾಕ್ಷರೀ ಜಪದಿಂದ ಸಕಲವಾದ ಪಾಪವೂ ನಾಶವಾಗುವದು ಆದ ಪ್ರಯುಕ್ತ ಬ್ರಾಹ್ಮಣರು ಸಂಧ್ಯಾಕಾಲಗಳಲ್ಲಿ ಮಂತ್ರ ಜಪವನ್ನ ಅನುಷ್ಠಿಸಬೇಕು.

ಹೀಗೆ ಸರ್ವಥಾ ಮಂತ್ರ ಜಪವು ಅವಶ್ಯಕವಾದಪ್ರಯುಕ್ತ ಋಷಿಛಂದೋದೇವತೆಗಳನ್ನು ತಿಳಿದು ಅಂಗನ್ಯಾಸಪುರಸ್ಸರವಾಗಿ ಜಪ ಮಾಡತಕ್ಕದ್ದು.

ಈ ಮೂಲಮಂತ್ರಕ್ಕೆ ನ್ಯಾಸಾದಿಗಳು ಬಹುಪ್ರಕಾರವಾಗಿರುವವು. ಅದರಿಂದಲೇ ನಿಗಮಾಂತಮಹಾದೇಶಿಕರವರು ರಹಸ್ಯತ್ರಯಸಾರದಲ್ಲಿ ಸಂಪ್ರದಾಯಾನುಸಾರವಾಗಿ ಅಂಗನ್ಯಾಸಾದಿಗಳನ್ನು ಅನುಷ್ಠಿಸಬೇಕು ಎಂದೂ, ದ್ವಯಮಂತ್ರಕ್ಕೆ ನಿರ್ಬಂಧವಿಲ್ಲವೆಂದೂ, ಅಪ್ಪಣೆ ಕೊಡಿಸಿರುತ್ತಾರೆ.

ಹೀಗಿರಲು ನ್ಯಾಸಾದಿಗಳು ಕೆಲ ಆಹ್ನಿಕಗಳಲ್ಲಿ ಬಹಳ ವಿಸ್ತಾರವಾಗಿಯೂ, ಕೆಲವು ಗ್ರಂಥಗಳಲ್ಲಿ ಸಂಗ್ರಹವಾಗಿಯೂ ಇರುವುದು.

ವಿಸ್ತೃತನ್ಯಾಸಾದ್ಯನುಷ್ಠಾನವು ಸುಕರವಲ್ಲವಾದಪ್ರಯುಕ್ತ ಸಂಪ್ರದಾಯಾನುಸಾರ ಲಘುನ್ಯಾಸವೇ ಇಲ್ಲಿ ಬರೆಯಲ್ಪಡುವದು. ಗುರು, ಲಘುನ್ಯಾಸಗಳು ವಿಕಲ್ಪವಾಗಿರುವವು. ಗುರುನ್ಯಾಸಾಪೇಕ್ಷೆಯುಳ್ಳವರು ಇತರ ಗ್ರಂಥಗಳಲ್ಲಿ ಅರಿಯಬಹುದು. “ವಿಕಲ್ಪೋ ವಿಶಿಷ್ಟಫಲತ್ವಾತ್” ಎಂಬಂತೆ ಗುರು, ಲಘು, ನ್ಯಾಸಗಳಿಗೆ ಫಲಮಾತ್ರ ಸಮಾನವಾಗಿರುವದು.

## ಮೂಲಮಂತ್ರ ಜಪಪ್ರಯೋಗ.

ಮೂಲಮಂತ್ರೇಣ (ಓಂನಮೋನಾರಾಯಣಾಯ) ಪಂಚವಿಂಶತಿಕೃತ್ವಃ ಅಭ್ಯಸ್ತೇನತ್ರಿಃ ಪ್ರಾಣಾಯಾಮ್ಯ, ಶ್ರೀಭಗವದಾಜ್ಞಯಾಭಗವತ್ಪ್ರೀತ್ಯರ್ಥಂ ಪ್ರಾತಃ ಸಂಧ್ಯಾಯಾಂ,

ಅಷ್ಟೋತ್ತರಶತಕೃತ್ವಃ, (೧೦೮) ದಶಕೃತ್ವಃ (೧೦) ಯ ಥಾಶಕ್ತಿ ವಾ ಅಷ್ಟಾಕ್ಷರ ಮಹಾಮಂತ್ರ ಜಪಂಕರಿಷ್ಯೇ, ಇತಿ ಸಂಕಲ್ಪ್ಯ, ಅಸ್ಯಶ್ರೀಮದಷ್ಟಾಕ್ಷರ ಮಹಾಮಂತ್ರಸ್ಯ ಬದ ರಿಕಾಶ್ರಮವಾಸೀ ಶ್ರೀಮನ್ನಾರಾಯಣಋಷಿಃ, ದೇವೀಗಾಯ ತ್ರೀಛಂದಃ, ಪರಮಾತ್ಮಾ ಶ್ರೀಮನ್ನಾರಾಯಣೋದೇವತಾ, ಇತಿನ್ಯಸ್ಯ.

ಅಂಬೀಜಂ, ಆಯಶಕ್ತಿಃ, ಮಂಕೀಲಕಂ, ಹ್ರೀಂಕವಚಂ. ಐಂ ಅಸ್ತ್ರಂ, ವಿಷ್ಣುಸ್ತತ್ವಂ, ಶುಕ್ಲೋವರ್ಣಃ, ಉದಾತ್ತಾದಿಸ್ವ ರಃ, ಶ್ರೀ ವೈಕುಂಠಃಕ್ಷೇತ್ರಂ, ಜೀವಾತ್ಮಪರಮಾತ್ಮನೋಃ ಸ್ವಸ್ವಾಮಿಭಾವಸಂಬಂಧಃ, ಶ್ರೀಮನ್ನಾರಾಯಣ ಪ್ರೀತ್ಯರ್ಥೇ ಜಪೇವಿನಿಯೋಗಃ.

ಅಸ್ಮದ್ಗುರುಭ್ಯೋನಮಃ ಅಸ್ಮತ್ಪರಮಗುರುಭ್ಯೋನಮಃ, ಅಸ್ಮತ್ಸರ್ವಗುರುಭ್ಯೋನಮಃ, ಓಂ ಅಂಗುಷ್ಠಾಭ್ಯಾನಮಃ, ನಮಃ ತರ್ಜನೀಭ್ಯಾನಮಃ, ನಾರಾಯಣಾಯ ಮಧ್ಯಮಾ ಭ್ಯಾಂನಮಃ, ಓಂ ಅನಾಮಿಕಾಭ್ಯಾಂನಮಃ, ನಮಃಕನಿಷ್ಠಿಕಾ ಭ್ಯಾನಮಃ ನಾರಾಯಣಾಯ ಕರತಲಕರಪೃಷ್ಠಾಭ್ಯಾಂನಮಃ,

## ಏವಂಹೃದಯಾದಿನ್ಯಾಸಃ

ಓಂ ಜ್ಞಾನಾಯಹೃದಯಾಯನಮಃ, ನಮಃ ಐಶ್ವರ್ಯಾಯ ಶಿರ ಸೇಸ್ವಾಹಾ, ನಾರಾಯಣಾಯಶಕ್ತ್ಯೈ ಶಿಖಾಯೈವಷಟ್, ಓಂಬಲಾಯಕವಚಾಯಹುಂ, ನಮಃನೇತ್ರಾಭ್ಯಾಂ ವೌಷಟ್, ನಾರಾಯಣಾಯ ವೀರ್ಯಾಯಅಸ್ತ್ರಾಯಫಟ್, ಭೂರ್ಭುವಸ್ಸು ವರೋಮಿತಿದಿಗ್ಬಂಧಃ.

ಧ್ಯಾನಂ॥ ಸವ್ಯಂಪಾದಂಪ್ರಸಾರ್ಯ ಶ್ರಿತದುರಿತಹರಂ ದಕ್ಷಿಣಂಕುಂ ಚಯಿತ್ವಾ ಜಾನುನ್ಯಾಧಾಯಸವ್ಯೇತರಮಿತರ ಭುಜಂನಾಗ ಭೋಗೇನಿಧಾಯ॥ ಪಶ್ಚಾದ್ಬಾಹುದ್ವಯೇನ ಪ್ರತಿಭಟಶಮನೇ ಧಾರಯನ್ ಶಂಖಚಕ್ರೇ ದೇವೀಭೂಷಾದಿಜುಷ್ಟೋ ಜನಯತು

ಜಗತಾಂ ಶರ್ಮವೈಕುಂಠನಾಥಃ ॥ ಇತಿಧ್ಯಾತ್ವಾ ಅನಂತರಂ ಸಂಕಲ್ಪಪ್ರಕಾರೇಣಜಪೇತ್.

ತಾ॥ ಆಶ್ರಿತರುಗಳ ಪಾಪನಾಶಕವಾದ ಎಡಪಾದವನ್ನು ನೀಡಿ ಬಲ ಪಾದವನ್ನು ಬಗ್ಗಿಸಿಕೊಂಡು ಬಲಮಂಡಿಯಮೇಲೆ ಬಲಹಸ್ತವನ್ನು ಇಟ್ಟು ಎಡಗೈಯನ್ನು ಮಹಾಶೇಷನಲ್ಲಿ ಊರಿ ಹಿಂಭಾಗದ ಹಸ್ತದ್ವಯ ದಿಂದ ಶತ್ರುನಾಶಕಗಳಾದ ಶಂಖಚಕ್ರಗಳನ್ನು ಧರಿಸಿದವನಾಗಿ ಶ್ರೀಭೂ ದೇವಿಗಳಿಂದಲೂ ಆಭರಣಗಳಿಂದಲೂ ಸೇವಿತನಾದ ವೈಕುಂಠನಾಥನಾದ ನಾರಾಯಣನು ಜಗತ್ತಿಗೆ ಸುಖವನ್ನುಂಟುಮಾಡಲಿ. ಈ ಅಷ್ಟಾಕ್ಷರಿ ಯು ಓಂ, ನಮಃ, ನಾರಾಯಣಾಯ, ಎಂದು ಮೂರುಪದವಾಗಿರುವುದು.

ಈ ಪ್ರಣವವು (ಓಂಕಾರವು) ಸಕಲವೇದಸಾರಸಂಗ್ರಹವು, ಹಾಗೆ ಪ್ರಮಾಣಗಳು ಉದ್ಘೋಷಿಸುವವು.

ಓಂಕಾರಪ್ರಭವಾವೇದಾಃ ಓಂಕಾರಪ್ರಭವಾಸ್ಸ್ವರಾಃ । ಓಂ ಕಾರಪ್ರಭವಂ ಸರ್ವಂಜಗತ್‌ಸ್ಥಾವರಜಂಗಮಂ । ಇತ್ಯಾದಿ.

ತಾ॥ ಸಕಲವಾದ ವೇದಗಳೂ, ಸಕಲವಾದ ಸ್ವರಗಳೂ, ಸ್ಥಾವರಜಂ ಗಮಾತ್ಮಕವಾದ ಪ್ರಪಂಚವೂ ಓಂಕಾರದಿಂದಲೇ ಉತ್ಪನ್ನವಾದವು. ಈ ಪ್ರಣವ ವಿವರಣವೇ, ಮಂತ್ರಶೇಷವು. ಈ ಮೂಲಮಂತ್ರದ ವಿವರ ಣವೇ ದ್ವಯಮಂತ್ರವು. ಈ ದ್ವಯಮಂತ್ರದ ವ್ಯಾಖ್ಯಾನವೇ ಚರ ಮಶ್ಲೋಕವು.

ಈ ಪ್ರಣವವು ಅ, ಉ, ಮ, ಎಂಬದಾಗಿ ಮೂರುಪದ ಉಳ್ಳದ್ದು. ಶ್ರೀ ಪರಾಶರಭಟ್ಟರವರಿಂದ ಅಷ್ಟಶ್ಲೋಕಿಯಲ್ಲಿ ಈ ಮಂತ್ರಾರ್ಥಗಳು ಚೆನ್ನಾಗಿ ವಿವರಿಸಲ್ಪಟ್ಟಿರುವವು. ಅದು ಹೇಗೆಂದರೆ:—

ಅಕಾರಾರ್ಥೋ ವಿಷ್ಣುರ್ಜಗದುದಯರಕ್ಷಾ ಪ್ರಳಯಕೃತ್, ಮಕಾರಾರ್ಥೋಜೀವಃ ತದುಪಕರಣಂವೈಷ್ಣವಮಿದಂ॥ ಉಕಾ ರೋಽನನ್ಯಾರ್ಹಂ ನಿಯಮಯತಿಸಂಬಂಧ ಮನಯೋಸ್ತ್ರಿ ಸಾರಸ್ತ್ರ್ಯಾತ್ಮಾ ಪ್ರಣವ ಇಮಮರ್ಥಂಸಮದಿಶತ್.

ಶ್ರೀ ಪ - 146 · 148 · 150 · 162 · 158 · 167 · 173
2 3 4 5 6 7 8 .

ತಾ|| ಜಗತ್ತುಗಳ, ಉತ್ಪತ್ತಿ, ರಕ್ಷಣ, ನಾಶಕ್ಕೆ ಕಾರಣಭೂತನಾದ ವಿಷ್ಣುವು, ಅಕಾರವಾಚ್ಯನು (ಅಕಾರಕ್ಕೆ ಅರ್ಥ) "ಅವ ರಕ್ಷಣಗತಿ ಹಿಂಸಾದಿಷು" ಎಂಬ ಧಾತುವಿನಿಂದ ವ್ಯುತ್ಪನ್ನವಾದ ಅಕಾರದಿಂದ ಪೂರ್ವೋಕ್ತವಾದ ಅರ್ಥಗಳು ನಿಶ್ಚಯಿಸಲ್ಪಟ್ಟಿರುವವು. "ಮಕಾರೋ ಜೀವವಾಚಕಃ" ಇತ್ಯಾದಿ ಪ್ರಮಾಣಾನುಸಾರ, ನಿತ್ಯ, ಮುಕ್ತ, ಬದ್ಧರೆಂಬ ತ್ರಿವಿಧಚೇತನ (ಜೀವ) ವರ್ಗವು ಮಕಾರವಾಚ್ಯವು. ಮಕಾರಶಬ್ದವಾಚ್ಯನಾದ ಜೀವನೂ, ಈ ಜೀವಾತ್ಮನಿಗೆ ಶೇಷಭೂತವಾದ, ಶುದ್ಧಸತ್ವ, ಮಿಶ್ರಸತ್ವ, ಸತ್ವಶೂನ್ಯ, ಭೇದದಿಂದ ಮೂರುಪ್ರಕಾರವಾದ ಅಚೇತನವೂಕೂಡಾ ವಿಷ್ಣುವಿಗೆ ಶೇಷಭೂತವಾದದ್ದು. ಈ ಅರ್ಥವು ಅಕಾರಪದಮೇಲಿರುವ ಲುಪ್ತಚತುರ್ಥಿಯಿಂದ ಹೇಳಲ್ಪಟ್ಟಿತು.

ಈ ಪ್ರಣವದಲ್ಲಿರುವ ಅಕಾರವು ಲುಪ್ತಚತುರ್ಥಿಯುಳ್ಳದ್ದು ಎಂದು ಭಾಷ್ಯದಲ್ಲಿ ವಿವರಿಸಿರುತ್ತಾರೆ.

(ಅತ್ರಭಾಷ್ಯಂ, ಅವರಕ್ಷಣ, ಇತ್ಯೇತಸ್ಮಾದ್ಧಾತೋಃ "ಅನ್ಯೇಭ್ಯೋಪಿದೃಶ್ಯತ, ಇತಿ" ವಿಚ್ಪ್ರತ್ಯಯೇ, ಧಾತೋರ್ವಕಾರಸ್ಯ "ಲೋಪೋರ್ವ್ಯೋರ್ವಲಿ" ಇತಿಲೋಪೇ "ವೇರಪೃಕ್ತಸ್ಯ" ಇತಿವಕಾರಲೋಪೇಕೃತೇ, ಅಕಾರಮಾತ್ರೇಸ್ಥಿತೇ, ಕೃದಂತತ್ವಾತ್ಪ್ರಾತಿಪದಿಕಸಂಜ್ಞಾಯಾಂ, ತಾದರ್ಥ್ಯೇಚತುರ್ಥೀವಕ್ತವ್ಯಾ, ಇತಿಚತುರ್ಥ್ಯಾಂ ಕೃತಾಯಾಂತಸ್ಯಾಶ್ಚಸುಪಾಂಸುಲುಕ್, ಇತ್ಯಾದಿ ನಾಲೋಪೇಕೃತೆ, ಅ, ಇತಿ ಚತುರ್ಥ್ಯಂತಮಾಚಿ ಪದಂಪ್ರಥಮಂಭವತಿ,)

ಉಕಾರವು, (ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದುಚಂದ್ರಮಾಃ ಇತ್ಯಾದಿಸ್ಥಸಪ್ರಮಾಣದಿಂದ) ಅವಧಾರಣಾರ್ಥಕವಾದದ್ದಾಗಿ, ಅಕಾರ ಮಕಾರವಾಚ್ಯನಾದ ಪರಮಾತ್ಮ ಜೀವಾತ್ಮರುಗಳ ಸಂಬಂಧ (ಶೇಷಿಶೇಷಭಾವಸಂಬಂಧ) ವನ್ನ ಅನನ್ಯಾರ್ಹವೆಂದು (ಭಗವಲ್ಲಕ್ಷ್ಮೀ ಭಾಗವತಾಚಾರ್ಯ ವ್ಯತಿರಿಕ್ತರಿಗೆ ಅರ್ಹವಲ್ಲವೆಂದು) ನಿಯಮಿಸುವುದು.

ಋಗ್ಯಜುಸ್ಸಾಮರೂಪವೇದತ್ರಯಸಾರವಾದ, ಅಕಾರ, ಉಕಾರ, ಮಕಾರ, ರೂಪ ಅಕ್ಷರಗಳೇ ಸ್ವರೂಪವಾಗಿವುಳ್ಳ ಪ್ರಣವವು. ಈ

ಪೂರ್ವೋಕ್ತವಾದ ಅರ್ಥವನ್ನು, (ಚೇತನನಿಗೆ ಭಗವದನನ್ಯಾರ್ಹಶೇಷತ್ವರೂಪವಾದ ಅರ್ಥವನ್ನು) ಪ್ರತಿಪಾದಿಸಿತು, ಈ ಪ್ರಣವಾರ್ಥವೇ ಸಂಗ್ರಹವಾಗಿ,

ಶ್ಲೋ॥ ಅಕಾರೋವಿಷ್ಣುರಿತ್ಯುಕ್ತೋ ಮಕಾರೋಜೀವವಾಚಕಃ।
ತಯೋಸ್ಸುನಿತ್ಯಸಂಬಂಧಃ ಉಕಾರೇಣಪ್ರಕೀರ್ತಿತಃ ॥

ಎಂದು ಹೇಳಲ್ಪಟ್ಟಿದೆ.

ಅವತರಣಿಕಾ ॥ ಹೀಗೆ ಪ್ರಣವವಿವರಣಾನಂತರ ನಮಶ್ಶಬ್ದವು ವಿವರಿಸಲ್ಪಡುವದು.

ಶ್ಲೋ॥ಮಂತ್ರಬ್ರಹ್ಮಣಿಮಧ್ಯಮೇನ ನಮಸಾಪುಂಸಃ ಸ್ವರೂಪಂ
ಗತಿರ್ಗಮ್ಯಂಶಿಕ್ಷಿತಮೀಕ್ಷಿತೇನಪುರತಃ ಪಶ್ಚಾದಪಿಸ್ಥಾನತಃ,
ಸ್ವಾತಂತ್ರ್ಯಂನಿಜರಕ್ಷಣಂ ಸಮುಚಿತಾವೃತ್ತಿಶ್ಚನಾನ್ಯೋಚಿತಾ
ತಾತಸ್ಯೈವೇತಿಹರೇರ್ವಿವಿಚ್ಯಕಥಿತಂ ಸ್ವಸ್ಯಾಪಿನಾರ್ಹಂತತಃ ॥

ತಾ॥ ಮಂತ್ರ (ಮಂತಾರಂತ್ರಾಯತ ಇತಿಮಂತ್ರಃ-ಅನುಸಂಧಾನವ ಮಾಡುವವನನ್ನ ರಕ್ಷಿಸುವುದು) ಶ್ರೇಷ್ಠವಾದ ಅಷ್ಟಾಕ್ಷರಿಯಲ್ಲಿ, ಪ್ರಣವಕ್ಕೂ, ನಾರಾಯಣಪದಕ್ಕೂ ಮಧ್ಯದಲ್ಲಿರುವ, ಪ್ರಣವದಿಂದ ಕೂಡಿರುವ ನಖಂಡನಮಶ್ಶಬ್ದದಿಂದ ಜೀವಾತ್ಮನ ಶೇಷತ್ವರೂಪಸ್ವರೂಪವು ಶೋಧಿಸಲ್ಪಟ್ಟಿರುವುದು, ಅದು ಹೇಗೆಂದರೆ,—

ಓಂ, ನ, ಮಃ, ಎಂದು ನಖಂಡನಮಶ್ಶಬ್ದಕ್ಕೆ ಪ್ರಣವಾನ್ವಯದಲ್ಲಿ (ಮ್, ಆಯ್ಯೈವ, ಮಃ, ನ, ಎಂದು ಯೋಜನೆಯಾಗುವದು) ಜೀವಾತ್ಮನು ವಿಷ್ಣುವಿಗೇ ಶೇಷ (ದಾಸ) ಭೂತನು, ತನಗೆ ಶೇಷನಲ್ಲವು. ಎಂದು ಅರ್ಥಬೋಧನದಿಂದ, ಸ್ವಶೇಷತ್ವ ನಿವೃತ್ತಿರೂಪಸ್ವರೂಪವು ಶೋಧಿತವಾಗುವುದು.

ಸ್ವಸ್ಥಾನದಲ್ಲಿ, ಅನ್ವಿತವಾದ (ಅಖಂಡನಮಸ್ಸಿನಿಂದ ಕೂಡಿರುವ) ನಖಂಡನ, ಮ, ಸ್ಸಿನಿಂದ ಉಪಾಯವು ಶಿಕ್ಷಿಸಲ್ಪಟ್ಟಿದೆ. ಅದು ಹೇಗೆಂದರೆ,—ನಮೋ, ನ, ಮಃ, ಎಂದು ನಖಂಡನ ಮಸ್ಸಿಗೆ (ನಮಃ, ಎಂಬು ವದನ್ನು, ನ, ಎಂದು, ಮಃ, ಎಂದು ಬೇರೆಬೇರೆ ಪದ ಮಾಡಿದರೆ ನಖಂ

ಡನಮಸ್ಸಿನಲುವುದು.) ಅಖಂಡನಮೋ (ನಮಃ, ಎಂಬುವದನ್ನ ಬಂದೇ ಪದದಲ್ಲಿ ಹೇಳುವದೇ ಅಖಂಡನಮಸ್ಸು) ನ್ಯಾಯದಲ್ಲಿ, ನಮಃ, ರಕ್ಷಣೋ ಪಾಯವು. (ಸ್ವರಕ್ಷಣದಲ್ಲಿ ಪ್ರವೃತ್ತಿಯು) ಮಃ-ಆಸಿಗೆ (ಜೀವಾತ್ಮನಿಗೆ) ನ-ಇಲ್ಲವು. ಭಗವಂತನಿಗೇನೆ ಎಂಬ ಅರ್ಥಬೋಧನದಿಂದ ಸ್ವರಕ್ಷಣ ದಲ್ಲಿ ಸ್ವಾನ್ವಯನಿವೃತ್ತಿಯಿಂದ ಗತಿಯು ಶೋಧಿಸಲ್ಪಟ್ಟಿತು. (ಉಪಾ ಯವು ಹೇಳಿದಂತಾಯಿತು.)

ಪಶ್ಚಾತ್ (ಕೊನೆಯಲ್ಲಿ) ಅನ್ವಿತವಾದ (ಕಾಕಾಕ್ಷಿನ್ಯಾಯದಿಂದ ನಾರಾ ಯಣ ಪದದಿಂದ ಕೂಡಿದ) ಸಖಂಡನಮಃಶಬ್ದದಿಂದ ಗಮ್ಯವು (ಪ್ರಾಪ್ಯ ವು) ಶಿಕ್ಷಿಸಲ್ಪಟ್ಟಿತು, ಹೇಗೆಂದರೆ,—

ನಾರಾಯಣಾಯನ, ಮಃ, ಎಂದು ಸಖಂಡನಮಸ್ಸಿಗೆ, ನಾರಾಯಣ ಪದಾನ್ವಯದಲ್ಲಿ, ನಾರಾಯಣನಿಗೇನೆ (ಸರ್ವಶೇಷಿಯಾದ ವಿಷ್ಣುವಿಗೇನೆ) ಸಕಲವಿಧ ಕೈಂಕರ್ಯಗಳನ್ನೂ ಮಾಡುವೆನು. ಮ, ನಃ, ನನಗೋಸ್ಕರ ಮಾಡುವುದಿಲ್ಲ. ಎಂದು ಅರ್ಥಬೋಧನದಿಂದ ಕೈಂಕರ್ಯದಲ್ಲಿ ಸ್ವಾರ್ಥತ್ವ ನಿವೃತ್ತಿಯಿಂದ ಪ್ರಾಪ್ಯವು ಶೋಧಿಸಲ್ಪಟ್ಟಿತು.

ಹೀಗೆ ಇದರಿಂದ ಸ್ವರೂಪೋಪಾಯ ಪುರುಷಾರ್ಥಗಳು ಶೋಧಿಸ ಲ್ಪಟ್ಟವು.

## ಇನ್ನು ಶಿಕ್ಷಣಫಲವು ಹೇಳಲ್ಪಡುವುದು.

ಸ್ವಾತಂತ್ರ್ಯವೂ, ಜೀವಾತ್ಮರಕ್ಷಣವೂ, ಸಮುಚಿತವಾದ ವ್ಯಾಪಾ ರವೂ (ಚತುರ್ಥೀವಿಭಕ್ತಿಯಲ್ಲಿ ಹೇಳಲ್ಪಟ್ಟ ಕೈಂಕರ್ಯವು) ಕೂಡಾ ಸರ್ವರಕ್ಷಕನೆಂದು ವೇದಾಂತ ಪ್ರಸಿದ್ಧನಾದ ನಾರಾಯಣನಿಗೇನೇ ಅರ್ಹ [illegible] ಅನ್ಯರಿಗೆ ಉಚಿತವಲ್ಲವು. ಎಂದು ಸ್ವಾನತ್ರಯದಲ್ಲಿ ಕೂಡಿಸಿದ [illegible] ನ, ಮ, ಸ್ಸಿನಿಂದ [illegible] ಸಲ್ಪಟ್ಟಿತು.

[illegible] ಸ್ವಾತಂತ್ರ್ಯ [illegible] ಭಗವಂತನಿಗೇ [illegible] [illegible], ೨೭.

[illegible] ತ್ರ್ಯಕ್ಷರ [illegible] ।

ಮಮೇತಿದ್ವ್ಯಕ್ಷರೋಮೃತ್ಯುಃ ನಮಮೇತಿಚಶಾಶ್ವತಂ ॥

ಇತ್ಯಾದಿ ಪ್ರಮಾಣಗಳನ್ನ ಅರಿಯತಕ್ಕದ್ದು.

ತಥಾಚ॥ ಈ ಶ್ಲೋಕದಿಂದ, ಅನನ್ಯಾರ್ಹಶೇಷತ್ವ, ಅನನ್ಯಶರಣತ್ವ, ಅನನ್ಯಭೋಗ್ಯತ್ವ, ರೂಪವಾದ ಆಕಾರತ್ರಯವು ಹೇಳಲ್ಪಟ್ಟಾಯಿತು.

ಅ॥ ಹೀಗೆ ಶ್ಲೋಕದ್ವಯದಿಂದ ಪ್ರಣವ, ನಮಸ್ಸು, ಗಳನ್ನ ವಿವರಿಸಿ, ಆ ಅರ್ಥಾನುವಾದಪೂರ್ವಕವಾಗಿ ನಾರಾಯಣ ಪದಾರ್ಥವನ್ನು ಮುಂದಲ ಶ್ಲೋಕದಲ್ಲಿ ಹೇಳುತ್ತಾರೆ.

ಶ್ಲೋ॥ ಅಕಾರಾರ್ಥಾಯೈವಸ್ವಮಹ ಮಥಮಹ್ಯಂನನಿವಹಾನರಾಣಾಂ
ನಿತ್ಯಾನಾಮಯನಮಿತಿ ನಾರಾಯಣಪದಂ ॥
3 ಯಮಾಹಾಸ್ಮೈಕಾಲಂಸಕಲ ಮಪಿಸರ್ವತ್ರಸಕಲಾಸ್ವವಸ್ಥಾ
ಸ್ವಾವಿಸ್ಸ್ಯಾರ್ಮ್ಮಮಸಹಜ ಕೈಂಕರ್ಯವಿಧಯಃ ॥

ತಾ॥ ಅಕಾರವಾಚ್ಯನಾದ ನಾರಾಯಣನಿಗೇನೇ, ನಾನು ಶೇಷಭೂತನು (ಇದು ಪ್ರಣವಾರ್ಥಾನುವಾದವು) ಅನಂತರ, ನನಿಗೆ ನಾನು ಶೇಷಭೂತನಲ್ಲವು (ಇದು ನಮಶ್ಶಬ್ದಾರ್ಥದ ಅನುವಾದವು.)

ನಾರಾಯಣಪದಂ ॥ ರೀಙ್ ಕ್ಷಯೇ, ಎಂಬ ಧಾತುವಿನದ್ದೆಶೆಯಿಂದ ವ್ಯುತ್ಪನ್ನನಾದ, ರ, ಶಬ್ದವು ನಾಶವಾಗುವ ಪದಾರ್ಥವನ್ನು ಹೇಳುವುದು. ರಾಃ, ನಭವಂತೀ, ತಿ, ನರಾಃ, ಎಂಬದಾಗಿ ನಾಶವಿಲ್ಲದ ಪದಾರ್ಥಗಳು (ನಿತ್ಯವಾದ ಪದಾರ್ಥಗಳು) ನರಾಃ ಎನ್ನಿಸಿಕೊಳ್ಳುವುವು. ನರಾಣಾಂ ಸಮೂಹಾಃ, ನಾರಾಃ (ನಿತ್ಯಪದಾರ್ಥಗಳ ಸಮೂಹವು, ನಾರಾಃ ಎನ್ನಿಸಿಕೊಳ್ಳುವುದು) ಅವುಗಳು ಯಾವವಂದರೆ,—ಜ್ಞಾನ, ಆನಂದ, ಅಮಲತ್ವ, ಜ್ಞಾನ, ಶಕ್ತಿ, ವಾತ್ಸಲ್ಯ ಸೌಶೀಲ್ಯಗಳೇ ಮೊದಲಾದ, ದಿವ್ಯಾತ್ಮಗುಣಗಳೂ, ದಿವ್ಯಮಂಗಳವಿಗ್ರಹವೂ, ಕಾಂತಿ, ಸೌಕುಮಾರ್ಯಾದಿಗಳೇ ಮೊದಲಾದ ದಿವ್ಯಮಂಗಳವಿಗ್ರಹಗುಣಗಳೂ, ದಿವ್ಯಭೂಷಣಗಳೂ, ದಿವ್ಯಾಯುಧಗಳೂ, ದಿವ್ಯಮಹಿಷಿಗಳೂ, ನಿತ್ಯಸೂರಿಗಳೂ, ಛತ್ರಚಾಮರಾದಿ ಶುಶ್ರೂಷಾಸಾಧನಗಳೂ, ದ್ವಾರಪಾಲಕರೂ, ಗಣಾಧಿಪತಿಗಳೂ, ಮು

ಕ್ಷೇತ್ರರೂ, ಪರಮಾಕಾಶವೂ, ಮೂಲಪ್ರಕೃತಿಯೂ, ಬದ್ಧ (ಸಂಸಾರಿ) ಜೀವರೂ, ಕಾಲವೂ, ಮಹದಾದಿವಿಕಾರಗಳೂ, ಬ್ರಹ್ಮಾಂಡಗಳೂ, ಬ್ರಹ್ಮಾಂಡಾಂತರ್ಗತರಾದ ದೇವಾದಿ ಪದಾರ್ಥಗಳೂ (ಇವುಗಳು ನಾರಾಃ ಎನ್ನಿಸಿಕೊಳ್ಳುವವು.) ಇವುಗಳಲ್ಲಿ ಜ್ಞಾನಾದಿ ಕಾಲಾಂತವಾದ ಪದಾರ್ಥಗಳು, ಸ್ವರೂಪತಃ ನಿತ್ಯವಾದವುಗಳು. (ಯಾವಕಾಲದಲ್ಲಿಯೂ ಉತ್ಪತ್ತಿನಾಶಗಳಿಲ್ಲದವುಗಳು) ಮಹದಾದಿ ಪದಾರ್ಥಗಳು ಪ್ರವಾಹತಃ ನಿತ್ಯಗಳು (ಉತ್ಪತ್ತಿನಾಶಗಳಿದ್ದಾಗ್ಯೂ ನಾಮ, ರೂಪಗಳಲ್ಲಿ ವ್ಯತ್ಯಾಸವಿಲ್ಲದೇ ಪೂರ್ವದೋಪಾದಿಯಲ್ಲಿಯೇ ಇರುವವು.)

ವ್ಯಾ॥ ನಾರಾಣಾಂ ಅಯನಂ, ಪ್ರಾಪ್ಯಂ, ಪ್ರಾಪಕಂ. ಆಧಾರಶ್ಚ, ನಾರಾಯಣಃ, ಇತಿ, ತತ್ಪುರುಷಃ.

ಇಣ್, ಗತೌ, ಇತ್ಯಸ್ಮಾದ್ಧಾತೋಃ ವ್ಯುತ್ಪನ್ನಃ ಅಯನಶಬ್ದಃ, ಈಯತೇ ಇತ್ಯಯನಂ, ಇತಿ ಕರ್ಮಣಿವ್ಯುತ್ಪತ್ತ್ಯಾ ಪ್ರಾಪ್ಯವಾಚೀ, ಈಯತೆ ಅನೇನೇತಿಕರಣೇ ವ್ಯುತ್ಪತ್ತ್ಯಾ ಪ್ರಾಪಕವಾಚೀ, ಈಯಂತ್ಯಸ್ಮಿನ್ನಿತ್ಯಯನಮಿತ್ಯಧಿಕರಣೇ ವ್ಯುತ್ಪತ್ತ್ಯಾ ಆಧಾರವಾಚೀ, ಅನೇನಪರ್ವತೇಫಲಿತಂ

ಇಂತಹ ನಾರಶಬ್ದವಾಚ್ಯವಾದ ಪದಾರ್ಥಗಳಿಗೆ ಪ್ರಾಪ್ಯನಾಗಿಯೂ, ಪ್ರಾಪಕನಾಗಿಯೂ, ಆಧಾರನಾಗಿಯೂ ಇರುವ ಪ್ರಯುಕ್ತ ನಾರಾಯಣನೆನಿಸಿಕೊಳ್ಳುವನು. ಇದರಿಂದ ಪರತ್ವವು ಸಿದ್ಧವಾಯಿತು.

ನಾರಾಃ ಅಯನಂ, ಆಧಾರಃಯಸ್ಯಸಃ ಇತಿಬಹುವ್ರೀಹಿಃ, ಇಂತಹ ನಾರಶಬ್ದವಾಚ್ಯಗಳಾದ ಪದಾರ್ಥಗಳೇ ಆಧಾರವಾಗಿವುಳ್ಳವನಾದಪ್ರಯುಕ್ತ ನಾರಾಯಣನೆನಿಸಿಕೊಳ್ಳುವನು, ಇದರಿಂದ ಅಂತರ್ಯಾಮಿತ್ವ, ಸೌಲಭ್ಯಗಳು ಸಿದ್ಧವಾದವು.

ಇಂತಹ ನಾರಾಯಣನಿಗೋಸ್ಕರ ಸರ್ವಕಾಲ ಸರ್ವದೇಶ, ಸರ್ವಾವಸ್ಥೆಗಳಲ್ಲಿಯೂ ಸಹಜವಾದ ಕೈಂಕರ್ಯಾನುಷ್ಠಾನಗಳು ಉಂಟಾಗಲಿ.(ಅವಿದ್ಯಾಕರ್ಮಾದಿರೂಪ ಪ್ರತಿಬಂಧಕ ನಿವೃತ್ಯನಂತರ ನಾರಾಯಣನ ಕೈಂಕರ್ಯಗಳು ನನಿಗೆ ಸಂಭವಿಸಲಿ) ಏತೇನ ಮೂಲಮಂತ್ರದಲ್ಲಿ, ಪ್ರಣವದಲ್ಲಿ ಶೇಷತ್ವವೂ, ನಮಶ್ಶಬ್ದದಲ್ಲಿ ಪಾರತಂತ್ರ್ಯವೂ, ನಾರಾಯಣಪದದಲ್ಲಿ ಕೈಂಕರ್ಯವೂ ಹೇಳಲ್ಪಟ್ಟಿತು.

ಶ್ಲೋ॥ ದೇಹಾಸಕ್ತಾತ್ಮಬುದ್ಧಿರ್ಯದಿ ಭವತಿಪದಂ ಸಾಧುವಿದ್ಯಾತ್ತೃತೀಯಂ ಸ್ವಾತಂತ್ರ್ಯಾಂಧೋಯದಿಸ್ಯಾತ್ಪ್ರಥಮ ಮಿತರಶೇಷತ್ವಧೀಶ್ಚೇದ್ವಿತೀಯಂ । ಆತ್ಮತ್ರಾಣೋನ್ಮುಖಶ್ಚೇನ್ನಮ ಇತಿತಪದಂ ಬಾಂಧವಾಭಾಸಲೋಲಶ್ಶಬ್ದಂ ನಾರಾಯಣಾಖ್ಯಂ ವಿಷಯಚಪಲಧೀಶ್ಚೇಚ್ಚತುರ್ಥೀಂಪ್ರಪನ್ನಃ ॥

ಅವತರಣಿಕಾ॥ ಹೀಗೆ ಮೂರುಶ್ಲೋಕಗಳಿಂದ ಮಂತ್ರಾರ್ಥಗಳನ್ನು ಹೇಳಿ, ಅನಂತರ ಪ್ರಪನ್ನನಿಗೆ ದೇಹಾತ್ಮಭ್ರಮಾದಿ ದೋಷ ಬರದಂತೆ ಸರ್ವದಾ ಮಂತ್ರಾನುಸಂಧಾನವು ಅವಶ್ಯಕವು ಎಂಬ ಆಶಯದಿಂದ ಹೇಳುವರು.

ತಾ॥ ಶರಣಾಗತನಾದವನು ಶರೀರದಲ್ಲಿಯೇ ಆತ್ಮಬುದ್ಧಿಯುಳ್ಳವನಾದರೆ (ದೇಹಾತ್ಮ ಭ್ರಾಂತಿಯುಳ್ಳವನಾದರೆ) ಪ್ರಣವದಲ್ಲಿ ಮೂರನೇದವಾದ ಮ, ಕಾರವನ್ನ ಅನುಸಂಧಾನ ಮಾಡತಕ್ಕದ್ದು.

ಮನ, ಜ್ಞಾನೇ, ಮದಿಹರ್ಷೇ, ಮನು, ಅವಬೋಧನೇ, ಮಸಿ, ಪರಿಮಾಣೇ, ಇತ್ಯಾದಿ ಧಾತುಗಳಿಂದ ವ್ಯುತ್ಪನ್ನವಾಗಿಯೂ, ಜಡತ್ವ, ಅಚೇತನತ್ವ, ಸ್ಥೂಲತ್ವ, ದುಃಖರೂಪತ್ವಾದಿಗಳಿಂದ ಕೂಡಿರುವ ದೇಹಕ್ಕಿಂತಲೂ ವಿಲಕ್ಷಣವಾಗಿಯೂ, ಜ್ಞಾನಾನಂದಸ್ವರೂಪತ್ವ, ಜ್ಞಾನಾನಂದಗುಣಕತ್ವ, ಅಣುತ್ವ, ವಿಶಿಷ್ಟವಸ್ತು ಪ್ರತಿಪಾದಕವಾಗಿಯೂ ಇರುವ ಮಕಾರವನ್ನ ಅನುಸಂಧಾನ ಮಾಡತಕ್ಕದ್ದು. ತಥಾಚ, ಮಕಾರಾರ್ಥಾನುಸಂಧಾನದಿಂದ ಜೀವಾತ್ಮಸ್ವರೂಪವು ದೇಹಾದಿ ವಿಲಕ್ಷಣವೆಂದು ತೋರುವದರಿಂದ ದೇಹಾತ್ಮಭ್ರಾಂತಿಯು ನಿವರ್ತಿಸುವದೆಂದು ಭಾವವು.

ತಾನು, ಭಗವಚ್ಛೇಷನಲ್ಲವು, ಸ್ವತಂತ್ರನು. ಎಂಬ ಬುದ್ಧಿಯುಳ್ಳವನಾದರೆ, ಪ್ರಣವದಲ್ಲಿ ಪ್ರಥಮಪದವನ್ನು (ಅವರಕ್ಷಣಗತಿಹಿಂಸಾದಿಷು, ಎಂಬ ಧಾತುವಿನಿಂದ ವ್ಯುತ್ಪನ್ನವಾಗಿ, ಸರ್ವರಕ್ಷಕತ್ವ, ಸರ್ವಕಾರಣತ್ವ, ಸರ್ವಸಂಹಾರಕತ್ವ, ಲಕ್ಷ್ಮೀಪತಿತ್ವ, ಸರ್ವಶೇಷಿತ್ವ, ಸರ್ವಕಲ್ಯಾಣಗುಣಾತ್ಮಕತ್ವ ವಿಶಿಷ್ಟ ವಿಷ್ಣುಪ್ರತಿಪಾದಕವಾದ ಅಕಾರವನ್ನ) ಚೆನ್ನಾಗಿ ತಿಳಿಯತಕ್ಕದ್ದು.

ತಥಾಚ॥ ಅಕಾರಾರ್ಥಾನುಸಂಧಾನದಿಂದ ಸರ್ವಪ್ರಕಾರದಿಂದಲೂ, ಭಗವಂತನಿಗೆ ಶೇಷಿತ್ವವೂ, ತನಿಗೆ ಶೇಷತ್ವವೂ ತೋರುವದರಿಂದ ಸ್ವಾತಂತ್ರ್ಯಭ್ರಾಂತಿಯು ನಿವರ್ತಿಸುವದೆಂದು ಭಾವವು.

ಭಗವದ್ಭಕ್ತ್ಯಾದಿ ಭಾಗವತಾಚಾರ್ಯವ್ಯತಿರಿಕ್ತರುಗಳಿಗೆ ತಾನು ಶೇಷನು ಎಂಬಬುದ್ಧಿಯುಂಟಾದರೆ ಪ್ರಣವದಲ್ಲಿ ದ್ವಿತೀಯವಾದಪದವನ್ನ (ಅವಧಾರಣಾರ್ಥಕವಾದ ಅಕಾರಾನ್ವಿತವಾದ ಉಕಾರವನ್ನ) ಚನ್ನಾಗಿ ಅನುಸಂಧಾನ ಮಾಡತಕ್ಕದ್ದು.

ತಥಾಚ॥ ಉಕಾರಾರ್ಥಾನುಸಂಧಾನದಿಂದ ಪರಮಾತ್ಮ ಜೀವಾತ್ಮರುಗಳಿಗೆ ಶೇಷಿ, ಶೇಷ, ಭಾವರೂಪಸಂಬಂಧವು ಅನನ್ಯಾರ್ಹವು ಎಂದು ತೋರುವದರಿಂದ ಇತರ ಶೇಷತ್ವಭ್ರಾಂತಿಯು ನಿವರ್ತಿಸುವದೆಂದು ಭಾವವು.

ಸ್ವರಕ್ಷಣದಲ್ಲಿ ತಾನು ಉದ್ಯುಕ್ತನಾದರೆ (ಸಾಧನಾಂತರಾನುಷ್ಠಾನದಲ್ಲಿ ತಾತ್ಪರ್ಯವುಳ್ಳವನಾದರೆ) ನಮಃ ಎಂಬ ಪದವನ್ನು, (ಅನನ್ಯರಕ್ಷಕತ್ವಪ್ರತಿಪಾದಕವಾದ ನಖಂಡ, ನ, ಮ, ಸ್ಸಿನಿಂದ ಕೂಡಿರುವ ಅಖಂಡನಮಃಪದವನ್ನ) ಚನ್ನಾಗಿ ಅನುಸಂಧಾನ ಮಾಡತಕ್ಕದ್ದು.

ತಥಾಚ॥ ನಮಃ ಪದಾರ್ಥಾನುಸಂಧಾನದಿಂದ ಭಗವಂತನೇ ನನಿಗೆ ರಕ್ಷಕನು, ನಾನಲ್ಲವು, ಎಂದು ತೋರುವದರಿಂದ ಸಾಧನಾಂತರ ಬುದ್ಧಿಯು ನಿವರ್ತಿಸುವದೆಂದು ಭಾವವು.

ಆಪತ್ಕಾಲದಲ್ಲಿ ರಕ್ಷಕರಾಗದೇ, ಸಂಪತ್ಕಾಲದಲ್ಲಿ ಸರ್ವಸ್ವಾಪಹಾರರಾದಂಥಾ ಬಾಂಧವರಲ್ಲಿ ಆಸಕ್ತನಾದರೆ, ನಾರಾಯಣನೆಂಬ ಪದವನ್ನ (ತತ್ಪುರುಷಸಮಾಸದಲ್ಲಿ, ಕರ್ಮಣಿ ವ್ಯುತ್ಪನ್ನವಾದ ಅಯನಪದದಿಂದ, ಮಾತಾ, ಪಿತಾ, ಭ್ರಾತಾ, ನಿವಾಸಃ, ಶರಣಂ, ಸುಹೃತ್, ಗತಿಃ, ನಾರಾಯಣಃ ಇತ್ಯಾದಿ ಪ್ರಮಾಣಾನುಸಾರ ಸರ್ವವಿಧ ಬಂಧುವಾದ ನಾರಾಯಣನನ್ನ) ಚನ್ನಾಗಿ ಅನುಸಂಧಾನ ಮಾಡತಕ್ಕದ್ದು.

ತಥಾಚ॥ ನಾರಾಯಣಶಬ್ದಾರ್ಥಾನುಸಂಧಾನದಿಂದ ಭಗವಂತನೇ ನನಗೆ

ನಿರುಪಾಧಿಕಬಂಧುವು, ಇತರರು ಸೋಪಾಧಿಕರು ಎಂದು ತೋರುವದ
ರಿಂದ ಬಾಂಧವರಲ್ಲಿ ಆಸಕ್ತಿಯು ನಿವರ್ತಿಸುವದೆಂದು ಭಾವವು.

ಶಬ್ದಸ್ಪರ್ಶಾದಿ ವಿಷಯಗಳಲ್ಲಿ ಅಭಿಲಾಷೆವುಳ್ಳವನಾವರೆ ನಾರಾಯಣ
ಪದೋತ್ತರದಲ್ಲಿರುವ ಭಗವತ್ಕೈಂಕರ್ಯಪ್ರಕಾಶಕವಾದ ಸಖಂಡ, ನ,
ಮಃ, ಪದದಿಂದ ಕೂಡಿರುವ ವ್ಯಕ್ತಚತುರ್ಥಿಯನ್ನು ಅನುಸಂಧಾನ
ಮಾಡತಕ್ಕದ್ದು.

ತಥಾಚ॥ ವ್ಯಕ್ತಚತುರ್ಥಿಯ ಅರ್ಥಾನುಸಂಧಾನದಿಂದ ಅದರಲ್ಲಿ ಹೇಳ
ಲ್ಪಟ್ಟ ಕೈಂಕರ್ಯವು ಭಗವಂತನಿಗೇನೆ, ನನಿಗೆ ಅಲ್ಲವು ಎಂಬದಾಗಿ
ನಮಶ್ಶಬ್ದದಿಂದ ತನಿಗೆ, ಮತ್ತು ಭಗವಂತನಿಗೆ ಸಹಾ ಅತಿಶಯವನ್ನುಂ
ಟುಮಾಡುವದರಲ್ಲಿ ಅರ್ಹತೆಯುಳ್ಳ ಕೈಂಕರ್ಯದಲ್ಲಿಕೂಡಾ ಸ್ವಾರ್ಥತ್ವವು
ನಿರಾಕೃತವಾಗಿರುವ ಸಂದರ್ಭದಲ್ಲಿ ಕೇವಲವಾಗಿ ಸ್ವಾರ್ಥತೆಯಿಂದ ಅತ್ಯಂ
ತಸ್ವರೂಪವಿರುದ್ಧವಾದ ವಿಷಯಾಂತರನಿವೃತ್ತಿಯು ನ್ಯಾಯಸಿದ್ಧವಾದವು
ಯುಕ್ತ ಭಗವತ್ಕೈಂಕರ್ಯವನ್ನೆ ವಿನಾ ಇತರವಾದ, ದುಃಖ ಬಹುಳ
ವಾಗಿಯೂ ಅತ್ಯಲ್ಪ ಸುಖಜನಕವಾಗಿಯೂ, ಪರಿಣಾಮದಲ್ಲಿ ವಿರಸವಾಗಿ
ಯೂ, ಚಂಚಲವಾಗಿಯೂ ಇರುವ, ಸಕಲವಿಷಯಗಳಲ್ಲಿಯೂ ವಿಮುಖ
ನಾಗುವನೆಂದು ಭಾವವು.

ಶ್ಲೋ॥ ಪ್ರಾಪ್ಯಸ್ಯಬ್ರಹ್ಮಣೋರೂಪಂ ಪ್ರಾಪ್ತುಶ್ಚಪ್ರತ್ಯಗಾತ್ಮನಃ ।
ಪ್ರಾಪ್ತ್ಯುಪಾಯಂಫಲಂಪ್ರಾಪ್ತೇಃ ತಥಾಪ್ರಾಪ್ತಿವಿರೋಧಿಚ॥
ವದಂತಿಸಕಲಾವೇದಾಸ್ಸೇತಿಹಾಸಪುರಾಣಕಾಃ । ಮುನಯಶ್ಚ
ಮಹಾತ್ಮಾನ ವೇದವೇದಾಂತಪಾರಗಾಃ ॥

ಎಂಬ ಪ್ರಕಾರದಿಂದ ಸಕಲ ವೇದಶಾಸ್ತ್ರಗಳೂ ಅರ್ಥಪಂಚಕವನ್ನೇ
ಪ್ರತಿಪಾದಿಸುವವುಯುಕ್ತ ಅದರ ಸಂಗ್ರಹವಾದ ಮೂಲಮಂತ್ರದಲ್ಲಿಯೂ
ಅರ್ಥಪಂಚಕವು ಪ್ರತಿಪಾದಿಸಲ್ಪಟ್ಟಿರುವದು ಅದು ಹೇಗಂದರೆ,—

ಪ್ರಣವದಲ್ಲಿ ಜೀವಾತ್ಮಸ್ವರೂಪವೂ, ಅಖಂಡನಮಸ್ಸಿನಿಂದ ಉಪಾಯ
ಸ್ವರೂಪವೂ, ಸಖಂಡನಮಸ್ಸಿನಲ್ಲಿ ಷಷ್ಠ್ಯಂತಿಮಕಾರ-(ಮಮ)ದಿಂದ

ವಿರೋಧಿ ಸ್ವರೂಪವೂ ನಾರಾಯಣ ಪದದಿಂದ ಪರಸ್ವರೂಪವೂ, ವ್ಯಕ್ತ ಚತುರ್ಥಿಯಿಂದ ಫಲಸ್ವರೂಪವೂ, ಹೀಗೆ ಅರ್ಥಪಂಚಕವನ್ನ ತಿಳಿಯತಕ್ಕದ್ದು. ಇದರಿಂದಲೇ ಶ್ಲೋಕ ತಾತ್ಪರ್ಯವೂ ಸಂಗ್ರಹವಾಗಿ ವಿವರಿಸಿದ್ದಾಗಿದೆ.

ಶ್ಲೋ॥ ಪಿತಾಚರಕ್ಷಕಶ್ಶೇಷೀಭರ್ತಾಜ್ಞೇಯೋರಮಾಪತಿಃ ।
ಸ್ವಾಮ್ಯಾಧಾರೋಮಮಾತ್ಮಾಚಭೋಕ್ತಾಚೇತಿಮನೂದಿತಃ ।

ಎಂಬ ಪ್ರಕಾರ, ಕಾರಣತ್ವವಾಚಿಯಾದ ಅಕಾರದಿಂದ ಪಿತೃತ್ವವೂ, ರಕ್ಷಕತ್ವ ವಾಚಿಯಾದ ಅಕಾರದಿಂದ ರಕ್ಷಕತ್ವವೂ, ಲುಪ್ತ ಚತುರ್ಥಿಯಿಂದ, ಅರ್ಥಾತ್‌ಶೇಷತ್ವ ಪ್ರತಿಸಂಬಂಧಿತ್ವದಿಂದ ಶೇಷಿತ್ವವೂ, ಅನನ್ಯಾರ್ಹತ್ವ ವಾಚಿಯಾದ ಉಕಾರದಿಂದ ಭಾರ್ಯಾತ್ವ ಪ್ರತಿಸಂಬಂಧಿತ್ವದಿಂದ ಭರ್ತೃತ್ವವೂ, ಜ್ಞಾತೃತ್ವವಾಚಿಯಾದ ಮಕಾರದಿಂದ ತತ್ಪ್ರತಿ ಸಂಬಂಧಿತ್ವದಿಂದ ಈಶ್ವರನಿಗೆ ಜ್ಞೇಯತ್ವವೂ, ನಾರಾಯಣ ಪದದಲ್ಲಿ ತತ್ಪುರುಷ ಸಮಾಸದಿಂದ ಸ್ವಾಮಿತ್ವವೂ, ಆಧಾರತ್ವವೂ, ಬಹುವ್ರೀಹಿ ಸಮಾಸದಿಂದ ಅಂತರ್ಯಾಮಿತ್ವರೂಪವಾದ ಆತ್ಮತ್ವವೂ, ವ್ಯಕ್ತ ಚತುರ್ಥಿಯಿಂದ, ಕೈಂಕರ್ಯ ರೂಪಭೋಗದಲ್ಲಿ ನಮಸ್ಸಿನಿಂದ ಸ್ವಾತ್ಮ (ಜೀವಾತ್ಮ)ನಿಗೆ ಭೋಕ್ತೃತ್ವ ನಿರಾಸ (ತಪ್ಪುವಿಕೆ) ದಿಂದ ಭೋಕ್ತೃತ್ವವೂ ಸಹ ಭಗವಂತನಿಗೇ ಸೇರಿಸಲ್ಪಟ್ಟಿತೆಂದು ಮೂಲಮಂತ್ರದಿಂದ ನವವಿಧ ಸಂಬಂಧಗಳೂ ಪ್ರತಿಪಾದಿಸಲ್ಪಟ್ಟಿರುವವೆಂದು ತಿಳಿಯತಕ್ಕದ್ದು. ಇಲ್ಲಿ ಬಹಳವಿಷಯಗಳು ಬರಿಯಲ್ಪಡತಕ್ಕದ್ದಿದ್ದಾಗ್ಯೂ ವಿಸ್ತರ ಭೀತಿಯಿಂದ ಬರಿಯಲ್ಪಡಲಿಲ್ಲವು ಮಾತ್ರ ತೋರಿಸಲ್ಪಟ್ಟಿದೆ.

ಶ್ರೀ ನಿಗಮಾಂತ ಮಹಾ ದೇಶಿಕರವರ ಶ್ರೀರಹಸ್ಯತ್ರಯ ಸಾರದಲ್ಲಿ ಪ್ರಣವಾರ್ಥವು ಪ್ರಕಾರಾಂತರದಿಂದಲೂ ವಿವರಿಸಲ್ಪಟ್ಟಿರುತ್ತೆ. ಅದು ಹೇಗೆಂದರೆ—

ಶ್ಲೋ॥ ಲಕ್ಷ್ಮ್ಯಾಸಹಹೃಷೀಕೇಶೋದೇವ್ಯಾಕಾರುಣ್ಯರೂಪಯಾ ।
ರಕ್ಷಕಸ್ಸರ್ವಸಿದ್ಧಾಂತೇವೇದಾಂತೇಪಿಚಗೀಯತೇ ।

ತಾತ್ಪರ್ಯ ॥ ಪರಮಕೃಪಾಳುವಾದ ಲಕ್ಷ್ಮೀದೇವಿಯೊಡನೆ ಶ್ರೀ ನಾರಾ

ಯಣನು ರಕ್ಷಕನೆಂದು ಸಕಲ ಸಿದ್ಧಾಂತಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಹೇಳಲ್ಪಟ್ಟಿರುವುದು. ಎಂಬಂತೆ, ಪ್ರಣವದಲ್ಲಿರುವ, ಅಕಾರಕ್ಕೆ ಲಕ್ಷ್ಮೀವಿಶಿಷ್ಟನಾದ ನಾರಾಯಣನೇ, ಸನ್ನಿಯೋಗ ಶಿಷ್ಟ ನ್ಯಾಯದಿಂದ (ಸನ್ನಿಯೋಗ ಶಿಷ್ಟ ನ್ಯಾಯವೆಂದರೆ. ಒಂದನ್ನ ಹೇಳಿದ ಸ್ಥಳದಲ್ಲಿಯೇ. ಅದನ್ನ ಯೆಂದಿಗೂ ಬಿಡದಿರುವ ಮತ್ತೊಂದನ್ನ ಹೇಳುವುದು. ಸೂರ್‍ಯನನ್ನ ಹೇಳಿದ ವೊಡನೆಯೇ, ಪ್ರಭೆಯನ್ನ ಹೇಳಿದಂತೆ, ಇನ್ನೊಂದು ಉದಾಹರಣವು, ಗರ್ಭಿಣೀಸ್ತ್ರೀಯನ್ನ ಕರಿಯಬೇಕು, ಅಂದರೆ ಗರ್ಭವನ್ನ ಬೇರೇ ಕರಿಯಬೇಕಾದುದಿಲ್ಲ. ಗರ್ಭಿಣಿಯು ಹೊರಟುಹೋದಳು ಎಂದರೆ ಗರ್ಭವೂ ಹೊರಟುಹೋಯಿತು ಎಂದು ಬೇರೆ ಹೇಳಬೇಕಾದುದಿಲ್ಲಾ, ಹೀಗೆ ವೊಂದನ್ನ ಹೇಳಿದಮಾತ್ರದಿಂದಲೇ ಮತ್ತೊಂದು ಯಲ್ಲಿಸಿದ್ಧವಾಗುವುದೋ ಅದೇ ಸನ್ನಿಯೋಗ ಶಿಷ್ಟನ್ಯಾಯವು ") ಪ್ರತಿಪಾದ್ಯನು ಆದಪ್ರಯುಕ್ತ, ಅಕಾರ ವಾಚ್ಯರಾದ ಲಕ್ಷ್ಮೀ ನಾರಾಯಣರುಗಳಿಗೆ ಜೀವಾತ್ಮನು ಶೇಷ ಭೂತನೆಂದು ಭಾವವು.

ಅಥವಾ, "ಉಕಾರೇಣೋಚ್ಯತೇಲಕ್ಷ್ಮೀಃ" ಉಕಾರಕ್ಕೆ ಲಕ್ಷ್ಮಿಯು ಅರ್ಥವು, ತಥಾಚ ಅಕಾರ, ಉಕಾರ, ವಾಚ್ಯರಾದ ನಾರಾಯಣ ಲಕ್ಷ್ಮೀ ದೇವಿಗಳಿಗೆ ಜೀವಾತ್ಮನು ದಾಸನು, ಎಂಬರ್ಥವು, ಈ ಅರ್ಥವನ್ನ ರಾಮಚಂದ್ರನೂ, ಸೀತಾದೇವಿಯೂ, ಮುಂದೆ ನಡೆದರು ಅವರ ಹಿಂಭಾಗದಲ್ಲಿ ದಾಸನಾದ ಲಕ್ಷ್ಮಣನು ನಡೆದನು ಎಂಬಸ್ಥಳದಲ್ಲಿ ತಿಳಿಯುವದು.

ಉಕಾರಕ್ಕೆ ಅಷ್ಟಶ್ಲೋಕಿಯ ಪ್ರಕಾರ ಅವಧಾರಣಾರ್ಥದಲ್ಲಿ ಅರ್ಜುನರಥವೇ ದೃಷ್ಟಾಂತವು, ಅಲ್ಲಿ ಶೇಷಿಯಾದ ಕೃಷ್ಣನು ಮಾತ್ರ ಮುಂದಾಗಿಯೂ, ಶೇಷನಾದ ಅರ್ಜುನನು ಹಿಂಭಾಗದಲ್ಲಿಯೂ, ಇದ್ದಾರೆ ಇತ್ಯಾದಿಯನ್ನ.

ಅಗ್ರತಃ ಪ್ರಯಯೌರಾಮಃ ಎಂಬುವ ಸ್ಥಳದಲ್ಲಿಯೂ ಅರ್ಜುನ ರಥದಲ್ಲಿಯೂ, ತಿಳಿಯತಕ್ಕದ್ದು ಎಂದು ಅಪ್ಪಣೆ ಕೊಡಿಸಿರುತ್ತಾರೆ, ವಿಸ್ತಾರಭೀತಿಯಿಂದ ಸಂಗ್ರಹವಾಗಿ ಇಲ್ಲಿ ಬರಿಯಲ್ಪಟ್ಟಿದೆ.

ಈ ಮೂಲ ಮಂತ್ರಾರ್ಥವನ್ನ ಸಕೃದಾವೃತ್ತಿ ನೋಡುವದರಿಂದಲೇ

ಗ್ರಹಿಸುವದಕ್ಕೆ ಆಗುವದಿಲ್ಲಾ. ಇದು ಶಾಸ್ತ್ರವಿಚಾರವಾದ ಪ್ರಯುಕ್ತ ಇದನ್ನ ಇನ್ನೂ ಸುಲಭವಾಗಿಬರಿಯಲು ಆಗುವದಿಲ್ಲಾ, ಪ್ರಮಾಣಾಪೇಕ್ಷೆಯುಳ್ಳವರಿಗಾಗಿ ಅಲ್ಲಲ್ಲಿ ವ್ಯಾಖ್ಯಾನ ಪಂಕ್ತಿಗಳೂ, ಭಾಷ್ಯ ಪಂಕ್ತಿಯೂ, ಧಾತುಗಳೂ, ಸಮಾಸವೂ ವಿವರಿಸಲ್ಪಟ್ಟಿಧೆ ಎಂದು ತಿಳಿಯತಕ್ಕದ್ದು.

* ಈ ಅಷ್ಟಾಕ್ಷರಜಪವು, ಸೂರ್ಯೋಪಸ್ಥಾನಾತ್ಪೂರ್ವವೇ, ಕಾಲವಿದ್ದಲ್ಲಿ, ಅನುಷ್ಠಿಸತಕ್ಕದ್ದು, ಗಾಯಿತ್ರಿ ಜಪಾನಂತರ ಸೂರ್ಯೋದಯವಾದ ಪಕ್ಷ ಉಪಸ್ಥಾನಾ ನಂತರವೇ ಅನುಷ್ಠಿಸತಕ್ಕದ್ದು.

## ॥ ಅಥ ದ್ವಯ ಜಪವಿಧಿಃ ॥

ಅತ್ರಪಾದ್ಮೇ ॥ ಬ್ರಹ್ಮಾಣಂ ಪ್ರತಿ ಭಗವದ್ವಚನಂ ॥

ಶ್ಲೋ॥ ಮಾಮೇಕಂಚಶ್ರಿಯಾಯುಕ್ತಂ ಭಕ್ತಿಯುಕ್ತೋನರೋತ್ತಮಃ ॥ ದ್ವಯೇನಮಂತ್ರರತ್ನೇನ, ಮತ್ಪ್ರಿಯೇಣಭಜೇತ್ಸದಾ । ಅಚಿರಾನ್ಮತ್ಪ್ರಸಾದೇನಮಲ್ಲೋಕಂಚಸಗಚ್ಛತಿ । ದುರ್ವೃತ್ತೋವಾಸುವೃತ್ತೋವಾಮೂರ್ಖಃ ಪಂಡಿತಏವವಾ । ಲಕ್ಷ್ಮೀಶಂಮಾಂಸುರೇಶೇಶಂದ್ವಯೇನ ಶರಣಂಗತಃ ॥ ಮಲ್ಲೋಕಮಚಿರಾಲ್ಲಬ್ಧ್ವಾಮತ್ಸಾಯುಜ್ಯಂಸಗಚ್ಛತಿ ॥ ಪುರಾಮಂತ್ರದ್ವಯಂಬ್ರಹ್ಮನ್ವಿಷ್ಣುಲೋಕೇಮಹಾಪುರೇ । ತಸ್ಮಿನ್ನಂತಃಪುರೇಲಕ್ಷ್ಮ್ಯೈಮಯಾದತ್ತಂಸನಾತನಂ।ಲಕ್ಷ್ಮ್ಯಾಲಬ್ಧಂತಯಾಚೈವಮಂತ್ರರತ್ನಂದ್ವಯಂವಿಭೋ ॥

ತಾತ್ಪರ್ಯ ॥ ಪದ್ಮಪುರಾಣಸಲ್ಲಿ ಚತುರ್ಮುಖನನ್ನು ಕುರಿತು ಭಗವಂತನು ಹೇಳುತ್ತಾನೆ.

ಅಯ್ಯಾ ಚತುರ್ಮುಖನೇ, ಲಕ್ಷ್ಮೀವಿಶಿಷ್ಟನಾದ ನನ್ನೊಬ್ಬನನ್ನ

---

* ಉಪಸ್ಥಾನಾತ್ಪೂರ್ವವೇ ಅಷ್ಟಾಕ್ಷರಮಂತ್ರಜಪವು ಕರ್ತವ್ಯವೆಂದು ಶ್ರೀಮದಹೋಬಲ ರಂಗನಾಥ ಯತೀಂದ್ರಕೃತಾಹ್ನಿಕದಲ್ಲಿ ಹೇಳಲ್ಪಟ್ಟಿಧೆ.

ಭಕ್ತಿಯಿಂದ ಯಾವ ಮನುಷ್ಯನು, ಮಂತ್ರರತ್ನವೆಂಬದಾಗಿ ಪ್ರಸಿದ್ಧವಾದ ನನಗೆ ಇಷ್ಟವಾದ ದ್ವಯಮಂತ್ರದಿಂದ ಶರಣ ಹೊಂದುವನೋ, ಅಂತಹ ಮನುಷ್ಯನು ಪುನಃ ಈ ಲೋಕದಲ್ಲಿ ಹುಟ್ಟದೇ ನನ್ನ ಅನುಗ್ರಹದಿಂದ ವೈಕುಂಠವೆಂಬ ನನ್ನ ಲೋಕವನ್ನ ಹೊಂದುತ್ತಾನೆ.

ದೇವಶ್ರೇಷ್ಟರಿಗೂ ನಾಯಕನಾದ, ಲಕ್ಷ್ಮೀಪತಿಯಾದ ನನ್ನನ್ನ ದ್ವಯಮಂತ್ರದಿಂದ ಶರಣ ಹೊಂದಿದವನು, ಯೋಗ್ಯನಾಗಲೀ, ಅಯೋಗ್ಯನಾಗಲೀ, ಮೂರ್ಖನಾಗಲೀ, ವಿದ್ವಾಂಸನಾಗಲೀ, ತಾರತಮ್ಯವಿಲ್ಲದೇ,ಪರಮಪದದಲ್ಲಿ ಮೋಕ್ಷ ಸಾಮ್ರಾಜ್ಯವನ್ನ ಹೊಂದುತ್ತಾನೆ.

ಅಯ್ಯಾ ಬ್ರಹ್ಮನೇ, ಈ ದ್ವಯವು (ಯರಡುಮಂತ್ರವೂ) ಪೂರ್ವದಲ್ಲಿ ವೈಕುಂಠದಲ್ಲಿ ಅಂತಃಪುರದಲ್ಲಿ ಶ್ರೀಮಹಾ ಲಕ್ಷ್ಮಿಗೆ ನಾನು ಉಪದೇಶಿಸಿದೆನು, ಉಪದೇಶಾನಂತರ ಲಕ್ಷ್ಮಿಯಿಂದ ಈ ಮಂತ್ರರತ್ನವು ಹೊಂದಲ್ಪಟ್ಟಿತು.

ಹೀಗೆ ಮಹಾವೈಭವವುಳ್ಳದ್ದಾದ್ದರಿಂದಲೇ ಶ್ರೀಭಾಷ್ಯಕಾರರು (ಸದೈವಂವಕ್ತಾ) ಎಂಬದಾಗಿ ಗದ್ಯದಲ್ಲಿ ಸರ್ವದಾ ದ್ವಯಾನುಸಂಧಾನ ಮಾಡತಕ್ಕದ್ದೆಂದು ಅಪ್ಪಣೆ ಕೊಡಿಸಿ ಇರುತ್ತಾರೆ.

## ಅಥ ದ್ವಯ ಮಂತ್ರಜಪ ಪ್ರಯೋಗಃ ॥

ಮೂಲಮಂತ್ರೇಣ ॥ ಪಂಚವಿಂಶತಿಕೃತ್ವಃ ಅಭ್ಯಸ್ತೇನತ್ರಿಃ ಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಶರಣಾಗತಿ ಮಹಾಮಂತ್ರಜಪಂಕರಿಷ್ಯೇ, ಇತಿಸಂಕಲ್ಪ್ಯ, ಅಸ್ಯಶ್ರೀ ಶರಣಾಗತಿ ಮಹಾಮಂತ್ರಸ್ಯ ಲಕ್ಷ್ಮೀನಾರಾಯಣಋಷಿಃ, ದೇವೀಗಾಯತ್ರೀಛಂದಃ, ಪರಮಾತ್ಮಾ ಶ್ರೀ ಲಕ್ಷ್ಮೀನಾರಾಯಣೋದೇವತಾ, ಶ್ರೀಂ, ಬೀಜಂ, ನಮಶ್ಶಕ್ತಿಃ, ಲಕ್ಷ್ಮೀನಾರಾಯಣ ಪ್ರೀತ್ಯರ್ಥೇ ಜಪೇವಿನಿಯೋಗಃ, ಓಂ, ವೀರ್ಯಾಯಾಸ್ತ್ರಾಯಫಟ್.

| | | |
|---|---|---|
| ಶ್ರೀಮನ್ನಾರಾಯಣ ಚರಣೌ | ... | ಅಂಗುಷ್ಠಾಭ್ಯಾಂನಮಃ |
| ಶರಣಂ | ... | ತರ್ಜನೀಭ್ಯಾಂನಮಃ |
| ಪ್ರಪದ್ಯೇ, | ... | ಮಧ್ಯಮಾಭ್ಯಾಂನಮಃ |

| | | |
|---|---|---|
| ಶ್ರೀಮತೇ, | ... | ಅನಾಮಿಕಾಭ್ಯಾಂನಮಃ, |
| ನಾರಾಯಣಾಯ, | ... | ಕನಿಷ್ಠಿಕಾಭ್ಯಾಂನಮಃ, |
| ನಮಃ | | ಕರತಲಕರಪೃಷ್ಠಾಭ್ಯಾಂನಮಃ |
| ಶ್ರೀಮನ್ನಾರಾಯಣಚರಣೌ, | | ಜ್ಞಾನಾಯಹೃದಯಾಯನಮಃ |
| ಶರಣಂ | ... | ಐಶ್ವರ್ಯಾಯಶಿರಸೇಸ್ವಾಹಾ |
| ಪ್ರಪದ್ಯೇ, | .. | ಶಕ್ತ್ಯೈಶಿಖಾಯೈವೌಷಟ್. |
| ಶ್ರೀಮತೇ | ... | ಬಲಾಯಕವಚಾಯಹುಂ. |
| ನಾರಾಯಣಾಯ | ... | ತೇಜಸೇ ನೇತ್ರಾಭ್ಯಾಂ ವೌಷಟ್. |
| ನಮಃ | ... | ವೀರ್ಯಾಯಾಸ್ತ್ರಾಯಫಟ್. |
| ಭೂರ್ಭುರ್ವಸ್ಸುವರೋಂ | ... | ಇತಿ ದಿಗ್ಬಂಧಃ. |

ಈ ನ್ಯಾಸಕ್ರಮಗಳೂ, ಸಪ್ತವ್ಯಾಹೃತಿ ಮತ್ತು ಗಾಯತ್ರೀ ನ್ಯಾಸಗಳ ಕ್ರಮಪ್ರಕಾರವೇ ಅನುಷ್ಠಿಸಲ್ಪಡತಕ್ಕವುಗಳಾದಪ್ರಯುಕ್ತ ಅಲ್ಲಿಯೇ ನೋಡತಕ್ಕದ್ದು.

## ॥ ಧ್ಯಾನಂ ॥

ಶ್ಲೋ॥ ಕ್ಷೀರಾಮ್ಭೋನಿಧಿರತ್ನಮಣ್ಟಪಮಹಾ ಸೌವರ್ಣಸಿಂಹಾ
ಸನೇ । ವಾಮಾಂಕೇಸ್ಥಿತಯಾಪ್ರಸನ್ನವದನಂ ಶ್ರೀಕಾಂ
ತಯಾಲಿಂಗಿತಂ ॥ ದೋರ್ದಣ್ಡಾಂಕಿತ ಶಂಖಪಂಕಜ
ಗದಾ ಚಕ್ರೈರುದಾರಶ್ರಿಯಂ । ತ್ವಾಂನಿತ್ಯಂಕಲಯಾ
ಮಿ ಜನ್ಮವಿಮುಖೋ ಲಕ್ಷ್ಮೀಶನಾರಾಯಣ. ॥

ತಾತ್ಪರ್ಯ॥ ಕ್ಷೀರಸಮುದ್ರಮಧ್ಯವರ್ತಿಯಾದ ರತ್ನಮಂಟಪದಲ್ಲಿ ಸ್ವರ್ಣಸಿಂಹಾಸನಾರೂಢನಾಗಿ ವಾಮಾಂಕಸ್ಥಿತೆ (ಎಡತೊಡೆಯಲ್ಲಿ ಕುಳಿತಿರುವ)ಯಾದ ಲಕ್ಷ್ಮೀದೇವಿಯಿಂದ ಆಲಿಂಗಿತನಾಗಿ (ಆ ಕಾರಣದಿಂದಲೇ) ನಿರ್ಮಲವಾದ ಮುಖಮಂಡಲವುಳ್ಳವನಾಗಿಯೂ, ಬಾಹುದಂಡಗಳಲ್ಲಿ ಪ್ರಕಾಶಿಸುತ್ತಲಿರುವ ಶಂಖ, ಕಮಲ, ಗದಾ, ಚಕ್ರಾದಿಗಳಿಂದ ಅಧಿಕವಾಗಿ ಪ್ರಕಾಶಿಸುವನಾಗಿಯೂ ಇರುವ ನಿನ್ನನ್ನು, ಹೇ! (ಲಕ್ಷ್ಮೀ)

ಶ್ರಿಯಃಪತಿಯಾದ ನಾರಾಯಣನೇ ಜನ್ಮವಿಘ್ನುಖ (ಪುನಃ ಜನ್ಮ, ಜರಾ, ಮರಣಗಳಲ್ಲಿ ತಾತ್ಪರ್ಯವಿಲ್ಲದವನಾಗಿ) ನಾಗಿ ನಾನು ಧ್ಯಾನ ಮಾಡುತ್ತೇನೆ.

(ಭಗವದ್ದಿವ್ಯ ಮಂಗಳವಿಗ್ರಹ ಧ್ಯಾನಪೂರ್ವಕವಾಗಿ ಮಂತ್ರರತ್ನದಿಂದ ಶರಣಹೊಂದರೆ ಪುನಃ ಜನ್ಮಾದಿಗಳಿಲ್ಲದೆ ಮೋಕ್ಷಸಾಮ್ರಾಜ್ಯದಲ್ಲಿ ಭಗವತ್ಕೈಂಕರ್ಯ ಪ್ರಾಪ್ತಿಯಿಂದ ಕೃತಾರ್ಥನಾಗುವನೆಂದು ಪರಮ ತಾತ್ಪರ್ಯವು.)

॥ ಶ್ರೀಮನ್ನಾರಾಯಣ ಚರಣೌಶರಣಂಪ್ರಪದ್ಯೇ ॥

ಶ್ರೀಮತೇ ನಾರಾಯಣಾಯನಮಃ.

ಇತಿ ಯಥಾಶಕ್ತಿ ಜಪೇತ್.

---

## ॥ ಅಥ ದ್ವಯಾರ್ಥ ವಿಚಾರಃ ॥

ಮೂಲಮಂತ್ರದಲ್ಲಿ (ಅಷ್ಟಾಕ್ಷರಿಯಲ್ಲಿ) ಸಂಗ್ರಹಿಸಲ್ಪಟ್ಟ ಅರ್ಥಗಳನ್ನೇ ದ್ವಯಮಂತ್ರವು ವಿವರಿಸುವದು.

ಇದರೊಳ್ ಪೂರ್ವಖಂಡ ( ಶ್ರೀಮನ್ನಾರಾಯಣ ಚರಣೌಶರಣಂ ಪ್ರಪದ್ಯೇ ) ವು ಒಂದೇವಾಕ್ಯವಾಗಿ ಉಪಾಯಪರವಾಗಿರುವದು. ಉತ್ತರಖಂಡ (ಶ್ರೀಮತೇ ನಾರಾಯಣಾಯನಮಃ) ವು ಎರಡು ವಾಕ್ಯವಾಗಿ ಉಪೇಯ (ಪ್ರಾಪ್ಯ) ಪರವಾಗಿರುವದು. ಈ ಎರಡು ವಾಕ್ಯಗಳೂ ಮೂರು ಮೂರು ಪದಗಳುಳ್ಳದ್ದಾಗಿರುವವು.

ಪದ॥ ಶ್ರೀಮನ್ನಾರಾಯಣಚರಣೌ, ಶರಣಂ, ಪ್ರಪದ್ಯೇ, ಶ್ರೀಮತೇ, ನಾರಾಯಣಾಯ, ನಮಃ.

ಈ ದ್ವಯಾರ್ಥವು ಅಷ್ಟಶ್ಲೋಕಿಯಲ್ಲಿ ವಿವರಿಸಲ್ಪಟ್ಟಿರುವದು.

ಶ್ಲೋ॥ ನೇತೃತ್ವಂ ನಿತ್ಯಯೋಗಂ ಸಮುಚಿತಗುಣಜಾತಂ ತನು
ಖ್ಯಾಪನಂಚೋಪಾಯಂ ಕರ್ತವ್ಯಭಾಗಂ ತ್ವಥಮಿಥುನ

ಪರಂಪಾ್ರಪ್ಯಮೇವಂ ಪ್ರಸಿದ್ಧಂ ॥ ಸ್ವಾಮಿತ್ವಂಪಾ್ರರ್ಥ
ನಾಂಚ ಪ್ರಬಲತರವಿರೋಧಿ ಪ್ರಹಾಣಂದಶೈತಾನ್ಮಂತ್ರಾ 6
ವಂತ್ರಾಯತೇ ಚೇತ್ಯಧಿಗತ ನಿಗಮಷ್ಟೃಟ್ಪದೋಽಯಂ
ದ್ವಿಖಂಡಃ ॥

ಅವತರಣಿಕಾ॥ ಹಿಂದೆ ವಿವರಿಸಿರುವಪ್ರಕಾರ ನಾಲ್ಕುಶ್ಲೋಕದಿಂದ ಮೂಲಮಂತ್ರಾರ್ಥವನ್ನ ಹೇಳಿ, ಮೂಲಮಂತ್ರವಿವರಣವಾಗಿಯೂ ಅನುಷ್ಠಾನ ಪ್ರಕಾಶಕವಾಗಿಯೂ, ಇರುವ ಆಚಾರ್ಯರು ಪರಿಗ್ರಹೀತವಾದ ಮಂತ್ರರತ್ನವನ್ನ ಎರಡು ಶ್ಲೋಕದಿಂದ ವಿವರಿಸುವರಾಗಿ ಅದರಲ್ಲಿ ಈ ಮೊದಲು ಶ್ಲೋಕದಲ್ಲಿ ಪದಗಳಿಗೆ ಅರ್ಥವನ್ನ ಹೇಳುತ್ತಾರೆ.

ತಾತ್ಪರ್ಯ॥ ಕಠವಲ್ಯಾದ್ಯುಪನಿಷತ್ತುಗಳಲ್ಲಿ ಪ್ರತಿಪಾದ್ಯಮಾನವಾದ " ಆರು ಪದಗಳಿಂದಲೂ, ಎರಡು ಖಂಡಗಳಿಂದಲೂ, ಕೂಡಿರುವ ಈ ದ್ವಯಮಂತ್ರವು " ಈ ಮಂತ್ರಗಳಲ್ಲಿ ಹೇಳಲ್ಪಟ್ಟಿರುವ ಹತ್ತು ಅರ್ಥಗಳನ್ನ ಅನುಸಂಧಾನ ಮಾಡುವವನನ್ನ ರಕ್ಷಿಸುತ್ತದೆ.

ಪೂರ್ವಖಂಡದಲ್ಲಿ ಆರು ಅರ್ಥಗಳೂ, ಉತ್ತರಖಂಡದಲ್ಲಿ ನಾಲ್ಕು ಅರ್ಥಗಳೂ, ಹೇಳಲ್ಪಟ್ಟಿವೆ.

ನೇತೃತ್ವಂ-ಪುರುಷಕಾರತ್ವವನ್ನೂ, ಇದು ಶ್ರೀ ಶಬ್ದಾರ್ಥವು. ನಿತ್ಯಯೋಗಂ-ನಿತ್ಯಸಂಬಂಧವನ್ನೂ, ಇದು ಮತುಪ್‌ಪ್ರತ್ಯಯದ ಅರ್ಥವು. (ಶ್ರೀಮತೇ, ಇಲ್ಲಿ ಮತುಪ್ ಎಂಬ ಪ್ರತ್ಯಯವಿರುವದು.) ಸಮುಚಿತ ಗುಣಜಾತಂ-ಆಶ್ರಯಿಸುವದಕ್ಕೆ ಅರ್ಹವಾದ ಗುಣಸಮೂಹವನ್ನೂ, ಆಶ್ರಯಿಸುವದಕ್ಕೆ ಸೌಕರ್ಯವನ್ನುಂಟುಮಾಡುವದಾಗಿಯೂ, ಆಶ್ರಿತಕಾರ್ಯ ನಿರ್ವಾಹಕಗಳಾಗಿಯೂ ಇರುವ, ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಜ್ಞಾನ, ಶಕ್ತಿ, ಪೂರ್ತಿ, ಪ್ರಾಪ್ತಿಯೇ ಮೊದಲಾದ ಗುಣಗಳನ್ನೂ ಇದು ನಾರಾಯಣಶಬ್ದಾರ್ಥವು.

ಇದರಲ್ಲಿ " ವಾತ್ಸಲ್ಯವು " ತಾಯಿಗೆ ಮಕ್ಕಳಲ್ಲಿರುವಂತೆ ಅಪರಾಧಗಳನ್ನ ಕೂಡಾ ಗಣನೆಮಾಡದಿರುವ ಪ್ರೀತಿವಿಶೇಷವು.

“ಸ್ವಾಮಿತ್ವ” ತನ್ನನ್ನಹೊರತಾಗಿ ಎಲ್ಲಾವಸ್ತುಗಳಲ್ಲಿಯೂ ತನ್ನದೆಂಬ ಅಭಿಮಾನ.

“ಸಾಶೀಲ್ಯ” ಉತ್ತಮನಾದವನು ಅಧಮನೊಡನೆ ಚೆನ್ನಾಗಿಶೇರುವ ಸ್ವಭಾವವಿರುವಿಕೆ. (ರಾಮಚಂದ್ರನು ಗುಹ ಸುಗ್ರೀವಾದಿಗಳಲ್ಲಿ ಇದ್ದಂತೆ.)

“ಸೌಲಭ್ಯ” ಸಕಲಮನುಷ್ಯರ ನೇತ್ರಕ್ಕೂ ವಿಷಯನಾಗುವಿಕೆ, ಈ ನಾಲ್ಕುಗುಣಗಳೂ, ಆಶ್ರಯಿಸಲು ಸೌಕರ್ಯವನ್ನುಂಟುಮಾಡುವವು.

“ಜ್ಞಾನಂ” ಸರ್ವದಾ ಎಲ್ಲವನ್ನೂಸಾಕ್ಷಾತ್ಕರಿಸುವ ಜ್ಞಾನವು. ಇದು ಜೀವಾತ್ಮರುಗಳ ಅನಿಷ್ಟನಿವೃತ್ತಿಗೂ, ಇಷ್ಟಪ್ರಾಪ್ತಿಗೂ, ಉಪಯೋಗವಾದದ್ದು.

“ಶಕ್ತಿಃ” ಇದು ನಿತ್ಯಸಂಸಾರಿಯಾದ ಚೇತನನನ್ನ ನಿತ್ಯಸೂರಿಗಳ ಸಮೂಹದಲ್ಲಿ ಶೇರಿಸತಕ್ಕ ಅಘಟಿತಘಟನಾ ಸಾಮರ್ಥ್ಯವು.

“ಪೂರ್ತಿಃ” ಆವಾಪ್ತಸಮಸ್ತ ಕಾಮತ್ವವು (ಸಕಲ ಇಷ್ಟಾರ್ಥಗಳನ್ನೂ ಹೊಂದಿಯೇ ಇರುವಿಕೆ.

“ಪ್ರಾಪ್ತಿಃ” ನಿರುಪಾಧಿಕ ಶೇಷಿತ್ವರೂಪಸಂಬಂಧವು. ಶೇಷಿತ್ವವೆಂದರೆ, ತನಗೆ ಶೇಷವಾದ ಸಕಲ ಪದಾರ್ಥಗಳಲ್ಲಿಯೂ ಇರುವ ಅತಿಶಯಕ್ಕೆ ಆಧಾರನಾಗಿರುವಿಕೆ.

ಉದಾಹರಣೆ—ಈ ಕ್ಷೇತ್ರವು (ತೋಟ, ಗದ್ದೆ, ಹೊಲಗಳು) ಸರ್ವೋತ್ಕೃಷ್ಟವಾದುದು, ಈ ಗೃಹವು ಬಹಳ ಶ್ಲಾಘನೀಯವಾಗಿರುವದು, ಈ ಭಾರ್ಯೆಯು ಬಹು ಗುಣವತಿಯು, ಲೋಕೋತ್ತರಸೌಂದರ್ಯವುಳ್ಳವಳು, ಈ ಪುತ್ರನು ಅಧಿಯೋಗವುಳ್ಳವನು, ಇತ್ಯಾದಿ ತನ್ನ ಶೇಷವಾದ ಪದಾರ್ಥಗಳಲ್ಲಿ ಇರುವ ಅತಿಶಯವು ಶೇಷವಾದ ಕ್ಷೇತ್ರಾದಿಗಳಿಗೆ ಯಾವ ಭಾಗ್ಯವಂ ಕೊಡದೆ ಶೇಷಿಯಾದವ (ನಾಯಕ) ನಿಗೆ ಹೇಗೆಪ್ರಾಶಸ್ತ್ಯವನ್ನ ಕೊಡುವದೋ, ಹಾಗೆ ಸಕಲ ಪದಾರ್ಥಗಳೂ ಈಶ್ವರನಿಗೆ ಶೇಷಭೂತಗಳಾಗಿ ಅತಿಶಯವನ್ನುಂಟುಮಾಡುವವು.

ಈ ನಾಲ್ಕು (ಜ್ಞಾನ, ಶಕ್ತಿ, ಪೂರ್ತಿ, ಪ್ರಾಪ್ತಿ) ಗುಣಗಳೂ, ಆಶ್ರಿತರ ಕಾರ್ಯನಿರ್ವಾಹಕಗಳು.

" ತನುಖ್ಯಾಪನಂ " ದಿವ್ಯ ಮಂಗಳವಿಗ್ರಹ ಪ್ರಕಾಶನವನ್ನೂ ಇದು ಚರಣಶಬ್ದಾರ್ಥವು. ಚರಣಶಬ್ದವೇ ಶರೀರಕ್ಕೆ ಉಪಲಕ್ಷಕವೆಂದುಭಾವ.

" ಉಪಾಯಂ " ಪ್ರಾಪಕತ್ವವನ್ನೂ, ಇದು ಶರಣಶಬ್ದಾರ್ಥವು.

" ಕರ್ತವ್ಯಭಾಗಂ " ಮಾಡತಕ್ಕ ಅಂಶವನ್ನೂ, (ಅಧಿಕಾರಿಯಾದ ಚೇತನನಿಂದ ಮಾಡತಕ್ಕ ಕಾರ್ಯವನ್ನೂ) ಇದು ಪ್ರಪದ್ಯೆ ಎಂಬುವದರ ಅರ್ಥವು.

## ಅಥ ಉತ್ತರಖಂಡ ವ್ಯಾಖ್ಯಾನಾರಂಭವು.

" ಮಿಥುನಪರಂಪ್ರಾಪ್ಯಮೇವಂ ಪ್ರಸಿದ್ಧಂ " ಉತ್ಕೃಷ್ಟವಾದ, ಲಕ್ಷ್ಮೀನಾರಾಯಣರೂಪವಾದ ದ್ವಂದ್ವವೇ ಹೊಂದಲರ್ಹವಾದುದು. ಇದು ಉತ್ತರಖಂಡಸ್ಥ ಶ್ರೀಮತ್, ಶಬ್ದಾರ್ಥವು.

" ಸ್ವಾಮಿತ್ವಂ " ಶೇಷಿತ್ವವನ್ನು, ಇದು ನಾರಾಯಣ ಶಬ್ದಾರ್ಥವು.

" ಪ್ರಾರ್ಥನಾಂ " ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಿಗೂ ಉಚಿತವಾದ ಸಕಲವಿಧ ಕೈಂಕರ್ಯಗಳನ್ನೂ ಮಾಡುತ್ತೇನೆಂಬ ಕೈಂಕರ್ಯ ಪ್ರಾರ್ಥನೆಯನ್ನೂ, (ನಾರಾಯಣಾಯ, ಇಲ್ಲಿ ಚತುರ್ಥೀವಿಭಕ್ತಿ) ಇದು ಚತುರ್ಥೀವಿಭಕ್ತ್ಯರ್ಥವು.

" ಪ್ರಬಲತರವಿರೋಧಿಪ್ರಹಾಣಂ " ಅತಿಪ್ರಬಲಗಳಾದ ಅಹಂಕಾರ ಮಮಕಾರಗಳ ನಿವೃತ್ತಿಯನ್ನೂ, (ಅಹಂಕಾರ-ನಾನು ಅನುಭವಿಸುವ ನು, ಮಮಕಾರ-ನನ್ನದು) ಇದು ನಮಃ ಶಬ್ದಾರ್ಥವು, ಇಲ್ಲಿ, ಅವಿದ್ಯಾ, ಕರ್ಮವಾಸನಾ ರುಚಿ, ಪ್ರಕೃತಿಸಂಬಂಧ ನಿವೃತ್ತಿಗಳು ಅರ್ಥಸಿದ್ಧವಾಗಿ ರುವವು, (ಈ ಅವಿದ್ಯಾದಿಸ್ವರೂಪಗಳು ಚರಮಶ್ಲೋಕಾರ್ಥದಲ್ಲಿ ವಿವರಿ ಸಲ್ಪಡುವವು)

" ಅವಿದ್ಯಾದಿಗಳ ನಿವೃತ್ತಿವಿನಾ ಅಹಂಕಾರ ಮಮಕಾರಗಳು ನಾಶ ವಾಗಲಾರವೆಂದು ಭಾವವು "

ಈ ಹತ್ತು ಅರ್ಥಗಳನ್ನೂ ಅನುಸಂಧಾನೆ ಮಾಡುವವನ್ನ ರಕ್ಷಿಸುವದಾ ಯೂ ಆರುಪದವುಳ್ಳದ್ದಾಗಿಯೂ ಎರಡುಖಂಡಗಳುಳ್ಳದ್ದಾಗಿಯೂ ಇರುವ

ಈ ಮಂತ್ರರತ್ನ (ದ್ವಯ)ವು ಉಪನಿಷತ್ತಿನಲ್ಲಿ ಪ್ರತಿಪಾದ್ಯವಾಗಿರುವದು. ತಥಾಚ ಕಠವಲ್ಯಾಂ॥ ಸತ್ಯಂತದ್ವಯಂ, ಸಕೃದುಚ್ಚಾರೋಭವತಿ॥ ಇತಿ.

"ಶ್ವೇತಾಶ್ವತರೇ" ಅಸ್ಯಾರ್ಥಸ್ವರೂಪಂ ಶ್ರೂಯತೇ"
ಯೋಬ್ರಹ್ಮಾಣಂ ವಿದಧಾತಿಪೂರ್ವಂ, ಯೋವೈ ವೇದಾಂಶ್ಚ
ಪ್ರಹಿಣೋತಿತಸ್ಮೈ। ತಂಹಿದೇವ ಮಾತ್ಮಬುದ್ಧಿಪ್ರಸಾದಂ
ಮುಮುಕ್ಷುರ್ವೈಶರಣಮಹಂ ಪ್ರಪದ್ಯೇ. ಇತಿ ॥

ಅವತರಣಿಕಾ। ಪೂರ್ವಶ್ಲೋಕದಲ್ಲಿ ಮಂತ್ರರತ್ನದ ಪದಾರ್ಥಗಳನ್ನುಹೇಳಿ ಪದಾರ್ಥಾನುವಾದ ಪೂರ್ವಕವಾಗಿ ಈ ಶ್ಲೋಕದಲ್ಲಿ ವಾಕ್ಯಾರ್ಥವನ್ನ ಹೇಳುತ್ತಾರೆ.

ಶ್ಲೋ॥ ಈಶಾನಾಂಜಗತಾಮಧೀಶದಯಿತಾಂನಿತ್ಯಾನಪಾಯಾಂಶ್ರಿ
ಯಂಸಂಶ್ರಿತ್ಯಾಶ್ರಯಣೋಚಿತಾಖಿಲಗುಣಸ್ಯಾಂಘ್ರೀಹ
೮ ರೇರಾಶ್ರಯೇ। ಇಷ್ಟೋಪಾಯತಯಾಶ್ರಿಯಾಚಸಹಿ
ತಾಯಾತ್ಮೇಶ್ವರಾಯಾರ್ಥಯೇಕರ್ತುಂದಾಸ್ಯಮಶೇಷ
ಮಪ್ರತಿಹತಂನಿತ್ಯಂತ್ವಹಂನಿರ್ಮಮಃ ॥

ಅರ್ಥ ॥ ಜಗತ್ತುಗಳಿಗೆ ನಾಯಕಿಯಾಗಿಯೂ, ಸರ್ವೇಶ್ವರನಿಗೆ ವಲ್ಲಭೆಯಾಗಿ (ಇಷ್ಟಳಾಗಿ) ಯೂ, ಸರ್ವೇಶ್ವರನಿಂದ ನಿತ್ಯ ಸಂಶ್ಲೇಷ (ಸಂಬಂಧ) ವುಳ್ಳವಳಾಗಿಯೂ ಇರುವ ಲಕ್ಷ್ಮಿಯನ್ನ, ಶರಣಹೊಂದಿ, ಸಕಲಕಲ್ಯಾಣಗುಣಪರಿಪೂರ್ಣನಾದ ನಾರಾಯಣನ ಪಾದಗಳನ್ನ ಇಷ್ಟಸಾಧನಕ್ಕಾಗಿ ಆಶ್ರಯಿಸುವೆನು.

ಲಕ್ಷ್ಮೀಸಹಿತನಾಗಿಯೂ, ಸರ್ವಶೇಷಿಯಾಗಿಯೂ ಇರುವ ನಾರಾಯಣನಿಗೆ, ನಾನು, ಅಹಂಕಾರ ಮಮಕಾರಗಳಿಲ್ಲದವನಾಗಿ ಸಕಲ ಕೈಂಕರ್ಯಗಳನ್ನೂ, ನಿರ್ವಿಘ್ನವಾಗಿ ಮಾಡಲಪೇಕ್ಷಿಸುವೆನು.

ತಾತ್ಪರ್ಯ॥ "ಈಶಾನಾಂ ಜಗತಾಂ" ಅಧೀಶದಯಿತಾಂ, (ಜಗತ್ತುಗಳಿಗೆ ನಾಯಕಿಯಾಗಿಯೂ, ಸರ್ವೇಶ್ವರನಿಗೆ ವಲ್ಲಭೆಯಾಗಿಯೂ) ಈ ಎರಡು ವಿಶೇಷಣಗಳಿಂದ.

ಅಸ್ಯೇಶಾನಾಜಗತೋವಿಷ್ಣುಪತ್ನೀಹ್ರೀಶ್ಚತೇಲಕ್ಷ್ಮೀಶ್ಚಪತ್ನ್ಯೌ
ಈಶ್ವರೀಂಸರ್ವಭೂತಾನಾಂ, "ತ್ವಂಮಾತಾಸರ್ವಲೋ
ಕಾನಾಂ, ದೇವದೇವೋಹರಿಃಪಿತಾ"

ಇತ್ಯಾದಿ ಪ್ರಮಾಣಾನುಸಾರ, ಪುರುಷಕಾರತ್ವಕ್ಕೆ ಉಪಯೋಗವಾದ (ಆಶ್ರಯಿಸುವ ಜೀವಾತ್ಮರಲ್ಲಿ) ವಾತ್ಸಲ್ಯವೂ, ಸೇವಿಸಲ್ಪಡುವ ಭಗವಂತನಲ್ಲಿ ವಲ್ಲಭತ್ವವೂ ಸೂಚಿಸಲ್ಪಟ್ಟಿರುವದು.

ನಿತ್ಯಾನಪಾಯಾಂ, ಶ್ರಿಯಂ, ನಿತ್ಯಸಂಶ್ಲೇಷವುಳ್ಳ ಲಕ್ಷ್ಮಿಯನ್ನು ಶ್ರೀಞ್ ಸೇವಾಯಾಂ, ಶ್ರು ಶ್ರವಣೇ, ಶೄ ಹಿಂಸಾಯಾಂ, ಶ್ರೄ ವಿಸ್ತಾರೇ, ಎಂಬಧಾತುಗಳಿಂದ ಶ್ರೀಶಬ್ದವು ಆರುಪ್ರಕಾರವಾಗಿ ವ್ಯುತ್ಪನ್ನವಾಗಿರುವದು.

ಅವರೊಳ್, ಶ್ರೀಞ್ ಸೇವಾಯಾಂ, ಎಂಬ ಧಾತುವಿನಪ್ರಕೃತಿಯಿಂದ, ಶ್ರೀಯತೇಚೇತನೈಃ ಇತಿ, ಶ್ರೀಃ, ಎಂದು ಕರ್ಮಣಿ ವ್ಯುತ್ಪತ್ತಿಯಿಂದ, ಅಪರಾಧ ವಿಶಿಷ್ಟರಾದ ಜೀವಾತ್ಮರುಗಳ ಆಶ್ರಯಕ್ಕೆ ಉಪಯೋಗವಾದ ವಾತ್ಸಲ್ಯವು ಹೇಳಲ್ಪಟ್ಟಿರುವದು ಶ್ರಯತೇಭಗವಂತಮಿತಿ ಶ್ರೀಃ, ಎಂದು ಕರ್ತರಿವ್ಯುತ್ಪತ್ತಿಯಿಂದ ಸ್ವತಂತ್ರನಾದ ಭಗವಂತನನ್ನು ಸ್ವಾಧೀನ ಮಾಡಿಕೊಳ್ಳುವುದರಲ್ಲಿ ಹೇತುಭೂತವಾದ ವಲ್ಲಭತ್ವವು ಹೇಳಲ್ಪಟ್ಟಿರುವದು, ಶ್ರು, ಶ್ರವಣೇ, ಎಂಬ ಧಾತುವಿನದೆಸೆಯಿಂದ, ಶೃಣೋತೀತಿ, ಶ್ರೀಃ, ಎಂದು ಕರ್ತರಿವ್ಯುತ್ಪತ್ತಿಯಿಂದ, ಆಶ್ರಿತರ ವಿಜ್ಞಾಪನೆಯನ್ನು ಕೇಳುವಿಕೆಯು, ಹೇಳಲ್ಪಟ್ಟಿತು.

ಶ್ರಾವಯತಿವಿಮುಖಾ ಹಿತಮಿತಿ ಶ್ರೀಃ, ಎಂದು ಣಿಚ್ ಪ್ರತ್ಯಯಾರ್ಥಗರ್ಭವಾದ ಶ್ರು ಧಾತುವಿನದೆಸೆಯಿಂದಲೇನೇ ಕರ್ತರಿ ವ್ಯುತ್ಪತ್ತಿಯಿಂದ, ಪರಾಙ್ಮುಖರಾದ ಚೇತನರಿಗೆ ಕೂಡಾ ಹಿತವನ್ನು ಉಪದೇಶಿಸುವಳು ಎಂಬುವದು ಹೇಳಲ್ಪಟ್ಟಿತು, ಶೄ, ಹಿಂಸಾಯಾಂ, ಎಂಬಧಾತುವಿನದೆಸೆಯಿಂದ ಶೃಣಾತಿ, ಹಿನಸ್ತಿ, ಆಶ್ರಿತದೋಷಾನ್, ಇತಿ ಶ್ರೀಃ, ಎಂದು ಕರ್ತರಿವ್ಯುತ್ಪತ್ತಿಯಿಂದ ಆಶ್ರಿತರದೋಷ ನಿವರ್ತಕತ್ವವು ಹೇಳಲ್ಪಟ್ಟಿರುವದು. ಶ್ರೄವಿಸ್ತಾರೇ, ಎಂಬಧಾತುವಿನದೆಸೆಯಿಂದ, ಶ್ರೃಣಾತಿ, ವಿಸ್ತಾರಯತಿ ಗುಣೈರಾಶ್ರಿತಾನಿತಿ, ಶ್ರೀಃ, ಎಂದು ಕರ್ತರಿವ್ಯುತ್ಪತ್ತಿಯಿಂದ, ಆಶ್ರಿತರಗುಣವನ್ನು ಅಭಿವೃದ್ಧಿಪಡಿಸುವಳು ಎಂಬುವದು ಹೇಳಲ್ಪಟ್ಟಿರುವದು.

ಇಂತಹವ್ಯುತ್ಪತ್ತ್ಯರ್ಥಗಳನ್ನು ಶ್ರೀಣಾತಿನಿಖಿಲಾನ್ದೋಷಾನ್ ಶ್ರೀಣಾತಿ ಚಗುಣೈರ್ಜಗತ್, ಶ್ರಿಯತೇಚಾಖಿಲೈರ್ನಿತ್ಯಂಶ್ರಯತೇಚಪರಂಪದಂ ॥ ಶ್ರಯಂತೀಂ ಶ್ರೀಯಮಾಣಾಂಚಶೃಣ್ವತೀಂಶೃಣ್ವತೀಮಪಿ, ಇತ್ಯಾದಿ ಪ್ರಮಾಣಗಳಲ್ಲಿ ತಿಳಿಯ ತಕ್ಕದ್ದು.

ಇಂತಹ ಭಗವಂತನ ಪ್ರಧಾನಮಹಿಷಿ (ಪತ್ನಿ)ಯನ್ನ ಆಶ್ರಯಿಸಿ (ಪಾತ್ಯತ್ಯ ಪ್ರಿಯಯುಕ್ತವಾದ ವಾತ್ಸಲ್ಯಾತಿರೇಕ ದ್ದಸೆಯಿಂದ ಮಧ್ಯಸ್ಥರಿಲ್ಲದೇ ಪುರುಷಕಾರತ್ವದಿಂದ ಶರಣ ಹೊಂದಿ ) ಆಶ್ರಯಕ್ಕೆ ಅರ್ಹವಾದ ಸಕಲ ಕಲ್ಯಾಣಗುಣಗಳಿಂದ ಕೂಡಿರುವ ಆಶ್ರಿತರ ಪಾಪ ನಿವರ್ತಕನಾಗಿ ಹರಿ ಶಬ್ದವಾಚ್ಯನಾದ ಭಗವಂತನ ಪಾದಗಳನ್ನ ಇಷ್ಟಾರ್ಥಸಾಧನತ್ವೇನ, ಅಥವಾ ಸುಖರೂಪಸಾಧನತ್ವೇನ, ಶರಣಹೊಂದುವೆನು, (ಇದು ಪೂರ್ವಖಂಡಾರ್ಥವು)

ಶರಣವರಣ ಕಾಲದಲ್ಲಿ ಪುರುಷಕಾರ ಭೂತೆಯಾದ ಲಕ್ಷ್ಮಿಯಿಂದ ನಿತ್ಯಸಂಬಧವುಳ್ಳ ಸರ್ವಶೇಷಿಯಾದ ನಾರಾಯಣನಿಗೆ ನಾನು (ಉಪಾಯ ಸ್ವೀಕಾರದಿಂದ ಇತರ ಸಂಸಾರಿ ವಿಲಕ್ಷಣನಾದ ನಾನು) ಅಹಂಕಾರ ಮಮಕಾರರಹಿತನಾಗಿ ಸಕಲವಿಧವಾದ ಕೈಂಕರ್ಯಗಳನ್ನೂ ನಿರ್ವಿಘ್ನವಾಗಿ ಮಾಡಲು ಪ್ರಾರ್ಥಿಸುವೆನು, (ಸರ್ವದೇಶ ಸರ್ವಕಾಲ ಸರ್ವಾವಸ್ಥೋಚಿತ ದಾಸ್ಯವನ್ನ ಮಾಡಲಪೇಕ್ಷಿಸುವೆನು) ಇದು ಉತ್ತರಖಂಡಾರ್ಥವು.

## ಅಥ ಚರಮ ಶ್ಲೋಕ ವಿಧಿಃ.

ಅವತರಣಿಕಾ । ಈ ಚರಮಶ್ಲೋಕವು ಭಗವದ್ಗೀತೆಯಲ್ಲಿ ಸಾರಾಂಶವಾದುದೆಂದು ಆಚಾರ್ಯರುಗಳಿಂದ ಉದ್ಘೋಷಿಸಲ್ಪಟ್ಟಿರುವದು.

ಶ್ರೀಭಗವದ್ಗೀತೆಯು, ಶ್ರೀಕೃಷ್ಣಪರಮಾತ್ಮನಿಂದ, ಅರ್ಜುನನನ್ನ ವ್ಯಾಜೀಕರಿಸಿ ಲೋಕೋಪಕಾರಕ್ಕಾಗಿ ಉಪದೇಶಿಸಲ್ಪಟ್ಟಿತು.

ಶ್ಲೋ ॥ ಅಸ್ಥಾನಸ್ನೇಹಕಾರುಣ್ಯಧರ್ಮಾಧರ್ಮಧಿಯಾಕುಲಂ ।
ಪಾರ್ಥಂಪ್ರಪನ್ನಮುದ್ದಿಶ್ಯಶಾಸ್ತ್ರಾವತರಣಂಕೃತಂ ॥

ತಾತ್ಪರ್ಯ॥ ಅಕಾಲದಲ್ಲಿ ಪ್ರಾಪ್ತವಾದ ಸ್ನೇಹದಿಂದಲೂ, ಕೃಪೆಯಿಂದಲೂ ಕೂಡಿದವನಾಗಿ, ಕ್ಷತ್ರಿಯರಿಗೆ ಪರಮಧರ್ಮವಾದ ಯುದ್ಧವನ್ನೂ ಕೂಡ ಅಧರ್ಮವನ್ನಾಗಿತಿಳಿದು, ಧರ್ಮವನ್ನ ತಿಳಿಯಲಪೇಕ್ಷೆಯಿಂದ ಶರಣಾಗತನಾದ ಅರ್ಜುನನನ್ನು ಉದ್ದೇಶಿಸಿ (ವ್ಯಾಜೀಕರಿಸಿ) ಭಗವಂತನಾದ ಪರಮಾತ್ಮನಿಂದ ವೇದಾಂತಶಾಸ್ತ್ರವು ಉಪದೇಶಿಸಲ್ಪಟ್ಟಿತು.

ಇದರಿಂದ ಶಾಸ್ತ್ರಾಂತರಾಪೇಕ್ಷಯಾ ಈ ಗೀತಾ ಶಾಸ್ತ್ರಕ್ಕೆ ಆಧಿಕ್ಯವು ಸಿದ್ಧವಾಗಿರುವುದು.

ಶ್ಲೋ॥ ಭಾರತೇಭಗವದ್ಗೀತಾಧರ್ಮಶಾಸ್ತ್ರೇಷುಮಾನವಂ ।
ವೇದೇಷುಪೌರುಷಂಸೂಕ್ತಂಪುರಾಣೇಷುಚವೈಷ್ಣವಂ ॥

ತಾ॥ ವೇದಗಳಲ್ಲಿ ಪುರುಷಸೂಕ್ತವೂ, ಧರ್ಮಶಾಸ್ತ್ರಗಳಲ್ಲಿ ಮನುಸ್ಮೃತಿಯೂ, ಪುರಾಣಗಳಲ್ಲಿ ವಿಷ್ಣುಪುರಾಣವೂ ಹೇಗೆ ಶ್ರೇಷ್ಠವೋ ಹಾಗೆ ಭಾರತದಲ್ಲಿ ಭಗವದ್ಗೀತೆಯು ಶ್ರೇಷ್ಠವಾದುದು.

ಇಂತಹ ಗೀತಾಶಾಸ್ತ್ರದಲ್ಲಿ ಚರಮಶ್ಲೋಕವು ಸರ್ವಫಲಸಾಧಕವೆಂದು ಆಚಾರ್ಯರು ಅಪ್ಪಣೆಕೊಡಿಸಿರುವರು.

ಶ್ಲೋ॥ ಸುದುಷ್ಕರೇಣಶೋಚೇದ್ಯೋಯೇನಯೇನೇಷ್ಟಹೇತುನಾ। ಸಸತಸ್ಯಾಹಮೇವೇತಿಚರಮಶ್ಲೋಕಸಂಗ್ರಹಃ॥

ತಾತ್ಪರ್ಯ॥ ಹೊಂದಲಸಾಧ್ಯವಾದ ಯಾವಯಾವ ಇಷ್ಟಾರ್ಥ ಹೇತುಗಳಿಂದ, ಯಾವಮನುಷ್ಯನು ಶೋಕಿಸುವನೋ, ಆ ಮನುಷ್ಯನಿಗೆ ಆಯಾಯಾ ಇಷ್ಟಾರ್ಥಹೇತುವು ನಾನೇ, ಎಂದು ಚರಮಶ್ಲೋಕಾರ್ಥದ ಮುಖ್ಯತಾತ್ಪರ್ಯವು. (ಶ್ಲೋಕಾರ್ಥ ವಿವರಣದಲ್ಲಿ ಈ ವಿಷಯವು ವಿಸ್ತಾರವಾಗಿ ಸೂಚಿಸಲ್ಪಡುವದು.

## ಚರಮ ಶ್ಲೋಕ ಜಪ ವಿಧಿಃ.

ಮೂಲಮಂತ್ರೇಣ, ಪಂಚವಿಂಶತಿಕೃತ್ವಃ ಅಭ್ಯಸ್ತೇನತ್ರಿಃ ಪ್ರಾಣಾನಾಯಮ್ಯ. ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಚರಮಶ್ಲೋಕ ಮಹಾಮಂತ್ರ ಜಪಂಕರಿಷ್ಯೆ, ಇತಿ ಸಂಕಲ್ಪ್ಯ.

ಅಸ್ಯಶ್ರೀ ಚರಮಶ್ಲೋಕ ಮಹಾಮಂತ್ರಸ್ಯ, ಪಾರ್ಥಸಾರಥಿ ಋಷಿಃ ಅನುಷ್ಟುಪ್‌ಛಂದಃ, ಪರಮಾತ್ಮಾ ಶ್ರೀಕೃಷ್ಣೋದೇವತಾ, ಪಾರ್ಥಸಾರಥಿ ಪ್ರೀತ್ಯರ್ಥೆ ಜಪೇವಿನಿಯೋಗಃ, ಓಂ ವೀರ್ಯಾಯಾಸ್ತ್ರಾಯಫಟ್.

ಸರ್ವಧರ್ಮಾ ಪರಿತ್ಯಜ್ಯ ... ಅಂಗುಷ್ಠಾಭ್ಯಾನ್ನಮಃ
ಮಾಮೇಕಂ ... ತರ್ಜನೀಭ್ಯಾನ್ನಮಃ
ಶರಣಂವ್ರಜ ... ಮಧ್ಯಮಾಭ್ಯಾಂನಮಃ
ಅಹಂತ್ವಾ ... ಅನಾಮಿಕಾಭ್ಯಾಂನಮಃ
ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ ಕನಿಷ್ಠಿಕಾಭ್ಯಾಂನಮಃ
ಮಾಶುಚಃ ... ಕರತಲಕರಪೃಷ್ಠಾಭ್ಯಾಂನಮಃ
ಸರ್ವಧರ್ಮಾಪರಿತ್ಯಜ್ಯ ... ಜ್ಞಾನಾಯಹೃದಯಾಯನಮಃ
ಮಾಮೇಕಂ ... ಐಶ್ವರ್ಯಾಯಶಿರಸೇಸ್ವಾಹಾ
ಶರಣಂವ್ರಜ ... ಶಕ್ತ್ಯೈಶಿಖಾಯೈವ್ಷಟ್
ಅಹಂತ್ವಾ ... ಬಲಾಯಕವಚಾಯಹುಂ
ಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿ, ತೇಜಸೇನೇತ್ರಾಭ್ಯಾಂವ್ಷಟ್
ಮಾಶುಚಃ .. ವೀರ್ಯಾಯಾಸ್ತ್ರಾಯಫಟ್

## ಧ್ಯಾನಂ.

ಶ್ಲೋ॥ ಯತ್ಪ್ರಪತ್ತಿಂವಿನಾಸರ್ವೈಃಯಸ್ಯಮಾಯಾದುರತ್ಯಯಾ ॥
ಧನಂಜಯರಥಸ್ಥಂತತ್‌ಪ್ರಪದ್ಯೇಪರಮಂಮಹಃ ॥

ತಾತ್ಪರ್ಯ॥ ಯಾವಪರಮಾತ್ಮನ ಶರಣಾಗತಿಯನ್ನವಿನಾ, ಯಾವಪರಬ್ರಹ್ಮನ ಮಾಯೆಯು ಯಾರಿಂದಲೂ ದಾಟಲು ಶಕ್ಯವಲ್ಲವೋ.

(ಮಾಮೇವಯೇಪ್ರಪದ್ಯಂತೇಮಾಯಾಮೇತಾಂತರಂತಿತೇ, ಎಂಬ ಗೀತಾವಾಕ್ಯಪ್ರಕಾರ, ಶ್ರೀಕೃಷ್ಣನಾದ ಪರಮಾತ್ಮನ ಶರಣಾಗತಿಯಿಂದ ಮಾಯೆಯನ್ನ ದಾಟಬಹುದೆಂಬ ಭಾವವು)

ಅಂತಹ, ಅರ್ಜುನರಥಸ್ಥನಾದ ಪರಮತೇಜಸ್ಸನ್ನ (ಶ್ರೀಕೃಷ್ಣ ಪರಮಾತ್ಮನನ್ನ) ಶರಣಹೊಂದುವೆನು.

ಶ್ಲೋ॥ ಸರ್ವಧರ್ಮಾನ್ಪರಿತ್ಯಜ್ಯಮಾಮೇಕಂಶರಣಂವ್ರಜ।
ಅಹಂತ್ವಾಸರ್ವಪಾಪೇಭ್ಯೋಮೋಕ್ಷಯಿಷ್ಯಾಮಿಮಾಶುಚಃ॥
ಇತಿ ಯಥಾಶಕ್ತಿಜಪಂಕುರ್ಯಾತ್.

ಪದಂ॥ ಸರ್ವಧರ್ಮಾನ್, ಪರಿತ್ಯಜ್ಯ, ಮಾಂ, ಏಕಂ, ಶರಣಂ, ವ್ರಜ, ಅಹಂ, ತ್ವಾ, ಸರ್ವಪಾಪೇಭ್ಯಃ, ಮೋಕ್ಷಯಿಷ್ಯಾಮಿ, ಮಾ, ಶುಚಃ.

ಇದರ ಅರ್ಥವೂ ಅಷ್ಟಶ್ಲೋಕಿಯಲ್ಲಿ ವಿವರಿಸಲ್ಪಟ್ಟಿರುವದು.

ಅವತರಣಿಕಾ॥ ಹೀಗೆ ಮಧ್ಯಮರಹಸ್ಯ (ಮಂತ್ರರತ್ನ) ವನ್ನುವಿವರಿಸಿ, ಅದಕ್ಕೆ ವ್ಯಾಖ್ಯಾರೂಪವಾಗಿಯೂ, ಶರಣ್ಯರುಚಿ ಪರಿಗೃಹೀತವಾಗಿಯೂ, ಇರುವ ಚರಮಶ್ಲೋಕವನ್ನು ವಿವರಿಸುತ್ತಾರೆ.

ಶ್ಲೋ॥ ಮತ್ಪ್ರಾಪ್ತ್ಯರ್ಥತಯಾಮಯೋಕ್ತಮಖಿಲಂಸಂತ್ಯಜ್ಯ
ಧರ್ಮಂಪುನಃಮಾಮೇಕಂಮದವಾಪ್ತಯೇಶರಣಮಿತ್ಯಾ
ರ್ತೋವಸಾಯಂಕುರು॥ ತ್ವಾಮೇವಂವ್ಯವಸಾಯಯು
ಕ್ತಮಖಿಲಜ್ಞಾನಾದಿ ಪೂರ್ಣೋಹ್ಯಹಂಮತ್ಪ್ರಾಪ್ತಿ
ಪ್ರತಿಬಂಧಕೈರ್ವಿರಹಿತಂಕುರ್ಯಾಂಶುಚಂಮಾಕೃಥಾಃ॥ ॥

7

ತಾತ್ಪರ್ಯ॥ ಪರಮಾತ್ಮನಾದ ನನ್ನನ್ನು ಹೊಂದುವದಕ್ಕಾಗಿ, ಹಿತೋಪದೇಶದಲ್ಲಿ ಪ್ರವೃತ್ತನಾದ ನನ್ನಿಂದ ನಿನ್ನ ಮನೋಪರೀಕ್ಷಾರ್ಥವಾಗಿ ಪೂರ್ವಧ್ಯಾಯಗಳಲ್ಲಿ ಬಹುಶಃ ಹೇಳಲ್ಪಟ್ಟ ಮೋಕ್ಷಫಲಸಾಧನವಾದ ಸಕಲಧರ್ಮ (ಕರ್ಮಯೋಗ, ಜ್ಞಾನಯೋಗಾಂಗಕವಾದ ಭಕ್ತಿಯೋಗವನ್ನು) ನ್ನೂ ಚೆನ್ನಾಗಿ ಬಿಟ್ಟು (ರುಚಿವಾಸನೆಗಳೊಡನೆ ಪುನಃಪ್ರಸಂಗವಿಲ್ಲಂತೇ ಬಿಟ್ಟು) ಇದು, ಸರ್ವಧರ್ಮಾನ್ಪರಿತ್ಯಜ್ಯ, ಎಂಬುವದರ ಅರ್ಥವು ಇಲ್ಲಿ, "ಮತ್ಪ್ರಾಪ್ತ್ಯರ್ಥತಯಾ, ಮಯೋಕ್ತ, ಮಖಿಲಂ, ಧರ್ಮಂ, ತ್ಯಜ್ಯ" ಎಂಬದಾಗಿ ತ್ಯಾಗವಿಧಿಯು ವಿಶಿಷ್ಟವಿಷಯವಾಗಿ ತೋರಿಗೂ, † ಸವಿಶೇಷಣೇಹಿ, ಎಂಬನ್ಯಾಯದಿಂದ ವಿಶೇಷಣಭೂತ ಭಗತ್ಪ್ರಾಪ್ತ್ಯುಪಾಯ ತ್ಯಾಗದಲ್ಲಿ ಪರ್ಯವಸಾನವಾಗಿರುವದು.

---

† ವಿಧಿನಿಷೇಧಗಳು, ವಿಶೇಷಣದಿಂಕೂಡಿದ್ದ ವಿಶೇಷ್ಯದಲ್ಲಿ ಬಾಧೆಯು ಬರುವ ವಿಶೇಷಣ ಮಾತ್ರದಲ್ಲಿಯೆ ವಿಧಿನಿಷೇಧಗಳು ಪರ್ಯವಸಿಸುವವು-

ಅಲ್ಲದೇ ಕೈಂಕರ್ಯರೂಪವಾಗಿ ಸ್ವಯಂಪ್ರಯೋಜನತ್ವೇನ ಸಕಲಧರ್ಮಗಳೂ ಅನುಷ್ಠಿಸಲ್ಪಡ ಬೇಕಾಗಿರುವವು.

ಅನ್ಯಥಾ ಸರ್ವ ಸಂಕರ ಪ್ರಸಂಗ ವುಂಟಾಗುವದು, ಅದುಕಾರಣ, ಭಗವತ್ಕೈಂಕರ್ಯ ರೂಪವಾಗಿ ಕರ್ಮಾದಿಗಳು ಯಥಾಶಕ್ತಿ ಅನುಷ್ಠಿಸತಕ್ಕವುಗಳೆಂದೂ, ಸಾಧನಬುದ್ಧಿಯಿಂದ ಅನುಷ್ಠಿಸ ಬಾರದೆಂದೂ ನಿಷ್ಕರ್ಷವಾಗಿರುವುದು.

ಮಾಮೇಕಂ- ನನ್ನೊಬ್ಬನನ್ನೇ, (ಆಶ್ರಯಣ ಸೌಕರ್ಯವನ್ನುಂಟು ಮಾಡುವ, ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯಗುಣಶಾಲಿಯಾದ ನನ್ನನ್ನೇ ಉದ್ದೇಶಿಸಿ) ಇದು ಮಾಮೇಕಂ ಎಂಬುವದರ ಅರ್ಥವು.

ಆರ್ತಃ, ಆರ್ತನಾದ ನೀನು (ಕರ್ಮಯೋಗಾದಿ ಸಾಧನಾಂತರಗಳು ಸ್ವರೂಪವಿರುದ್ಧವೆಂದೂ, ಮಾಡಲು ಬಹು ಕಷ್ಟತರಗಳೆಂದೂ ಯೋಚನೆಯುಳ್ಳಿರುವ ನೀನು) ಕಾಮ್ಯಕರ್ಮಗಳು ಸ್ವರೂಪವಿರುದ್ಧಗಳೆಂದು ಭಾವವು.

ಮದವಾಪ್ತಯೆ, ನನ್ನನ್ನ ಹೊಂದುವದಕ್ಕೋಸ್ಕರ, ಶರಣಮಿತಿ, ನಾನೇ ಉಪಾಯವೆಂದು, ಇದು ಶರಣಂ, ಎಂಬುವದರ ಅರ್ಥವು, ಅವಸಾಯಂಕುರು, ನಿಷ್ಕೃಷ್ಟವಾದ ಬುದ್ಧಿಯನ್ನ ಮಾಡು, ಇದು ವ್ರಜಎಂಬುವದರ ಅರ್ಥವು.

ಹೀಗೆ ಅಧಿಕಾರಿ ಕೃತ್ಯ ಪ್ರತಿಪಾದಕವಾದ ಪೂರ್ವಾರ್ಧವನ್ನ ವಿವರಿಸಿ, ಸಿದ್ಧೋಪಾಯನಾದ ಭಗವಂತನ ಕೃತ್ಯವನ್ನ ಪ್ರತಿಪಾದಿಸುವ (ಹೇಳುವ) ಉತ್ತರಾರ್ಧವನ್ನ ವಿವರಿಸುತ್ತಾರೆ.

ಏವಂ, ವ್ಯವಸಾಯಯುಕ್ತಂ, ತ್ವಾಂ, ಈ ಪ್ರಕಾರ ನಿಷ್ಕೃಷ್ಟವಾದ ಬುದ್ಧಿಯುಳ್ಳ ನಿನ್ನನ್ನ (ಅಜ್ಞನಾಗಿಯೂ, ಅಶಕ್ತನಾಗಿಯೂ, ಇರುವ ನಿನ್ನನ್ನ) ಇದು, ತ್ವಾ, ಎಂಬುವ ಪದದ ಅರ್ಥವು.

"ಅಖಿಲ ಜ್ಞಾನಾದಿ ಪೂರ್ಣೋಹ್ಯಹಂ" ಸಕಲ ಜ್ಞಾನಸಂಪೂರ್ಣನಾದನಾನು (ಆಶ್ರಿತರಕಾರ್ಯಗಳನ್ನ ನಿರ್ವಹಿಸುವ, ಜ್ಞಾನ, ಶಕ್ತಿ, ಪೂರ್ತಿ

ವ್ಯಾಪ್ತಿಗಳೆಂಬ ಗುಣಗಳಿಂದ ಕೂಡಿರುವವನಾಗಿ ವೇದಾಂತಗಳಲ್ಲಿ ಪ್ರಸಿದ್ಧ ನಾದ ನಾನು) ಇದು "ಅಹಂ" ಎಂಬ ಪದದ ಅರ್ಥವು.

"ಮತ್ಪ್ರಾಪ್ತಿಪ್ರತಿಬಂಧಕೈಃ" ನನ್ನನ್ನು ಹೊಂದಲು ಪ್ರತಿಬಂಧಕ ಗಳಾಗಿರುವ ಸಕಲ ಪುಣ್ಯಪಾಪಗಳಿಂದಲೂ, ಇದು "ಸರ್ವಪಾಪೇಭ್ಯಃ" ಎಂಬ ಪದದ ಅರ್ಥವು.

ಇಲ್ಲಿ ಸಕಲ ಪಾಪಗಳಿಂದಲೂ, ಎಂದು ಹೇಳಿರುವದರಿಂದ.

ಅವಿದ್ಯಾ, ಕರ್ಮ, ವಾಸನಾ, ರುಚಿ, ಪ್ರಕೃತಿ ಸಂಬಂಧಗಳಿಂದಲೂ, ಸಂಚಿತ, ಅನಭ್ಯುಪಗತ, ಪ್ರಾರಬ್ಧ, ಪುಣ್ಯ, ಪಾಪ, ರೂಪ, ಪೂರ್ವಾಘ ಗಳಿಂದಲೂ, ಪುಣ್ಯ, ಪಾಪ, ರೂಪ, ಪ್ರಾಮಾದಿತ, ಉತ್ತರಾಘಗಳಿಂದಲೂ ಲೋಕಾಪವಾದ ಭೀತಿಯಿಂದಲೂ, ಕರುಣೆಯಿಂದಲೂ ಮಾಡಲ್ಪಡುವ ಪುಣ್ಯಪಾಪಗಳಿಂದಲೂ, ಬಿಡಿಸುವೆನು ಎಂದು ಹೇಳಿದಂತಾದುದು. ಇದರ ಅರ್ಥವು ವಿವರಿಸಲ್ಪಡುವದು.

ಅವಿದ್ಯಾ॥ ಜ್ಞಾನೋತ್ಪತ್ತಿಯಾಗದೇ ಇರುವಿಕೆ, ಅನ್ಯಥಾ ಜ್ಞಾನ, ವಿಪರೀತಜ್ಞಾನ, ಎಂಬ ಮೂರುಪ್ರಕಾರವಾದ ಅಜ್ಞಾನವು.

ಕರ್ಮ॥ ಪುಣ್ಯ, ಪಾಪರೂಪವಾದ ಕರ್ಮಗಳು. (ಇದು ಮುಂದೆ ವಿವ ರಿಸಲ್ಪಡುತ್ತೆ)

ವಾಸನಾ॥ ಅಬುದ್ಧಿಪೂರ್ವಕವಾಗಿ ಮನುಷ್ಯನು ಪ್ರವರ್ತಿಸುವದಕ್ಕೆ ಕಾರಣವಾದ ಸಂಸ್ಕಾರವಿಶೇಷವು.

ರುಚಿ॥ ಬುದ್ಧಿಪೂರ್ವಕವಾದ ಪ್ರವೃತ್ತಿಗೆ ಕಾರಣವಾಗಿರುವದು (ಕರ್ಮಾರಂಭೇಚ್ಛೆಯು) ಇದು ವಿಷಯಭೇದಗಳಿಂದ ಬಹುಪ್ರ ಕಾರವಾಗಿರುವದು.

ಪ್ರಕೃತಿಸಂಬಂಧ॥ ಸ್ಥೂಲ ಸೂಕ್ಷ್ಮರೂಪ ಅಚಿತ್ಸಂಬಂಧವು, ಇದು ದೇವ, ಮನುಷ್ಯಾದಿ ಭೇದದಿಂದ ಬಹುಪ್ರಕಾರವಾಗಿರುವದು.

ಇಲ್ಲಿ ತಿಳಿಯಲ್ಪತಕ್ಕ ವಿಶೇಷವೇನೆಂದರೆ-ಮೋಕ್ಷಾಪೇಕ್ಷೆಯುಳ್ಳ ವನಿಗೆ ಪಾಪದೋಷಾದಿಯಲ್ಲಿ ಪುಣ್ಯವೂ, ಮೋಕ್ಷವಿರೋಧಿಯಾದ ಪ್ರ ಯುಕ್ತ, (ಪುಣ್ಯವನಾದಿದ್ದರೆ ಪುಣ್ಯಕ್ಕೆ ಅನುಗುಣವಾಗಿ ಸ್ವರ್ಗಾದಿ

ಲೋಕಗಳೇ ಮೊದಲಾದ ಐಶ್ವರ್ಯವನ್ನು ತಪ್ಪದೇ ಹೊಂದಬೇಕಾಗಿ ಮೋಕ್ಷಕ್ಕೆ ಅಡ್ಡಿಯುಂಟಾಗುವದು) ತಾರತಮ್ಯವಿಲ್ಲದೇ ಪಾಪಶಬ್ದ ವಾಚ್ಯವಾಗಿರುವದು.

ತಥಾಚಶ್ರುತಿಃ॥ ತದಾವಿದ್ವಾನ್ಪುಣ್ಯಪಾಪೇವಿಧೂಯ ನಿರಂಜನಃ
ಪರಮಂಸಾಮ್ಯಮುಪೈತಿ ॥ ಸಆಗಚ್ಛತಿವಿರಜಾಂನದೀಂತತ್ಸು
ಕೃತದುಷ್ಕೃತೇವಿಧೂನತೆ ॥
ಯಥೇಷಕಾತೂಲಮಗ್ನೌಪ್ರೋತಂಪ್ರದೂಯೇತ ।
ಏವಂಹಾಸ್ಯಸರ್ವೇಪಾಪ್ಮಾನಃಪ್ರದೂಯಂತೆ ॥
ಯಥಾಪುಷ್ಕರಪಲಾಶಆಪೋನಶ್ಲಿಷ್ಯಂತೇ ।
ಏವಮೇವಂವಿದಿಪಾಪಂಕರ್ಮನಶ್ಲಿಷ್ಯತೆ ॥

ತಾತ್ಪರ್ಯ॥ ಬ್ರಹ್ಮವಿದ್ಯಾನಿಷ್ಠನು ವಿರಜಾನದಿಯನ್ನ ಹೊಂದಿ ಸುಕೃತ, ದುಷ್ಕೃತಗಳಿಂದ ಬಿಡಲ್ಪಡುವನು. ಅನಂತರ ಕಲ್ಮಷರಹಿತನಾಗಿ ಪರಮಸಾಮ್ಯವನ್ನ ಹೊಂದುತ್ತಾನೆ.

ಊಗನ್ನು, ಹತ್ತಿಯನ್ನೂ, ಅಗ್ನಿಯಲ್ಲಿ ಹಾಕಿದ್ದಾದರೆ ಹೇಗೆ ಭಸ್ಮವಾಗುವದೋ ಹಾಗೆ ಸಕಲಪಾಪಗಳೂ ಬ್ರಹ್ಮವಿದ್ಯಾನಿಷ್ಠನಲ್ಲಿ ನಾಶವಾಗುವವು.

ಕಮಲಪತ್ರದಲ್ಲಿ ಜಲಬಿಂದುಗಳು ಹೇಗೆ ಸಂಬಂಧಿಸುವದಿಲ್ಲವೋ ಹಾಗೆ ಬ್ರಹ್ಮವಿದ್ಯಾನಿಷ್ಠನಲ್ಲಿ ಪಾಪವು ಸೇರಲಾರದು. ಕರ್ಮವು, ಪುಣ್ಯಪಾಪರೂಪವಾಗಿ ಎರಡುಪ್ರಕಾರವಾಗಿರುವದಲ್ಲದೇ, ಪೂರ್ವಾಘ, ಉತ್ತರಾಘ, ಭೇದದಿಂದ ಎರಡುಪ್ರಕಾರವಾಗಿರುವದು.

ಜ್ಞಾನೋತ್ಪತ್ತಿಗೆ (ಉಪಾಯೋತ್ಪತ್ತಿಗೆ) ಪೂರ್ವ ಮಾಡಲ್ಪಟ್ಟ ಪಾಪವು, ಪೂರ್ವಾಘವು. ಜ್ಞಾನೋತ್ಪತ್ತ್ಯಂತನಂತರ ಮಾಡಲ್ಪಟ್ಟ ಪಾಪವು ಉತ್ತರಾಘವು.

ಪೂರ್ವಾಘ (ಪೂರ್ವಪಾಪ) ವು, ಸಂಚಿತ, ಪ್ರಾರಬ್ಧಗಳಿಂದ ಎರಡು ಭೇದವುಳ್ಳದ್ದಾಗಿರುವದು.

ಪ್ರಬಲಕರ್ಮಾಂತರ ಪ್ರತಿಬಂಧಕದಿಂದ ಫಲೋನ್ಮುಖವಾಗದಿರುವ ಕರ್ಮವೇ ಸಂಚಿತವೆನಿಸುವದು.

ಫಲಪ್ರದಾನೋನ್ಮುಖ (ಫಲವನ್ನ ಕೊಡುವದರಲ್ಲಿ ಸಿದ್ಧವಾಗಿರುವ) ವಾದ ಕರ್ಮವೇ ಪ್ರಾರಬ್ಧವೆನಿಸುವದು.

ಈ ಪ್ರಾರಬ್ಧಕರ್ಮವು, ಅಭ್ಯುಪಗತ, ಅನಭ್ಯುಪಗತ, ಭೇದದಿಂದ ಎರಡುಪ್ರಕಾರವಾಗಿರುವದು.

ಇವರಲ್ಲಿ ಅಭ್ಯುಪಗತಪ್ರಾರಬ್ಧವು ಈ ದೇಹದಿಂದ ಅನುಭವಿಸತಕ್ಕದ್ದು. ಅನಭ್ಯುಪಗತ ಪ್ರಾರಬ್ಧವು ದೇಹಾಂತರಾನುಭಾವ್ಯವಾಗಿರುವದು.

ಫಲವನ್ನ ಕೊಡುವದಕ್ಕೆ ಸಿದ್ಧವಾದ ಉತ್ತರಾಘವೂ ಎರಡುಪ್ರಕಾರವಾಗಿರುವದು. ಪ್ರಾಮಾದಿಕ, ಬುದ್ಧಿಪೂರ್ವಕ ಎಂಬ ಭೇದದಿಂದ ಪ್ರಾಮಾದಿಕ (ಬುದ್ಧಿಪೂರ್ವಕವಲ್ಲದ) ವಾದ ಉತ್ತರಪಾಪವು ಸಂಬಂಧಿಸುವದೇ ಇಲ್ಲವು. ಬುದ್ಧಿಪೂರ್ವಕವಾದ ಉತ್ತರಪಾಪವು ಪ್ರಾಯಶ್ಚಿತ್ತದಿಂದ ನಾಶವಾಗುವದು. ಪ್ರಾಯಶ್ಚಿತ್ತವನ್ನ ಮಾಡದಪಕ್ಷ, ಅನುಭವದಿಂದಲೇ (ಪಾಪಫಲವನ್ನ ಅನುಭವಿಸುವದರಿಂದಲೇನೆ,) ವಿನಾಶ ಹೊಂದುವದು.

ವಿದ್ಯಾಚ, ಭಕ್ತಿಯೋಗಾದಿ ಸಾಧನಾಂತರನಿಷ್ಠನಿಗೆ, ಸಕಲವಾದ ಪ್ರಾರಬ್ಧವೂ, ಪ್ರಾಯಶ್ಚಿತ್ತರಹಿತವಾದ ಬುದ್ಧಿಪೂರ್ವಕ ಉತ್ತರಾಘವೂ ಕೂಡಾ ಅನುಭವಿಸುವದರಿಂದಲೇ ನಾಶವಾಗುವದು. ವಿದ್ಯೆಯಿಂದಲೇ ಸಂಚಿತಪಾಪವು ನಾಶವಾಗುವದು. ಪ್ರಾಮಾದಿಕವಾದ ಉತ್ತರಾಘವು ಸೇರುವದೇ ಇಲ್ಲವು.

ಪ್ರಪತ್ತಿಯಲ್ಲಿ, ದೃಪ್ತಪ್ರಪತ್ತಿ ಎಂದೂ, ಆರ್ತಪ್ರಪತ್ತಿ ಎಂದೂ ಎರಡು ಭೇದವು.

ದೃಪ್ತಪ್ರಪನ್ನನಿಗೆ, ಅಭ್ಯುಪಗತ ಪ್ರಾರಬ್ಧವೂ, ಪ್ರಾಯಶ್ಚಿತ್ತರಹಿತವಾದ ಬುದ್ಧಿಪೂರ್ವಕ ಉತ್ತರಾಘವೂ, ಅನುಭವದಿಂದಲೇ ನಾಶವಾಗುವದು. ಪ್ರಪತ್ತಿ ಮಹಿಮೆಯಿಂದಲೇ ಸಂಚಿತ, ಅನಭ್ಯುಪಗತ ಪ್ರಾರಬ್ಧಗಳು ನಾಶಹೊಂದುವವು. ಪ್ರಾಮಾದಿಕವಾದ ಉತ್ತರಾಘವು ಸೇರುವದೇ ಇಲ್ಲವು.

ಆರ್ತಪ್ರಪನ್ನನಿಗೆ ಉಪಾಯದಿಂದ (ಪ್ರಪತ್ತಿಯಿಂದ) ಲೇ ಸರ್ವ ವೂ ನಾಶವಾಗುವದು. ಇವನಿಗೆ ಉತ್ತರಾಘವೇ ಇಲ್ಲವು.

ತಥಾಚೋಕ್ತಂ॥ ಆರ್ತಾನಾಮಾಶುಫಲದಾಸಕೃದೇವಕೃತಾಹ್ಯಸಾ।
ದೃಪ್ತಾನಾಮಪಿಜಂತೂನಾಂದೇಹಾಂತರನಿವಾರಿಣೀ ॥

ತಾತ್ಪರ್ಯ॥ ಸಕೃತ್ (ಒಂದಾವರ್ತಿ) ಅನುಷ್ಠಿಸಲ್ಪಟ್ಟ ಈ ಪ್ರಪತ್ತಿಯು ಆರ್ತರುಗಳಿಗೆ (ಸಂಸಾರದಲ್ಲಿ ವೈರಾಗ್ಯೋತ್ಪತ್ತಿಯಿಂದ ಒಂದು ಕ್ಷಣವೂ ದೇಹವನ್ನು ಧರಿಸಲು ಶಕ್ತಿ ಇಲ್ಲದೇ ಪ್ರಪತ್ತ್ಯುತ್ತರಕ್ಷಣದಲ್ಲಿಯೇ ಮೋಕ್ಷಾಭಿಲಾಷೆಯುಳ್ಳವರು ಆರ್ತರು) ತತ್ಕ್ಷಣದಲ್ಲಿಯೇ ಫಲವನ್ನು ಕೊಡುವದು. ದೃಪ್ತರಿಗೆ (ಈ ಶರೀರತ್ಯಾಗಾನಂತರ ಮೋಕ್ಷಾಪೇಕ್ಷೆಯುಳ್ಳವರಾಗಿ ಪ್ರಪತ್ತಿಮಾಡುವರೇ ದೃಪ್ತಪ್ರಪನ್ನರು) ಈ ಪ್ರಪತ್ತಿಯು ದೇಹಾಂತರ ನಿವಾರಕವಾಗಿರುವದು, (ವರ್ತಮಾನ ದೇಹಾವಸಾನದಲ್ಲಿ ಮೋಕ್ಷವನ್ನೀಯುವದು).

ಈ ಅರ್ಥಗಳೆಲ್ಲವೂ, ರಹಸ್ಯತ್ರಯಸಾರದಲ್ಲಿ ನಿಗಮಾಂತ ಗುರುಗಳಿಂದ ಅನುಗ್ರಹಿಸಲ್ಪಟ್ಟಿರುವವು.

ಶ್ಲೋ॥ ಪ್ರಾರಬ್ಧೇತರಪೂರ್ವಪಾಪಮಖಿಲಂಪ್ರಾಮಾದಿಕಂಚೋ
ತ್ತರಂ ನ್ಯಾಸೇನಕ್ಷಪಯನ್ನನಭ್ಯುಪಗತಪ್ರಾರಬ್ಧಖಂಡಂಚನಃ।
ಧೀಪೂರ್ವೋತ್ತರಪಾಪ್ಮನಾಮಜನನಾ ಜ್ಜಾತೇಪಿತನ್ನಿಷ್ಕೃ
ತೇಃಕ್ಲಾಟಲ್ಯೇನತಿಶಿಕ್ಷಯಾ ವ್ಯನಘಯೇತ್ಕ್ರೋಡೀಕರೋತಿ
ಪ್ರಭುಃ ॥

ತಾತ್ಪರ್ಯ॥ ಈ ಶ್ಲೋಕಾರ್ಥವೇ ಕರ್ಮವು, ಪುಣ್ಯಪಾಪರೂಪವಾಗಿ ಎರಡು ಪ್ರಕಾರವಾಗಿರುವದು. ಇತ್ಯಾದಿ ವಾಕ್ಯಗಳಿಂದ, ಹಿಂದೆ ವಿವರಿಸಲ್ಪಟ್ಟಿದೆ ಇಲ್ಲಿ ಸಂವಾದಕ್ಕಾಗಿ ಉದಹರಿಸಿರುತ್ತೆ.

(ಈ ಪರ್ಯಂತವೂ ಪ್ರಸಂಗ ಸಂಗತ್ಯಾವಿಚಾರಗಳು ಬರೆಯಲ್ಪಟ್ಟವು ಇನ್ನು ಪ್ರಕೃತಾರ್ಥವು ಬರೆಯಲ್ಪಡುವದು.

ವಿರಹಿತಂ॥ ಬಿಡಲ್ಪಟ್ಟವನನ್ನಾಗಿ (ಪೂರ್ವೋಕ್ತ ಪ್ರತಿಬಂಧಕಗಳಿಂದ ಬಿಡಲ್ಪಟ್ಟವನನ್ನಾಗಿ) ಇದು ಮೋಕ್ಷಯಿಷ್ಯಾಮಿ ಎಂಬುವದರಲ್ಲಿ ಮೋಕ್ಷ ಎಂಬುವದರ ಅರ್ಥವು.

ಕುರ್ವ್ಯಾಂ-ಮಾಡುತ್ತೇನೆ, ಇದು ಮೋಕ್ಷಯಿಷ್ಯಾಮಿ ಎಂಬುವದರಲ್ಲಿ ಣಿಚ್ ಪ್ರತ್ಯಯಸಹಿತವಾದ ಅರ್ಥವು.

ಶುಚಂಮಾಕೃಥಾಃ॥ ಶೋಕವನ್ನ ಮಾಡಬೇಡ, ಇದು ಮಾಂಶುಚಃ ಎಂಬುವದರ ಅರ್ಥವು.

(ಆಲೋಚನ) ಸ್ವರೂಪವಿರುದ್ಧವಾಗಿಯೂ, ಅಪಾಯಕರನಾಗಿಯೂ ಇರುವ ಉಪಾಯಾಂತರಕ್ಕೆ ತ್ಯಾಗವು ಹೇಳಲ್ಪಟ್ಟಿರುವದರಿಂದಲೂ, ಸ್ವರೂಪಾನುಗುಣವಾಗಿಯೂ, ಅಪಾಯರಹಿತವಾಗಿಯೂ ಇರುವ ಸಿದ್ಧೋಪಾಯ ಸ್ವೀಕಾರವೇ ಹೇಳಲ್ಪಟ್ಟಿರುವದರಿಂದಲೂ, ಶೋಕಕ್ಕೆ ಕಾರಣವೇ ಇಲ್ಲದ್ದರಿಂದ ಅಯುಕ್ತ, ಶೋಕವು ಮಾಡತಕ್ಕದ್ದಲ್ಲವೆಂದು ಭಾವವು.

ಪ್ರತಿಬಂಧಕ ನಿವೃತ್ತಿಯೂ, ಭಗವತ್ಪ್ರಾಪ್ತಿಯೂ, ಪ್ರಪತ್ತಿಫಲವಾಗಿದ್ದಾಗ್ಯೂ, "ಮಾಮೇವೈಷ್ಯಸಿ" (ನನ್ನನ್ನೇ ಹೊಂದುತ್ತೀಯಾ) ಎಂಬದಾಗಿ ಹಿಂದೆಯೇ ಫಲವು ಹೇಳಿರುತ್ತಾಗಿ ಇಲ್ಲಿ ಪ್ರತಿಬಂಧಕನಿವೃತ್ತಿ ಮಾತ್ರ ಪ್ರಾಧಾನ್ಯವಾಗಿ ಹೇಳಲ್ಪಟ್ಟಿರುವದು.

ಅಥವಾ, ಸಕಲವಾದ ಪ್ರತಿಬಂಧಕವೂ ನಿವರ್ತಿಸಿದ ಪ್ರೋದನೆ, ಸ್ವರೂಪಾನುಗುಣವಾದ ಭಗವತ್ಪ್ರಾಪ್ತಿಯು ಸ್ವತಏವ ಉಂಟಾಗುವದು ಎಂಬ ಅಭಿಪ್ರಾಯದಿಂದ ಪ್ರತಿಬಂಧಕ ನಿವೃತ್ತಿಮಾತ್ರವೇ ಇಲ್ಲಿ ಹೇಳಲ್ಪಟ್ಟಿರುವದೆಂದು ತಿಳಿಯತಕ್ಕದ್ದು.

ಅವತರಣಿಕಾ॥ ಶೋಕಕ್ಕೆ ಕಾರಣವನ್ನೂ, ತನ್ನಿವೃತ್ತಿಪ್ರಕಾರವನ್ನೂ, ತೋರಿಸುವರಾಗಿ ಯಾವಚ್ಛರೀರಪಾತ ಪರ್ಯಂತವೂ ಧೈರ್ಯವಾಗಿರತಕ್ಕ ಪ್ರಕಾರವನ್ನು ಉಪಪಾದನ ಮಾಡುವರಾಗಿ ಹೇಳುತ್ತಾರೆ.

ಮೂ॥ ನಿತ್ಯಂತ್ವದಧೀನತಾಂಮಯಿಸದಾಕರ್ಮಾದ್ಯುಪಾಯಾಸ್ಥರೇ: ಕರ್ತುಂತ್ಯಕ್ತುಮಪಿಪ್ರಪತ್ತುಮನಲಂ ಸೀದಾಮಿದುಃಖಾಕುಲಃ । ಏತದ್ಜ್ಞಾನಮುಪೇಯುಷೋಮಮಪುನಸ್ಸರ್ವಾಪರಾಧಕ್ಷಯಂ ಕರ್ತಾಸೀತಿ ದೃಢೋಸ್ಮಿತೇತುಚರಮಂ ವಾಕ್ಯಂ ಸ್ಮರನ್ಸಾರಥೇಃ ॥ ೪

ತಾತ್ಪರ್ಯ॥ ಹೇಹರೇ-ಆಶ್ರಿತರ ಪಾಪನಾಶಕನಾದ ಹರಿಯೇ, ಮಯಿ-ನನ್ನಲ್ಲಿ, ಸದಾ-ಸರ್ವಕಾಲದಲ್ಲಿಯೂ, ತ್ವದಧೀನತಾಂ-ನಿನ್ನಲ್ಲಿ

ಅಧೀನತ್ವವನ್ನು, ನಿನಗೆ ಅಧೀನವಾದ ಸ್ವರೂಪಸ್ಥಿತಿ ಪ್ರವೃತ್ತಿಯು ಳ್ಳ್ಯೋಣದನ್ನು ಎಂದು ಭಾವವು. ನಿಶ್ಚಿತ್ಯ-ನಿಶ್ಚಯಿಸಿ, ಕರ್ಮಾಸ್ಥ್ಯ ಪಾರ್ಯ-ಕರ್ಮಯೋಗವೇ ಮೊದಲಾದ ಉಪಾಯಗಳನ್ನು. ಕರ್ಮ ಯೋಗ, ಜ್ಞಾನಯೋಗ, ಭಕ್ತಿಯೋಗಗಳನ್ನು ಎಂದು ಭಾವವು.

"ಅದರೊಳ್ ಕರ್ಮಯೋಗವು" ಶಾಸ್ತ್ರಾರ್ಥ ತತ್ವನಿರ್ಣಯದ ನಂತರ ಜ್ಞಾನೋತ್ಪತ್ತಿಗೋಸ್ಕರ ಮಾಡಲ್ಪಡುವ ಯಜ್ಞ, ದಾನ, ತಪಸ್ಸೇ ಮೊದಲಾದುದು.

ಇಂತಹ ಕರ್ಮಯೋಗದಿಂದ ಜೈಸಲ್ಪಟ್ಟ ಮನಸ್ಸುಳ್ಳವನಿಗೆ (ಸ್ವಾಧೀನ ಮನಸ್ಕನಿಗೆ) ಉಂಟಾಗುವ ಪರಿಶುದ್ಧ ಆತ್ಮಭಾವನೆಯೇ ಜ್ಞಾನಯೋಗವು.

ಇಂತಹ ಜ್ಞಾನಯೋಗದಿಂದ ಹೊಂದಲ್ಪಟ್ಟ ಅಧಿಕಾರವುಳ್ಳವನಿಗೆ ತೈಲ (ಹರಳೆಣ್ಣೆ) ಧಾರೆಯೋಪಾದಿಯಲ್ಲಿ ಅವಿಚ್ಛಿನ್ನವಾಗಿಯೂ, ದರ್ಶನಕ್ಕೆ ಸಮಾನವಾದ ಆಕಾರವುಳ್ಳದ್ದಾಗಿ ಪ್ರೀತಿರೂಪವಾದ ಸ್ಮೃತಿಸಮೂಹವೇ, ಭಕ್ತಿಯೋಗವು.

ಇದರೊಳ್, ಕರ್ಮಯೋಗ, ಜ್ಞಾನಯೋಗಗಳು, ಭಕ್ತಿಗೆ ಅಂಗಗಳು, ಭಕ್ತಿಯೋಗವೇ ಸಾಕ್ಷಾನ್ಮೋಕ್ಷೋಪಾಯವು.

ಸ್ನಾನ, ಸಂಧ್ಯಾ, ಔಪಾಸನಾದಿ, ನಿತ್ಯ, ನೈಮಿತ್ತಿಕ ಕರ್ಮಗಳಿಗೂ ಅವತಾರರಹಸ್ಯಜ್ಞಾನ, ದಿವ್ಯದೇಶವಾಸ, ಭಗವನ್ನಾಮಸಂಕೀರ್ತನ, ದೀಪಾರೋಪಣ, ಪ್ರಾಕ್ಷನರ್ಮಣಾದಿಗಳಿಗೂ ಯಥಾಸಂಭವ ಕರ್ಮ ಯೋಗಾದಿಗಳಲ್ಲಿಯೇ ಅಂತರ್ಭಾವವು.

"ಕರ್ತುಮವಲಂ" ಅನುಷ್ಠಿಸಲು ಸಮರ್ಥನಲ್ಲವು. ಸ್ವರೂಪವಿರುದ್ಧ (ಸಾಧನಬುದ್ಧ್ಯಾ ಅನುಷ್ಠಾನವು ಸ್ವರೂಪಕ್ಕೆ ವಿರುದ್ಧವೆಂದು ಭಾವವು) ವಾದ್ದರಿಂದಲೂ, ದುಃಖ ಬಹುಳವಾದ್ದರಿಂದಲೂ, ಅಪಾಯಬಹುಳ ವಾದ್ದರಿಂದಲೂ, ಸ್ವತಃ ಫಲಸಾಧನವಲ್ಲವಾದ್ದರಿಂದಲೂ, ಪರಾಪೇಕ್ಷೆಯುಳ್ಳದಾದ್ದರಿಂದಲೂ, ಸಾವಕಾಶವಾಗಿ ಫಲಪ್ರದವಾದ್ದರಿಂದಲೂ, ಬಹುಕಾಲ ಸಾಧ್ಯವಾದ್ದರಿಂದಲೂ, ಅನೇಕವಾದ್ದರಿಂದಲೂ ಅನುಷ್ಠಿಸಲು ಸಮರ್ಥನಲ್ಲವೆಂದು ಭಾವವು.

"ತ್ಯಕ್ತುಮುತ್ಸಹೇ" ಬಿಡಲು ಸಮರ್ಥನಲ್ಲವು.

ವರ್ಣಾಶ್ರಮಗಳಿಗೆ ಅರ್ಹವೆಂದೂ, ಇಷ್ಟಫಲ ಸಾಧಕವೆಂದೂ ಶಾಸ್ತ್ರಗಳಲ್ಲಿ ಹೇಳಿರುವವದರಿಂದಲೂ, ಭಗವಂತನಾದ ನಿನ್ನಿಂದ ಉಪದೇಶಿಸಲ್ಪಟ್ಟದ್ದರಿಂದಲೂ, ಪ್ರತ್ಯವಾಯಭೀತಿಯಿಂದ ಬಿಡಲು ಸಮರ್ಥನಲ್ಲವೆಂದು ಭಾವವು.

ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳನ್ನೂ, ಸಾಧನಬುಧ್ಯಾ ಅನುಷ್ಠಿಸಬಾರದೆಂದೂ, ಭಗವತ್ಕೈಂಕರ್ಯರೂಪವಾಗಿ ಅನುಷ್ಠಿಸಬೇಕೆಂದೂ ನಿಷ್ಕೃಷ್ಟವಾದ ಭಾವವು.

"ಪ್ರಪತ್ತುಮುತ್ಸಹೇ" ಪ್ರಪದನವಂ ಮಾಡಲೂ ಸಮರ್ಥನಲ್ಲವು.

ಸ್ವರೂಪಾನುಗುಣವಾಗಿಯೂ, ಅನುಷ್ಠಿಸಲು ಸಾಧ್ಯವಾಗಿಯೂ, ಅಪಾಯರಹಿತವಾಗಿಯೂ, ಸ್ವತಃಫಲಸಾಧಕವಾಗಿಯೂ, ಇರುವ ಪ್ರಪತ್ತುಪಾಯವು ಹೇಳಲ್ಪಟ್ಟಾಗ್ಯೂ, ಅದಕ್ಕೆ ಅಂಗಭೂತಗಳಾದ ಮಹಾವಿಶ್ವಾಸಾದಿಗಳಿಲ್ಲದ ಪ್ರಯುಕ್ತ ಪ್ರಪದನವಂ ಮಾಡಲು ಸಮರ್ಥನಲ್ಲವೆಂದು ಭಾವವು.

ಅತೋಮುಹ್ಯಾಕುಲಸ್ಸೀದಾಮಿ, ಶೋಕದಿಂದ ಕೂಡಿ ನಾನು ಕ್ಲೇಶನಾಗುವೆನು.

ಹೀಗೆ ಶೋಕಕ್ಕೆ ಕಾರಣವಂ ಹೇಳಿ ಶೋಕನಾಶಕ್ಕೆ ಕಾರಣವನ್ನು ಹೇಳುತ್ತಾರೆ ಉತ್ತರಾರ್ಧದಿಂದ.

ಸಾರಥೇ-ವಾತ್ಸಲ್ಯದಿಂದ ಅರ್ಜುನನಿಗೆ ಸಾರಥಿಯಾದ, ತೇತ-ರರದಾಪನ್ನನಾದ ನಿನ್ನ, "ಚರಮಂ, ವಾಕ್ಯಂ."

"ಸರ್ವಧರ್ಮಾನ್ಪರಿತ್ಯಜ್ಯ" ಎಂಬ ಚರಮಶ್ಲೋಕಾರ್ಥವನ್ನು, ಸ್ಮರಿಸಿ, ಅನುಸಂಧಾನ ಮಾಡುವನಾಗಿ, ಆ ಕಾರಣದ್ದೆಸೆಯಿಂದಲೇ ಪ್ರನಃ ವಿಗತಜ್ವರ, ಜ್ಞಾನ ಮುಕ್ತಿಯುಳ್ಳ, ಚರಮಶ್ಲೋಕದ ಪ್ರಾಮಾರ್ಥದಲ್ಲಿ ಹೇಳಲ್ಪಟ್ಟ ಭಗವದೇಕೋಪಾಯತ್ವ ಜ್ಞಾನವನ್ನ ನಿನ್ನ ಅನುಗ್ರಹದಿಂದ ಹೊಂದಿರುವ.

ನಾನು, ಅಜ್ಞನಾಗಿಯೂ ಅಶಕ್ತನಾಗಿಯೂ ಇರುವ ನನ್ನ.

ಜ್ಞಾನಾನವಾದಿಗಳಿಂ } ಸಕಲವಾದ ಅಪಾಯಗಳ ಮಾಡುವನ್ನು ನಾ ಶರಣಾಗತಿಗಳನ್ನು } ಸುತ್ತೀ ಎಂದು ನಂಬಿ ಧೈರ್ಯವಾಗಿ ಇದ್ದೇನೆ.

ಇಲ್ಲಿ, ಸೀದಾಮಿ, ದೃಢೋಸ್ಮಿ, ಎಂಬ ಪದಗಳಿಂದ, ತನ್ನನ್ನ ನೋಡಿದ್ದಾದರೆ, ಅವಸಾದವು (ಕೃಶವಾಗುವಿಕೆ) ಭಗವದ್ಗುಣಗಳಂ ನೋಡಿದ್ದಾದರೆ ದಾರ್ಢ್ಯವೂ, ಈ ಅಧಿಕಾರಿಗೆ ಯಾವಜ್ಜೀವವೂ ಅನುವರ್ತನೀಯವೆಂದು ಸೂಚಿಸಲ್ಪಟ್ಟಿರುವವು.

## ಅಥ ರಹಸ್ಯತ್ರಯ ನಿಷ್ಕೃಷ್ಟಾರ್ಥ.

ಜೀವಾತ್ಮನು ನಾರಾಯಣನಿಗೆ ಶೇಷಭೂತನು, ಸ್ವತಂತ್ರನಲ್ಲವು. ಜೀವಾತ್ಮನಿಗೆ ಭಗವಂತನೇ ರಕ್ಷಕನು, ತಾನಲ್ಲವು. ಸರ್ವಶೇಷಿಯಾದ ನಾರಾಯಣನಿಗೋಸ್ಕರವೇ ಸಕಲವಿಧ ಕೈಂಕರ್ಯಗಳೂ ಮಾಡಲ್ಪಡತಕ್ಕವುಗಳು. ಸ್ವಾರ್ಥವಾಗಿ ಮಾಡತಕ್ಕದ್ದಲ್ಲ. (ಆದಕಾರಣ) ನಾನು ವಿಷ್ಣುವಿಗೇನೆ ಶೇಷಭೂತನು, ಸ್ವತಂತ್ರನಲ್ಲವು. ನನಗೆ ಭಗವಂತನೇ ರಕ್ಷಕನು, ನಾನಲ್ಲವು. ನಾನು ಸರ್ವಶೇಷಿಯಾದ ನಾರಾಯಣನಿಗೇ ಸರ್ವವಿಧ ಕೈಂಕರ್ಯಗಳಂ ಮಾಡುತ್ತೇನೆ. ಸ್ವಾರ್ಥವಾಗಿ ಮಾಡುವದಿಲ್ಲವು. ಇದೇ ಮೂಲಮಂತ್ರದ ಸಾರಾರ್ಥವು.

## ಅಥ ದ್ವಯಾರ್ಥಃ.

ಲಕ್ಷ್ಮಿಯನ್ನು ಪುರುಷಕಾರತ್ವೇನ ಆಶ್ರಯಿಸಿ, ಆ ಲಕ್ಷ್ಮಿಯಿಂದ ನಿತ್ಯಸಂಶ್ಲೇಷವುಳ್ಳ ಸಕಲ ಕಲ್ಯಾಣಗುಣಪೂರ್ಣನಾದ ಭಗವಂತನ ಪಾದಗಳನ್ನು ಉಪಾಯವಾಗಿ ಹೊಂದುವೆನು.

ಪ್ರಾಪ್ಯಭೂತೆಯಾದ (ಹೊಂದಲ್ಪಡತಕ್ಕ) ಲಕ್ಷ್ಮಿಯಿಂದ ನಿತ್ಯಸಂಬಂಧವುಳ್ಳ ಸರ್ವಶೇಷಿಯಾದ ನಾರಾಯಣನಿಗೆ ಸರ್ವವಿಧ ಕೈಂಕರ್ಯಗಳನ್ನೂ ಮಾಡುತ್ತೇನೆ. ನನಗೋಸ್ಕರ ಮಾಡುವದಿಲ್ಲವು.

## ಅಥ ಚರಮಶ್ಲೋಕಾರ್ಥಃ.

ಅನುಷ್ಠಿಸಲ್ಪಡತಕ್ಕ ನಿತ್ಯನೈಮಿತ್ತಿಕಾದಿ ಸಕಲ ಕರ್ಮಗಳನ್ನಿಯೂ, ಸಾಧನಬುದ್ಧಿಯನ್ನ ಬಿಟ್ಟು (ಶ್ರುತಿ ಸ್ಮೃತಿಚೋದಿತಗಳಾದ ನಿತ್ಯನೈಮಿತ್ತಿಕಾದಿರೂಪಗಳಾದ ಕರ್ಮಜ್ಞಾನ ಭಕ್ತಿಯೋಗಗಳನ್ನು ಮೋಕ್ಷಸಾಧನಬುದ್ಧಿಯಿಂದ ಬಿಟ್ಟು ಎಂದು ಭಾವವು.) ಆಶ್ರಯಿಸಲು ಸೌಕರ್ಯವನ್ನುಂಟುಮಾಡುವ ವಾತ್ಸಲ್ಯಾದಿ ಗುಣಶಾಲಿಯಾದ ನನ್ನನ್ನ

ಶರಣ ಹೊಂದುವನಾಗು (ಉಪಾಯತಯಾ ಆಶ್ರಯಿಸು) ಜ್ಞಾನಶಕ್ತ್ಯಾದಿ ಸಕಲಗುಣಪೂರ್ಣನಾದ ನಾನು, ನನ್ನನ್ನೇ ಉಪಾಯತಯಾ ಆಶ್ರಿತನಾದ ನಿನ್ನನ್ನು ಸಕಲ (ಪ್ರಾಪ್ತಿ ಪ್ರತಿಬಂಧಕಗಳಾದ) ಪಾಪಗಳವ್ವೆಸೆಯಿಂದಲೂ ಬಿಡಲ್ಪಟ್ಟವನನ್ನಾಗಿ ಮಾಡುವೆನು, ಶೋಕಿಸಬೇಡ.

ಇತಿ ಚರಮಶ್ಲೋಕಾರ್ಥಃ.

## ಆಧಾರಶಕ್ತ್ಯಾದಿ ತರ್ಪಣಕ್ರಮಃ.

ದ್ವಿರಾಚಮ್ಯ, ಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾ, ಭಗವತ್ಪ್ರೀತ್ಯರ್ಥಂ ಆಧಾರಶಕ್ತ್ಯಾದಿತರ್ಪಣಂಕರಿಷ್ಯೇ ಇತಿಸಂಕಲ್ಪ್ಯ ॥

ಓಂ, ಆಧಾರಶಕ್ತ್ಯೈನಮಃ (ಜಲದಲ್ಲಿ ತರ್ಪಣ ಮಾಡುವದು)
ಓಂ, ಪ್ರಕೃತ್ಯೈನಮಃ.
ಓಂ, ಅಖಿಲಜಗದಾಧಾರಾಯ ಕೂರ್ಮರೂಪಿಣೇ ನಾರಾಯಣಾಯನಮಃ.
ಓಂ, ಅನಂತಾಯ ನಾಗರಾಜಾಯನಮಃ.
ಓಂ, ಭೂಂ, ಭೂಮ್ಯೈನಮಃ.
ಓಂ, ಶ್ರೀವೈಕುಂಠಾಯ ದಿವ್ಯಲೋಕಾಯನಮಃ.
ಓಂ, ಶ್ರೀವೈಕುಂಠಾಯ ದಿವ್ಯಜನಪದಾಯನಮಃ.
ಓಂ, ಶ್ರೀವೈಕುಂಠಾಯ ದಿವ್ಯನಗರಾಯನಮಃ.
ಓಂ, ಶ್ರೀವೈಕುಂಠಾಯ ದಿವ್ಯವಿಮಾನಾಯನಮಃ.
ಓಂ, ಆನಂದಮಯಾಯ ದಿವ್ಯಮಂಟಪರತ್ನಾಯನಮಃ.
ಓಂ, ಆಸ್ತರಣರೂಪಾಯಾನಂತಾಯ ನಾಗರಾಜಾಯನಮಃ.
ಓಂ, ಧರ್ಮಾಯ ಪೀಠಪಾದಾಯನಮಃ.
ಓಂ, ಜ್ಞಾನಾಯ, ಪೀಠಪಾದಾಯನಮಃ.
ಓಂ, ವೈರಾಗ್ಯಾಯ, ಪೀಠಪಾದಾಯನಮಃ.
ಓಂ, ಐಶ್ವರ್ಯಾಯ, ಪೀಠಪಾದಾಯನಮಃ.
ಓಂ, ಅಧರ್ಮಾಯ, ಪೀಠಗಾತ್ರಾಯನಮಃ.
ಓಂ, ಅಜ್ಞಾನಾಯ, ಪೀಠಗಾತ್ರಾಯನಮಃ

ಓಂ, ಅವೈರಾಗ್ಯಾಯ, ಪೀಠಗಾತ್ರಾಯನಮಃ.
ಓಂ, ಅನೈಶ್ವರ್ಯಾಯ, ಪೀಠಗಾತ್ರಾಯನಮಃ.
ಓಂ, ಏಭಿಃಪರಿಚ್ಛಿನ್ನತನವೇ, ಪೀಠಭೃತೇ, ಸದಾತ್ಮನೇ, ಅನಂತಾಯ,
ನಾಗರಾಜಾಯನಮಃ.
ಓಂ, ಅಷ್ಟದಳ ಪದ್ಮಾಯನಮಃ.
ಓಂ, ವಿಮಲಾಯೈ ಚಾಮರಹಸ್ತಾಯೈನಮಃ.
ಓಂ, ಉತ್ಕರ್ಷಿಣ್ಯೈ ಚಾಮರಹಸ್ತಾಯೈನಮಃ.
ಓಂ, ಜ್ಞಾನಾಯೈ ಚಾಮರಹಸ್ತಾಯೈನಮಃ.
ಓಂ, ಕ್ರಿಯಾಯೈ ಚಾಮರಹಸ್ತಾಯೈನಮಃ.
ಓಂ, ಯೋಗಾಯೈ ಚಾಮರಹಸ್ತಾಯೈನಮಃ.
ಓಂ, ಪ್ರಹ್ವ್ಯೈ ಚಾಮರಹಸ್ತಾಯೈನಮಃ.
ಓಂ, ಸತ್ಯಾಯೈ ಚಾಮರಹಸ್ತಾಯೈನಮಃ.
ಓಂ, ಈಶಾನಾಯೈ ಚಾಮರಹಸ್ತಾಯೈನಮಃ.
ಓಂ, ಅನುಗ್ರಹಾಯೈ ಚಾಮರಹಸ್ತಾಯೈನಮಃ.
ಓಂ, ಜಗತ್ಪ್ರಕೃತಯೇ ದಿವ್ಯಯೋಗಪೀಠಾಯನಮಃ.
ಓಂ, ದಿವ್ಯಯೋಗಪರ್ಯಂಕಾಯನಮಃ.
ಓಂ, ಸಹಸ್ರಫಣಾಮಣಿಮಂಡಿತಾಯ ಅನಂತಾಯನಾಗರಾಜಾಯನಮ
ಓಂ, ಪಾದಪೀಠಾತ್ಮನೇ ಅನಂತಾಯ ನಾಗರಾಜಾಯನಮಃ.
ಓಂ, ಸರ್ವಪರಿವಾರಾಣಾಂ, ಪದ್ಮಾಸನೇಭ್ಯೋನಮಃ.
ಓಂ, ಅನಂತಗರುಡವಿಷ್ವಕ್ಸೇನಾನಾಂ ಸಪೀಠಕ ಪದ್ಮಾಸನೇಭ್ಯೋನಮ
ಓಂ, ಅಸ್ಮದ್ಗುರುಭ್ಯೋನಮಃ.
ಓಂ, ಶ್ರೀಮತೇ ನಾರಾಯಣಾಯನಮಃ.
ಓಂ, ಶ್ರೀಂ, ಶ್ರಿಯೈನಮಃ.
ಓಂ, ಭೂಂ, ಭೂಮ್ಯೈನಮಃ.
ಓಂ, ನೀಂ, ನೀಳಾಯೈನಮಃ.
ಓಂ, ಸರ್ವಾಭ್ಯೋ ಭಗವದ್ದಿವ್ಯಮಹಿಷೀಭ್ಯೋನಮಃ.
ಓಂ, ಕಿರೀಟಾಯ ಮಕುಟಾಧಿಪತಯೇನಮಃ.
ಓಂ, ಕಿರೀಟಮಾಲಾಯೈ ಆಪೀಡಾತ್ಮನೇನಮಃ.

ಓಂ, ದಕ್ಷಿಣಕುಂಡಲಾಯ ಮಕರಾತ್ಮನೇನಮಃ.
ಓಂ, ವಾಮಕುಂಡಲಾಯ ಮಕರಾತ್ಮನೇನಮಃ.
ಓಂ, ವೈಜಯಂತ್ಯೈ ವನಮಾಲಾಯೈನಮಃ.
ಓಂ, ಶ್ರೀಮತ್ತುಲಸ್ಯೈನಮಃ.
ಓಂ, ಹಾರಾಯ ಸರ್ವಾಭರಣಾಧಿಪತಯೇನಮಃ.
ಓಂ, ಶ್ರೀವತ್ಸಾಯ ಶ್ರೀನಿವಾಸಾಯನಮಃ.
ಓಂ, ಕೌಸ್ತುಭಾಯ ಸರ್ವರತ್ನಾಧಿಪತಯೇನಮಃ.
ಓಂ, ಕಾಂಚೀಗುಣೋಜ್ವಲಾಯ ದಿವ್ಯಪೀತಾಂಬರಾಯನಮಃ.
ಓಂ, ಸರ್ವೇಭ್ಯೋ ಭಗವದ್ದಿವ್ಯಭೂಷಣೇಭ್ಯೋನಮಃ.
ಓಂ, ಸುದರ್ಶನಾಯ ಹೇತಿರಾಜಾಯನಮಃ.
ಓಂ, ನಂದಕಾಯ ಖಡ್ಗಾಧಿಪತಯೇನಮಃ.
ಓಂ, ಪದ್ಮಾಯನಮಃ.
ಓಂ, ಪಾಂಚಜನ್ಯಾಯ ಶಂಖಾಧಿಪತಯೇನಮಃ.
ಓಂ, ಕೌಮೋದಕ್ಯೈ ಗದಾಧಿಪತಯೇನಮಃ.
ಓಂ, ಶಾರ್ಙ್ಗಾಯ ಚಾಪಾಧಿಪತಯೇನಮಃ.
ಓಂ, ಸರ್ವೇಭ್ಯೋ ಭಗವದ್ದಿವ್ಯಾಯುಧೇಭ್ಯೋನಮಃ.
ಓಂ, ಸರ್ವಾಭ್ಯೋ ಭಗವತ್ಪಾದಾರವಿಂದ ಸಂವಾಹಿನೀಭ್ಯೋನಮಃ.
ಓಂ, ಅನಂತಾಯ ನಾಗರಾಜಾಯನಮಃ.
ಓಂ, ಸರ್ವೇಭ್ಯೋ ಭಗವತ್ಪರಿಜನೇಭ್ಯೋನಮಃ.
ಓಂ, ಭಗವತ್ಪಾದುಕಾಭ್ಯಾಂನಮಃ.
ಓಂ, ಸರ್ವೇಭ್ಯೋ ಭಗವತ್ಪರಿಚ್ಛದೇಭ್ಯೋನಮಃ.
ಓಂ, ವೈಂ, ವೈನತೇಯಾಯನಮಃ.
ಓಂ, ಭಗವತೇ ವಿಷ್ವಕ್ಸೇನಾಯನಮಃ.
ಓಂ, ಗಂ, ಗಜಾನನಾಯನಮಃ.
ಓಂ, ಜಂ, ಜಯತ್ಸೇನಾಯನಮಃ.
ಓಂ, ಹಂ, ಹರಿವಕ್ತ್ರಾಯನಮಃ.
ಓಂ, ಕಾಂ, ಕಾಲಪ್ರಕೃತಿ ಸಂಜ್ಞಾಯನಮಃ.
ಓಂ, ಸರ್ವೇಭ್ಯೋ ಭಗವದ್ವಿಷ್ವಕ್ಸೇನಪರಿಜನೇಭ್ಯೋನಮಃ.

ಓಂ, ಚಂಡಾಯ, ದ್ವಾರಪಾಲಾಯನಮಃ.

ಓಂ, ಪ್ರಚಂಡಾಯ ದ್ವಾರಪಾಲಾಯನಮಃ.

ಓಂ, ಭದ್ರಾಯ ದ್ವಾರಪಾಲಾಯನಮಃ.

ಓಂ, ಸುಭದ್ರಾಯ ದ್ವಾರಪಾಲಾಯನಮಃ.

ಓಂ, ಜಯಾಯ ದ್ವಾರಪಾಲಾಯನಮಃ.

ಓಂ, ವಿಜಯಾಯ ದ್ವಾರಪಾಲಾಯನಮಃ.

ಓಂ, ಧಾತ್ರೇ ದ್ವಾರಪಾಲಾಯನಮಃ.

ಓಂ, ವಿಧಾತ್ರೇ ದ್ವಾರಪಾಲಾಯನಮಃ.

ಓಂ, ಸರ್ವೇಭ್ಯೋ ಭಗವದ್ವಾರಪಾಲೇಭ್ಯೋನಮಃ.

ಓಂ, ಕುಮುದಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯ ನಮಃ.

ಓಂ, ಕುಮುದಾಕ್ಷಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯನಮಃ.

ಓಂ, ಪುಂಡರೀಕಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯ ನಮಃ.

ಓಂ, ವಾಮನಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯ ನಮಃ.

ಓಂ, ಶಂಕುಕರ್ಣಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯನಮಃ.

ಓಂ, ಸರ್ವನೇತ್ರಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯನಮಃ.

ಓಂ, ಸುಮುಖಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯ ನಮಃ.

ಓಂ, ಸುಪ್ರತಿಷ್ಠಾಯಗಣಾಧಿಪತಯೇ ಸವಾಹನಪರಿವಾರಪ್ರಹರಣಾಯ ನಮಃ.

ಓಂ, ಸರ್ವೇಭ್ಯೋ ಭಗವತ್ಪಾರ್ಷದೇಭ್ಯೋನಮಃ.

ಇತಿಸಂತರ್ಪಣ.

## ಅಥ ದೇವರ್ಷಿ, ಕಾಂಡರ್ಷಿ, ಪಿತೃತರ್ಪಣವಿಧಿಃ

ಆಚಮ್ಯ, ಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾ, ಭಗವತ್ಪ್ರೀತ್ಯರ್ಥಂ ದೇವರ್ಷಿ, ಕಾಂಡರ್ಷಿ, ಪಿತೃತರ್ಪಣಂಕರಿಷ್ಯೇ, ಇತಿ ಸಂಕಲ್ಪ್ಯ.

[೧] ದೇವಾನ್, ಋಷೀನ್, ಪಿತೄನ್, ಭಗವದಾತ್ಮಕಾನ್ ಧ್ಯಾತ್ವಾ, ಪ್ರಾಙ್ಮುಖಃ.

ಓಂ, ಬ್ರಹ್ಮಾದಯೋಯೇದೇವಾಸ್ತಾನ್ ದೇವಾನ್ ಸ್ತರ್ಪಯಾಮಿ.

ಓಂ, ಸರ್ವಾನ್ದೇವಾಂ ಸ್ತರ್ಪಯಾಮಿ.

ಓಂ, ಸರ್ವದೇವಗಣಾಂ ಸ್ತರ್ಪಯಾಮಿ.

ಓಂ. ಸರ್ವದೇವಪತ್ನೀ ಸ್ತರ್ಪಯಾಮಿ.

ಓಂ, ಸರ್ವದೇವಗಣಪತ್ನೀ ಸ್ತರ್ಪಯಾಮಿ.

ಇತಿ ದೇವತೀರ್ಥೇನ ವಿಸೃಜೇತ್.

## ಅಥ ಉದಙ್ಮುಖೋ ಅಂಗುಷ್ಠಸಕ್ತನಿವೀತೀ.

ಓಂ, ಕೃಷ್ಣದ್ವೈಪಾಯನಾದಯೋಯೇ ಋಷಯಃತಾನ್ಋಷೀನ್ ತರ್ಪಯಾಮಿ.

ಓಂ, ಸರ್ವಾನ್ಋಷೀನ್ ತರ್ಪಯಾಮಿ.

ಓಂ, ಸರ್ವಋಷಿಗಣಾಂ ಸ್ತರ್ಪಯಾಮಿ.

ಓಂ, ಸರ್ವಋಷಿಪತ್ನೀ ಸ್ತರ್ಪಯಾಮಿ.

ಓಂ, ಸರ್ವಋಷಿಗಣಪತ್ನೀ ಸ್ತರ್ಪಯಾಮಿ.

ಓಂ, ಪ್ರಜಾಪತಿಂಕಾಂಡಋಷಿಂ ತರ್ಪಯಾಮಿ.

ಓಂ, ಸೋಮಂಕಾಂಡಋಷಿಂ ತರ್ಪಯಾಮಿ.

ಓಂ, ಅಗ್ನಿಂಕಾಂಡಋಷಿಂ ತರ್ಪಯಾಮಿ.

ಓಂ, ವಿಶ್ವಾನ್ದೇವಾನ್ಕಾಂಡಋಷೀನ್ ತರ್ಪಯಾಮಿ.

ಓಂ, ಸಾಂಹಿತೀರ್ದೇವತಾ ಉಪನಿಷದ ಸ್ತರ್ಪಯಾಮಿ.

ಓಂ, ಯಾಜ್ಞಿಕೀರ್ದೇವತಾ ಉಪನಿಷದ ಸ್ತರ್ಪಯಾಮಿ.

---

೧ ಈ ಧ್ಯಾನಕ್ರಮವೂ, ತರ್ಪಣಕ್ರಮಗಳೂ ಹಿಂದೆ ಸ್ನಾನಪ್ರಕರಣದಲ್ಲಿ ವಿವರಿಸಲ್ಪಟ್ಟಿವೆ.

ಓಂ, ವಾರುಣೀದೇವತಾ ಉಪನಿಷದಸ್ತರ್ಪಯಾಮಿ.

ಓಂ, ಬ್ರಹ್ಮಾಣಂ ಸ್ವಯಂಭುವಂ ತರ್ಪಯಾಮಿ.

ಓಂ, ಸದಸಸ್ಪತಿಂ ತರ್ಪಯಾಮಿ.

ಇತಿ ಋಷಿತೀರ್ಥೇನ ವಿಸೃಜೇತ್.

## ಅಥ ದಕ್ಷಿಣಮುಖಃ ಪ್ರಾಚೀನಾವೀತಿ.

ಓಂ, ಸೋಮಃ ಪಿತೃಮಾನ್ಯಮೋಽಙ್ಗಿರಸ್ವಾನ್ನಗ್ನಿಕವ್ಯವಾಹನಾದಯೋ
ಯೇ ಪಿತರಃ ತಾನ್ ಪಿತ್ರೂನ್ ತರ್ಪಯಾಮಿ.

ಓಂ, ಸರ್ವಾನ್ ಪಿತ್ರೂನ್ ತರ್ಪಯಾಮಿ.

ಓಂ, ಸರ್ವಪಿತೃಗಣಾಂಸ್ತರ್ಪಯಾಮಿ.

ಓಂ, ಸರ್ವಪಿತೃಪತ್ನೀಸ್ತರ್ಪಯಾಮಿ.

ಓಂ, ಸರ್ವಪಿತೃಗಣಪತ್ನೀಸ್ತರ್ಪಯಾಮಿ.

ಇತಿ ಪಿತೃತೀರ್ಥೇನ ಸಂತರ್ಪ್ಯ.

ಊರ್ಜಂ ವಹಂತೀರಮೃತಂ ಘೃತಂ ಪಯಃ ಕೀಲಾಲಂ ಪರಿಸ್ರುತಂ,
ಸ್ವಧಾಸ್ಥ ತರ್ಪಯತ ಮೇ ಪಿತ್ರೂನ್.

ಇತಿ ಜಲೇ ಅಂಜಲಿನಾ ತ್ರಿಃ ಪ್ರದಕ್ಷಿಣೀಕೃತ್ಯ, ದಕ್ಷಿಣಪ್ರಾಚ್ಯಾಂ ತೀರಂ ಸಂಶೋಧ್ಯ.

ತೃಪ್ಯತ, ತೃಪ್ಯತ, ತೃಪ್ಯತ.

ಇತಿ ತ್ರಿಃ ಜಲಾಂಜಲಿಂ ಪ್ರಕ್ಷಿಪ್ಯ ತತ್ತೀರಂ ಪುನಸ್ಸಂಶೋಧಯೇತ್ ಉಪವೀತೀ ದ್ವಿರಾಚಾಮೇತ್.

## ಅಥ ವಸ್ತ್ರನಿಷ್ಪೀಡನಕ್ರಮಃ.

ನಿವೀತೀ, ಸ್ನಾನವಸ್ತ್ರಂ ಚತುರ್ಗುಣೀಕೃತ್ಯ,

ಯೇ ಕೇ ಚಾಸ್ಮತ್ಕುಲೇ ಜಾತಾಃ ಅಪುತ್ರಾ ಗೋತ್ರಜಾ ಮೃತಾಃ ।
ತೇ ಗೃಹ್ಣಂತು ಮಯಾ ದತ್ತಂ ವಸ್ತ್ರನಿಷ್ಪೀಡನೋದಕಂ ॥

ಇತಿ ಮಂತ್ರೇಣ, ಶುಚಿ[೧]ದೇಶೇ ಅಪಸವ್ಯಂ ನಿಷ್ಪೀಡ್ಯ ವಾಮಪ್ರಕೋಷ್ಠೇ ವಿನ್ಯಸ್ಯ, ಉಪವೀತೀ ದ್ವಿರಾಚಮ್ಯ.

೧ ಈ ಶ್ಲೋಕಾರ್ಥವು ಸ್ನಾನಪ್ರಕರಣದಲ್ಲಿ ಬರೆಯಲ್ಪಟ್ಟಿದೆ.

ಪೇ ಆವಾಹಿತತೀರ್ಥಾನಿ, ತದರ್ಥಮಂತ್ರಾಶ್ಚ ದೇವಾತ್ಮನಿ। ಸಮಾ
ಗಚ್ಛತ ಇತ್ಯುಕ್ತ್ವಾ ಆವಾಹಿತತೀರ್ಥಮಸ್ತ್ರ ಆದ್ಯಾನಮು
ದ್ರಯಾ ಮೂಲಮಂತ್ರೇಣ ಸಮಾಹರೇತ್ ॥

ದ್ವಾದಶ್ಯಾಂ, ದರ್ಶಸಂಕ್ರಾಂತ್ಯೋಃ ಶ್ರಾದ್ಧದಿನೇ ಚ ಪ್ರಾತಃ ವಸ್ತ್ರ
ನಿಷ್ಪೀಡನಂ, ನಕುರ್ಯಾತ್, ಶ್ರಾದ್ಧಾನಂತರಂ ಕುರ್ಯಾತ್.

## ಸಾತ್ತ್ವಿಕತ್ಯಾಗಃ.

ಭಗವಾನೇವ ಸ್ವನಿಯಾಮ್ಯ ಸ್ವರೂಪಸ್ಥಿತಿಪ್ರವೃತ್ತಿ ಸ್ವಶೇಷತೈಕ
ರಸೇನ ಮಯಾ ಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕ
ಪ್ರಯೋಜನಾಯ ಪರಮಪುರುಷಸ್ಸರ್ವಶೇಷೀ ಸ್ವಶೇಷಭೂ
ತಮಿದಂ ಪ್ರಾತಸ್ಸಂಧ್ಯೋಪಾಸನಾಖ್ಯಂ ಕರ್ಮ ಸ್ವಸ್ಮೈ ಸ್ವ
ಪ್ರೀತಯೇ ಸ್ವಯಮೇವ ಕಾರಿತವಾನ್.

ಅನೇನ ಪ್ರಾತಸ್ಸಂಧ್ಯೋಪಾಸನಾಖ್ಯೇನ ಭಗವತ್ಕರ್ಮಣಾ ಭಗವಾ
ನ್ಪ್ರೀಯತಾಂ ವಾಸುದೇವಃ, ಇತಿ ಪ್ರಾತಸ್ಸಂಧ್ಯೋಪಾಸನಂ
ಸಮಾಪಯೇತ್.

ತಾ॥ ಸಾತ್ತ್ವಿಕತ್ಯಾಗ ಶಬ್ದಾರ್ಥವು ಸಂಧ್ಯಾಪ್ರಕರಣದಲ್ಲಿ ಬರೆಯ
ಲ್ಪಟ್ಟಿದೆ.

## ಅಥ ಬ್ರಹ್ಮಯಜ್ಞವಿಧಿಃ.

ಸ್ಮೃತಿರತ್ನಾಕರೇ॥ ಯಶ್ಚ ಶ್ರುತಿಜಪಃ ಪ್ರೋಕ್ತೋ ಬ್ರಹ್ಮಯಜ್ಞ
ಸ್ಸ ಉಚ್ಯತೇ, ಅತೋ ವೇದ ಏವ ಬ್ರಹ್ಮಯಜ್ಞೇ ಅಧ್ಯೇತವ್ಯಃ॥

ತಾತ್ಪರ್ಯ॥ ವೇದಾಧ್ಯಯನವೇ ಬ್ರಹ್ಮಯಜ್ಞವೆನಿಸಿಕೊಂಡಿರುವ ಪ್ರ
ಯುಕ್ತ, ಬ್ರಹ್ಮಯಜ್ಞದಲ್ಲಿ ವೇದಾಧ್ಯಯನವೇ ಮಾಡತಕ್ಕದ್ದು.

ವೈಖಾನಸಃ॥ ಸ್ವಶಾಖಾಧ್ಯಯನಂ ಯತ್ತು ಬ್ರಹ್ಮಯಜ್ಞಂ ಪ್ರಚಕ್ಷತೇ
ಬ್ರಹ್ಮಯಜ್ಞಪರೋ ವಿಪ್ರೋ ಬ್ರಹ್ಮಲೋಕೇ ಮಹೀಯತೇ।

ತಾತ್ಪರ್ಯ॥ ತನ್ನ ಶಾಖಾಧ್ಯಯನವನ್ನ ಮಾಡುವದೇ ಬ್ರಹ್ಮಯ
ಜ್ಞವೆನಿಸುವದು. (ಇಲ್ಲಿ ಸ್ವಶಾಖಾ ಎಂದು ವಿಶೇಷ ಹೇಳಿದ ಪ್ರಯು

ಕ್ತ ವೇದಾಂತರವನ್ನ ಅಧ್ಯಯನ ಮಾಡಿದ್ದಾಗ್ಯೂ ಬ್ರಹ್ಮಯಜ್ಞದಲ್ಲಿ ವೇದಾಂತರಾಧ್ಯಯನವು ಕೂಡದೆಂಬ ಹೇಳಿದಂತಾದುದು) ಬ್ರಹ್ಮಯಜ್ಞ ನಿರತನಾದ ಮನುಷ್ಯನು ಪರಬ್ರಹ್ಮ ಸಾಯುಜ್ಯವನ್ನ ಹೊಂದುತ್ತಾನೆ.

ಹರಿರೋಮಿತಿನಿರ್ದಿಶ್ಯ ಯತ್ಕರ್ಮಕ್ರಿಯತೇಬುಧೈಃ । ಅಧೀಯ
ತೇವಾದೇವರ್ಷೇ ತದ್ವಿವೀರ್ಯೋತ್ತರಂಭವೇತ್ ॥

ತಾತ್ಪರ್ಯ॥ ಹರಿಃ, ಓಂ, ಎಂದು ಆರಂಭಿಸಿ ಯಾವಕರ್ಮ ಮಾಡಿದಾಗ್ಯೂ, ಯಾವ ಅಧ್ಯಯನ ಮಾಡಿದಾಗ್ಯೂ, ಅದೆಲ್ಲವೂ, ನಾರದಮುನಿಗಳೇ, ವೀರ್ಯವತ್ತರವಾಗುವದು, ಎಂದು ಹೇಳಿರುತ್ತಾಗಿ ಪ್ರಥಮತಃ ಹರಿಃ, ಓಂ, ಎಂದು ಉಚ್ಚರಿಸಿಯೇ ಅಧ್ಯಯನ ಮಾಡಬೇಕು.

ಬ್ರಹ್ಮಯಜ್ಞವಿಹೀನಶ್ಚ ಬ್ರಹ್ಮಹಾಕೀರ್ತಿತೋಬುಧೈಃ । ಅತೋಽನ
ಧೀತಸ್ಯಾಪಿ ಬ್ರಹ್ಮಯಜ್ಞೇಗಾಯತ್ರೀಯಥಾಶಕ್ತಿಜಪ್ತವ್ಯಾ॥

ತಾತ್ಪರ್ಯ ॥ ಬ್ರಹ್ಮಯಜ್ಞ ಮಾಡದವನಿಗೆ ಬ್ರಹ್ಮಹತ್ಯಕ್ಕೆ ಸಮಾನವಾದ ದೋಷವು ಪ್ರಾಪ್ತವಾಗುವುದು.

ಅದುಕಾರಣ ಅಧ್ಯಯನ ಮಾಡದವನಾದಾಗ್ಯೂ ಬ್ರಹ್ಮಯಜ್ಞದಲ್ಲಿ ಅಧ್ಯಯನಕ್ಕೆ ಪ್ರತಿಯಾಗಿ ಯಥಾಶಕ್ತಿ ಗಾಯತ್ರೀ ಜಪವನ್ನಾದರೂ ಅನುಷ್ಠಿಸಬೇಕು.

ತಥಾಚ ಮನುಃ ॥ ಗಾಯತ್ರೀಮಪ್ಯಧೀಯೀತಗತ್ವಾರಣ್ಯಂಸಮಾ
ಹಿತಃ ॥

ತಾತ್ಪರ್ಯ॥ ಬ್ರಹ್ಮಯಜ್ಞಕಾಲದಲ್ಲಿ, ಅರಣ್ಯವನ್ನ ಹೊಂದಿ ಕೊನೆಗೆ ಗಾಯತ್ರೀಯನ್ನಾದರೂ ಅಧ್ಯಯನ ಮಾಡಬೇಕು.

ಶ್ರೀವಿಷ್ಣುಧರ್ಮೋತ್ತರೇ ॥ ಬ್ರಹ್ಮಯಜ್ಞೇಜಪೇತ್ಸೂಕ್ತಂಪೌ
ರುಷಂಚಿಂತಯನ್ಹರಿಂ । ಸಸರ್ವಾನ್ಜಪತೇವೇದಾನ್ಸಾಂಗೋ
ಪಾಂಗಾನ್ವಿಧಾನತಃ ॥

ತಾತ್ಪರ್ಯ॥ ಬ್ರಹ್ಮಯಜ್ಞದಲ್ಲಿ, ಪುರುಷಸೂಕ್ತ ಪ್ರತಿಪಾದ್ಯನಾದ ದೇವರನ್ನು ಧ್ಯಾನಿಸಿಕೊಂಡು ಪುರುಷಸೂಕ್ತವನ್ನ ಯಾವನು ಅಧ್ಯಯನ ಮಾಡುವನೋ ಅಂತಹವನು ಸಾಂಗಾಧ್ಯಯನವನ್ನ ಮಾಡಿದ ಫಲಕ್ಕೆ ಭಾಗಿಯಾಗುವನು.

ಅದುಕಾರಣ, ಅಧ್ಯಯನ ಮಾಡದವರೂ, ಅಶಕ್ತರೂ ಸಹಾ ಬ್ರಹ್ಮಯಜ್ಞದಲ್ಲಿ ಪುರುಷಸೂಕ್ತವನ್ನೇ ಜಪಿಸಬೇಕು.

ಶ್ರು॥ ಯಸ್ತ್ವೇತೋಧೀತೆದಯಮಾಕಾಲ್ಯಾಶ್ವ ॥

ತಾತ್ಪರ್ಯ॥ ಈ ಬ್ರಹ್ಮಯಜ್ಞವು ನಿತ್ಯವು, ಇಲ್ಲದೇ ವಿಜ್ಞಾನೇಶ್ವರದಲ್ಲಿ, ಋಗಧ್ಯಯನ ಮಾಡಿದ್ದಾದರೆ ಪಿತೃಗಳನ್ನ ಕ್ಷೀರಾದಿಗಳಿಂದ ಸಂತೋಷ ಪಡಿಸುವನು. ಇತ್ಯಾದಿ ಪ್ರಮಾಣಾನುಸಾರ ಕಾಮ್ಯವೂ ಅಹುದೆಂದು ಹೇಳಿದೆ.

ಆಪಸ್ತಂಬಃ॥ ಅಕೃತಪ್ರಾತರಾಶ ಉದಕಾಂತಂಗತ್ವಾಪ್ರಯತಃ ।
ಶುಚೌದೇಶೇಅಧೀಯೀತಯಥಾಧ್ಯಾಯಮುತ್ಸೃಜನ್ವಾಚಾ॥

ತಾತ್ಪರ್ಯ॥ ಭೋಜನಾತ್ಪೂರ್ವ ಉದಕಸಮೀಪದಲ್ಲಿ, ಪರಿಶುದ್ಧನಾಗಿ, ಪರಿಶುದ್ಧಪ್ರದೇಶದಲ್ಲಿ ಅಧ್ಯಯನಾನುಸಾರ ಉಚ್ಚಸ್ವರದಿಂದ ಬ್ರಹ್ಮಯಜ್ಞಾಧ್ಯಯನ ಮಾಡತಕ್ಕದ್ದು.

ಶ್ರು॥ ತಸ್ಯಹವಾಏತಸ್ಯಯಜ್ಞಸ್ಯದ್ವಾವನಧ್ಯಾಯೌ, ಯದಾತ್ಮಾಶುಚಿರ್ಯದ್ದೇಶಃ ।

ತಾತ್ಪರ್ಯ॥ ಪ್ರಸಿದ್ಧವಾದ ಈ ಬ್ರಹ್ಮಯಜ್ಞಕ್ಕೆ ಎರಡು ಅನಧ್ಯಾಯಗಳು, ತಾನು ಅಶುದ್ಧನಾಗಿ ಇರುವಿಕೆಯೂ, ಬ್ರಹ್ಮಯಜ್ಞ ಮಾಡತಕ್ಕ ಪ್ರದೇಶದ ಅಪರಿಶುದ್ಧತ್ವವೂ, ಇದರಿಂದ ತಾನು ಪರಿಶುದ್ಧನಾಗಿರುವ ಕಾಲದಲ್ಲಿಯೂ, ಶೂದ್ರ ಚಾಂಡಾಲಾದಿಗಳು ಇರತಕ್ಕ ಪ್ರದೇಶದಲ್ಲಿಯೂ ಬ್ರಹ್ಮಯಜ್ಞ ಮಾಡಕೂಡದೆಂದು ಸಿದ್ಧವಾಯಿತು.

ಈ ಬ್ರಹ್ಮಯಜ್ಞಕ್ಕೆ.

ಸ್ನಾನ್ಯಾಶೀಚಕ್ಷ್ಯೇಪಮ್ಯಾಯಾ ಸ್ವಾಧ್ಯಾಯೇಪ್ಯನಧ್ಯಯಃ ॥

ಎಂದು ಮನುಸ್ಮೃತಿಯಲ್ಲಿಯೂ,

ಅನಧ್ಯಾಯದಿವಸೇಪ್ಯೇಷಿವಿಷಯೋವಾಧ್ಯಾಯಸಂಕರ್ತೌ ಸ್ವಂ ನಿತ್ಯತ್ವಾತ್ ಎಂದು ಅಖಂಡಾದರ್ಶದಲ್ಲಿಯೂ ಹೇಳಿರುತ್ತಾಗಿ ಅನಧ್ಯಾಯ ದೋಷ ವಿಲ್ಲವು.

## ಅಥ ಅಪತ್ನೀಕಸ್ಯ ಬ್ರಹ್ಮಯಜ್ಞಾದ್ಯನಧಿಕಾರಃ.

ಸ್ಮೃತಿರತ್ನಾಕರೇ॥ ಅಯಜ್ಞೋವಾವಿಷಃಯೋಪತ್ನೀಕಃ, ಪಾಣಿ ಗ್ರಹಣಾದಧಿಗೃಹಮೇಧಿನೋವ್ರತಂ, ಪಂಚಕ್ಲುಪ್ತಾ ಮಹಾ ಯಜ್ಞಾಃ ಪ್ರತ್ಯಹಂಗೃಹಮೇಧಿನಾಂ॥

ತಾತ್ಪರ್ಯ॥ ಯಾವನು ಅಪತ್ನೀಕನೋ ಅವನು ಯಜ್ಞಾಧಿಕಾರವಿಲ್ಲ ದವನು.

ವಿವಾಹಾನಂತರವೇ ಗೃಹಸ್ಥನಿಗೆ ವ್ರತಾನುಷ್ಠಾನವು ಹೇಳಲ್ಪಟ್ಟಿ ರುವದು.

ಗೃಹಸ್ಥರಿಂದ ಪ್ರತ್ಯಹದಲ್ಲಿಯೂ ಪಂಚಮಹಾಯಜ್ಞಗಳು ಅನು ಷ್ಠಿಸಲ್ಪಡತಕ್ಕವುಗಳು.

ಇತ್ಯಾದಿ ವಾಕ್ಯಗಳಿಂದ ಪಂಚಮಹಾ ಯಜ್ಞಾಧಿಕಾರವು ಗೃಹ ಸ್ಥನಿಗೇನೆ ಹೇಳಲ್ಪಟ್ಟಿರುವದರಿಂದಲೂ, ಪತ್ನಿವಿರಹಿತನಿಗೆ ಯಜ್ಞಾಧಿ ಕಾರವಿಲ್ಲವೆಂದು ಶ್ರುತಿ ಹೇಳುವದರಿಂದಲೂ, ವಿಧುರ (ಪತ್ನಿಯನ್ನ ಕಳ ಕೊಂಡವ) ನಿಗೆ ಬ್ರಹ್ಮಯಜ್ಞಾದಿ ಪಂಚಮಹಾ ಯಜ್ಞಾಧಿಕಾರವಿಲ್ಲವು.

ಬ್ರಹ್ಮಚಾರಿಗಳಿಗೆ ಅಧಿಕಾರವುಂಟು.

ತಥಾಸಾರದೀಪೇ॥ ಸಾಯಂಪ್ರಾತರಗ್ನಿಕಾರ್ಯಂಯಥಾಕಾಲಂಜಿತೇಂ ದ್ರಿಯಃ । ಕುರ್ಯಾತ್ಪ್ರತಿದಿನಂವರ್ಣೀ ಬ್ರಹ್ಮಯಜ್ಞಂಚ ತರ್ಪಣಂ॥

ತಾತ್ಪರ್ಯ॥ ಬ್ರಹ್ಮಚಾರಿಯು ಪ್ರತಿದಿವಸವೂ ಸಾಯಂಪ್ರಾತಃ, ಅಗ್ನಿ ಕಾರ್ಯವನ್ನೂ, ಬ್ರಹ್ಮಯಜ್ಞವನ್ನೂ, ದೇವಋಷ್ಯಾದಿ ತರ್ಪಣವನ್ನೂ ಮಾಡಬೇಕು.

## ಅಥಬ್ರಹ್ಮಯಜ್ಞಪ್ರಯೋಗಃ.

ಆಚಮ್ಯ, ತ್ರಿಃಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂಬ್ರಹ್ಮಯಜ್ಞೇನಯಕ್ಷ್ಯೇ, ಇತಿ ಸಂಕಲ್ಪ್ಯ

ವಿದ್ಯುದಸಿವಿದ್ಯಮೇ ಪಾಪ್ಮಾನಮೃತಾತ್ಸತ್ಯಮುಪೈಮಿ ॥

ಇತಿ ದಕ್ಷಿಣಕರತಲೇಅಪಉಪಸ್ಪೃಶ್ಯ, ವಾಮಕರತಲಂ ಸಮ್ಮೃಜ್ಯ, ತೂಷ್ಣೀಂತ್ರಿರಪಃಪಾತ್ವಾ, ದ್ವಿಃಪರಿಮೃಜ್ಯ, ಸಕೃದುಪಸ್ಪೃಶ್ಯ, ಶಿರಃ, ಸರ್ವಾಂಗುಳೀಭಿಃ, ಚಕ್ಷುಷೀ, ಅನಾಮಿಕಯಾ, ನಾಸಿಕೇತರ್ಜನ್ಯಾ. ಶ್ರೋತ್ರೇಕನಿಷ್ಠಿಕಯಾ, ಹೃದಯಂತಲೇನ, ಉಪಸ್ಪೃಶ್ಯ, ಶುಚೌದೇಶೇದರ್ಭಾನಾಸ್ತೀರ್ಯ, ತತ್ರಾಸೀನಃ ಸಪವಿತ್ರಪಾಣಿರ್ದ್ವಯುಃ, ತ್ರಿಃಪ್ರಾಣಾನಾಯಮ್ಯ, ದಕ್ಷಿಣಪಾದೋತ್ತರ ಮುಪಸ್ಥಂಕೃತ್ವಾ ದಕ್ಷಿಣ ಜಾನುನಿದಕ್ಷಿಣೋತ್ತರೌ ಪಾಣೀಕೃತ್ವಾ.

ತಾತ್ಪರ್ಯ॥ ಆಚಮನಾನಂತರ ತ್ರಿರಾವೃತ್ತಿ ಪ್ರಾಣಾಯಾಮ ಮಾಡಿ ಸಂಕಲ್ಪಾನಂತರ, ವಿದ್ಯುದಸಿ, ಎಂಬ ಮಂತ್ರದಿಂದ ಬಲಗೈಯನ್ನ ಉದಕದಿಂದ ತೊಡೆದು, ಎಡಗೈಯನ್ನೂ ಸ್ವಲ್ಪ ತೊಡೆದು ಮಂತ್ರವಿಲ್ಲದೇ ತ್ರಿರಾವೃತ್ತಿ ಆಚಮನ ಮಾಡಿ, ಎರಡಾವೃತ್ತಿ ತೊಡೆದುಕೊಂಡು, ಒಂದಾವೃತ್ತಿ ಆಚಮನ ಮಾಡಿ, ಶಿರಸ್ಸರ್ವಾಂಗುಳಿಭಿಃ ಎಂದು ಹೇಳಿರುವ ಪ್ರಕಾರ ಆಯಾಯಾ ಬೆರಳುಗಳಿಂದ ಸ್ಪರ್ಶಮಾಡಿ, ಶುದ್ಧವಾದ ಪ್ರದೇಶದಲ್ಲಿ ದರ್ಭಗಳಮೇಲೆ ಕುಳಿತುಕೊಂಡು ಎರಡುಕೈಗಳಲ್ಲಿಯೂ ಪವಿತ್ರವನ್ನ ಧರಿಸಿ ತ್ರಿರಾವೃತ್ತಿ ಪ್ರಾಣಾಯಾಮ ಮಾಡಿ ಬಲಪಾದವೇ ಮೇಲಾಗುವಂತೆ ಆಸನದಲ್ಲಿ ಕುಳಿತು ಬಲಮಂಡಿಯಲ್ಲಿ ದಕ್ಷಿಣೋತ್ತರವಾಗಿ ಹಸ್ತಗಳನ್ನ ಮಾಡಿ ಕೂತುಕೊಳ್ಳುವದು.

ಅನಂತರ, ಓಂ ಎಂದು ಹೇಳಿ,

ಓಂ ಭೂಃ, ಓಂ ಭುವಃ, ಓಂ ಸುವಃ, ಎಂದು ವ್ಯಾಹೃತಿತ್ರಯವನ್ನೂ ಹೇಳಿ,

ಓಂ[೧] ತತ್ಸವಿತುರ್ವರೇಣಿಯಂ,

ಓಂ ಭರ್ಗೋದೇವಸ್ಯಧೀಮಹಿ,

ಓಂ ಧಿಯೋಯೋನಃಪ್ರಚೋದಯಾತ್ ಎಂದು ಪಾದಶಃ.

ಓಂ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ

ಧಿಯೋಯೋನಃಪ್ರಚೋದಯಾತ್ ॥ ಇತ್ಯರ್ಧಶಃ.

ಓಂ ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ

ಧಿಯೋಯೋನಃ ಪ್ರಚೋದಯಾತ್ ॥ ಇತ್ಯನವಾನಂಚೋಚ್ಚರೇತ್

ಅಥವಾ

ಓಂ ಭೂಃ, ತತ್ಸವಿತುರ್ವರೇಣಿಯಂ

ಓಂ ಭುವಃ, ಭರ್ಗೋದೇವಸ್ಯಧೀಮಹಿ

ಓಂ ಸುವಃ, ಧಿಯೋಯೋನಃಪ್ರಚೋದಯಾತ್ ॥

ಇತಿಪಾದಶಃ.

ಓಂ ಭೂಃ, ತತ್ಸವಿತುರ್ವರೇಣಿಯಂ, ಭರ್ಗೋದೇವಸ್ಯಧೀಮಹಿ.

ಓಂ ಭುವಃ, ಧಿಯೋಯೋನಃ ಪ್ರಚೋದಯಾತ್.

ಇತ್ಯರ್ಧಶಃ.

ಓಂ ಸುವಃ, ತತ್ಸವಿತುರ್ವರೇಣಿಯಂ ಭರ್ಗೋದೇವಸ್ಯಧೀಮಹಿ

ಧಿಯೋಯೋನಃಪ್ರಚೋದಯಾತ್ ॥

ಇತ್ಯನವಾನಂ.

ಓಂ ಭೂರ್ಭುವಸ್ಸುವಃತತ್ಸವಿತುರ್ವರೇಣಿಯಂ ಭರ್ಗೋದೇವಸ್ಯ ಧೀಮಹಿ ಧಿಯೋಯೋನಃಪ್ರಚೋದಯಾತ್ ॥ ಇತಿಚೋಕ್ತ್ವಾ.

ಉಭಯಪ್ರಕ್ರಿಯಯೋಃ ತದುಪರಿವಕ್ಷ್ಯಮಾಣಂ ಸರ್ವಂಸಮಮೇವ ವೇದಾದೀನುಕ್ತ್ವಾ ॥

ತಾತ್ಪರ್ಯ॥ ಈ ಎರಡು ಸಂಪ್ರದಾಯದಲ್ಲಿಯೂ ಮುಂದೆ ಬರೆಯಲ್ಪಡುವ ವೇದಾದಿಗಳು ಸಮಾನವಾಗಿಯೇ ಹೇಳಲ್ಪಡತಕ್ಕವುಗಳು.

---

೧ ಇದು ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಪ್ರಕ್ರಿಯೆಯು ಮುಂದೆ ಬರೆಯುವದು ಸಂಪ್ರದಾಯಾನುಸಾರವಾಗಿರುವದು.

ಹರಿಃ ಓಂ ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿ

ಜಂ, ಹೋತಾರಗ್ಂ ರತ್ನಧಾತಮಂ ಹರಿಃ ಓಂ ||

ಹರಿಃ ಓಂ ಇಷೇತ್ವೋರ್ಜೇತ್ವಾ ವಾಯವಸ್ಥೋಪಾಯವಸ್ಥ

ದೇವೋವಸ್ಸವಿತಾಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣೇ

ಹರಿಃ ಓಂ.

ಹರಿಃ ಓಂ ಅಗ್ನ ಆಯಾಹಿವೀತಯೇ ಗೃಣಾನೋ ಹವ್ಯದಾತ

ಯೇ, ನಿಹೋತಾಸತ್ಸಿಬರ್ಹಿಷಿ, ಹರಿಃ ಓಂ.

ಹರಿಃ ಓಂ, ಓಂ ಶನ್ನೋ ದೇವೀರಭಿಷ್ಟಯೇ ಆಪೋಭವಂತು

ಪೀತಯೇ ಶಂಯೋರಭಿಸ್ರವಂತುನಃ ಹರಿಃ ಓಂ.

ಇತಿ ಅಧೀತಕ್ರಮೇಣ ಸ್ವಶಾಖಾಯಾಃ ಪ್ರಶ್ನಮನುವಾಕಂವಾ ಯ
ಥಾಶಕ್ತ್ಯಧೀತ್ಯ, ಪುಂಸೂಕ್ತಂವಾ ಆವರ್ತಯೇತ್.

ಸ್ವಾಧ್ಯಾಯಾಧ್ಯಯನಾಭಾವೇ ಪುಂಸೂಕ್ತಂವಾ ಯಥಾಶಕ್ತ್ಯಾ ಗಾ
ಯತ್ರೀಂವಾ ಅಧೀತ್ಯ, ತತಃ.

ಓಂ ಭೂರ್ಭುವಸ್ಸುವಃ, ಇತ್ಯಾತ್ಮಾನಂ ಪರಿಷಿಚ್ಯ.
ಓಂ ಸತ್ಯಂ ತಪಃ ಶ್ರದ್ಧಾಯಾಂ ಜುಹೋಮಿ.

ನಮೋ ಬ್ರಹ್ಮಣೇ ನಮೋ ಅಸ್ತ್ವಗ್ನಯೇ ನಮಃ ಪೃಥಿವ್ಯೈ ನಮ

ಓಷಧೀಭ್ಯಃನಮೋ ವಾಚೇನಮೋವಾಚಸ್ಪತಯೇನಮೋ ವಿಷ್ಣ

ವೇಬೃಹತೇಕರೋಮಿ.

ಇತಿತ್ರಿಃಪಠಿತ್ವಾ.

ವೃಷ್ಟಿರಸಿವೃಶ್ಚಮೇಪಾಪ್ಮಾನಮೃತಾತ್ಸತ್ಯಮುಪಾಗಾಂ.

ಇತಿ ದಕ್ಷಿಣಕರತಲೇ ಅಪಉಪಸ್ಪೃಶ್ಯ ವಾಮಕರತಲಂ ಸಮ್ಮೃಜ್ಯ
ಆಚಾಮೇತ್ ಪ್ರಾತಃಬ್ರಹ್ಮಯಜ್ಞಾಕರಣೇ ಮಾಧ್ಯಾಹ್ನಿಕಾನಂತರ
ತರ್ಪಣಾತ್ಪೂರ್ವಂ ವೈಶ್ವದೇವಾಂತೇವಾ ಕುರ್ಯಾತ್.

ತಾತ್ಪರ್ಯ॥ ಬ್ರಹ್ಮಯಜ್ಞದಲ್ಲಿ ತಾನು ಅಧ್ಯಯನ ಮಾಡಿರುವ
ಪ್ರಕಾರ ತನ್ನ ಶಾಖೆಯಲ್ಲಿ ಬಂದು ಪ್ರಶ್ನವನ್ನೋ, ಅಥವಾ ಅನುವಾಕ
ವನ್ನೋ, ಯಥಾಶಕ್ತಿ ಅಧ್ಯಯನ ಮಾಡಿ ಪುರುಷಸೂಕ್ತವನ್ನ ಹೇಳ
ತಕ್ಕದ್ದು.

ಅಧ್ಯಯನ ಮಾಡದೇ ಇದ್ದಪಕ್ಷ ಪುರುಷಸೂಕ್ತವನ್ನಾಗಲೀ ಬ
ತ್ತಾವೃತ್ತಿ ಗಾಯತ್ರಿಯನ್ನಾಗಲಿ ಜಪಿಸತಕ್ಕದ್ದು. ಅನಂತರ ತನ್ನ
ವ್ಯಾಹೃತಿಯಿಂದ ಪರಿಷೇಚನ ಮಾಡಿ, ಓಂ ಸತ್ಯಂತಪಃ ಎಂಬ ಮೇಲೆ
ಬರದಿರುವ ಮಂತ್ರವನ್ನ ಹೇಳಿ, ನಮೋಬ್ರಹ್ಮಣೇಕರೋಮಿ ಎಂಬ
ಮಂತ್ರವನ್ನ ಮೂರಾವೃತ್ತಿ ಹೇಳಿ ವೃಷ್ಟಿರಸಿ ಎಂಬ ಮೇಲೆ ಬರದಿರು
ಮಂತ್ರದಿಂದ ಬಲಗೈಯನ್ನ ಉದಕದಿಂದ ತೊಡೆದು, ಎಡಗೈಯನ್ನ
ತೊಡೆದು ಆಚಮನ ಮಾಡತಕ್ಕದ್ದು.

ಪ್ರಾತಃ ಬ್ರಹ್ಮಯಜ್ಞ ಮಾಡದಿದ್ದಪಕ್ಷ ಮಧ್ಯಾಹ್ನಿಕಾನಂತ
ತರ್ಪಣಾತ್ಪೂರ್ವದಲ್ಲಿಯೋ ವೈಶ್ವದೇವಾನಂತರವೋ ಮಾಡತಕ್ಕದ್ದು.

---

೧ ಪುರುಷಸೂಕ್ತವು ಆರಾಧನಾ ಪ್ರಕರಣದಲ್ಲಿ ಬರೆಯಲ್ಪಡುತ್ತೆ.

## ಅಥ ಗೃಹಾಗಮನಪ್ರಕಾರಃ.

ಅನಂತರ, ಸ್ನಾನಾದ್ಯನುಷ್ಠಾನವಂ ಮಾಡಿದ ತೀರ್ಥಕ್ಕೆ ಸಮೀಪ ವರ್ತಿಯಾದ ವಿಷ್ಣ್ವಾಲಯದ ಸಮೀಪವನ್ನು ಹೊಂದಿ, ಆಲಯಪ್ರವೇಶಕ್ಕೆ ಪೂರ್ವ ದೂರದಲ್ಲಿಯೇ ಪ್ರದಕ್ಷಿಣ ಮಾಡಿ, ನಾಲ್ಕು ದಿಕ್ಕಿನಲ್ಲಿಯೂ ಸಾಷ್ಟಾಂಗ ಪ್ರಣಾಮಂಗಳನ್ನು ಮಾಡುವುದು.

ಅನಂತರ, ವಿಷ್ವಕ್ಸೇನರನ್ನೂ, ದ್ವಾರಪಾಲಕರುಗಳನ್ನೂ ವಂದಿಸಿ, ಅವರಿಂ ಅಂತಃಪ್ರವೇಶಕ್ಕೆ ಅನುಜ್ಞೆಯಂ ಹೊಂದಿ ಭಗವನ್ಮಂದಿರವನ್ನು ಪ್ರವೇಶಿಸುವುದು.

ಅನಂತರ, ಭಗವಂತನನ್ನು ಕಾಲೋಚಿತವಾಗಿ ಅಷ್ಟಾಂಗಾದಿ[1] ಪ್ರಣಾಮಂಗಳಿಂದ ನಮಸ್ಕರಿಸಿ, ಭಗವಂತನ ಸಾನ್ನಿಧ್ಯದಲ್ಲಿ ವರಾಹ ಪುರಾಣೋಕ್ತವಾದ (೩೨) ದ್ವಾತ್ರಿಂಶ ದಪಚಾರಗಂಧವಿಲ್ಲದವನಾಗಿ ಬಲಭಾಗದಲ್ಲಿ ನಿಂತು ಗುರುಪರಂಪರಾಪುರಸ್ಸರವಾಗಿ ಪರಮಗುರುವಾದ ಭಗವಂತನನ್ನು ಶರಣುಹೊಂದುವದು.

ಭಗವತ್ಸನ್ನಿಧಿಯಲ್ಲಿ ತ್ಯಜಿಸತಕ್ಕ ಮೂವತ್ತೆರಡು ಅಪಚಾರಂಗಳು[2] ಯಾವವೆಂದರೆ,—

೧. ವಾಹನಾರೂಢನಾಗಿ, ಅಥವಾ ಪಾದುಕೆಯೊತನೆ ಭಗವನ್ಮಂದಿರ ಪ್ರವೇಶವು.

೨. ಉತ್ಸವಕಾಲದೊಳ್ ಭಗವನ್ಮಂದಿರಾದಿಗಳಲ್ಲಿ ಭಗವಂತನನ್ನ ಸೇವಿಸಬೇಕು. ಈ ನಿಯಮವನ್ನ ಉಲ್ಲಂಘಿಸುವದು.

೩. ಭಗವತ್ಪರಿಚರ್ಯೆಯಲ್ಲಿರುವ ಜಾಮದಗ್ನ್ಯಾಹ್ನಿಣಿಯರೇ ಮೊದಲಾದವರನ್ನ ವಿನಾ, ಇತರರು ಏಕಹಸ್ತದಿಂದ ನಮಸ್ಕರಿಸುವುದು.

---

೧. ಅಷ್ಟಾಂಗಾದಿ ಪ್ರಣಾಮಗಳ ಸ್ವಭಾವವು ಮುಂದೆ ಅಭಿಗಮನ ಪ್ರಕರಣದಲ್ಲಿ ವಿವರಿಸಲ್ಪಡುವದು.

೨. ವರಾಹಪುರಾಣೋಕ್ತವಾದ ಶ್ಲೋಕಗಳನ್ನ ವಿಸ್ತರಭೀತ್ಯಾ ಬಿಡಲಾಗಿದೆ; ಇದರ ತಾತ್ಪರ್ಯವನ್ನ ಮಾತ್ರ ಬರೆದಿರುತ್ತೆ.

೪. ಆಶೌಚಾದಿ ಕಾಲಗಳಲ್ಲಿಯೂ, ಅಪರಿಶುದ್ಧನಾಗಿರುವಾಗಲೂ ಭಗವಂತನನ್ನು ಸೇವಿಸುವುದು.

೫. ಭಗವತ್ಸನ್ನಿಧಿಯಲ್ಲಿ ಕಾಲು ನೀಡುವದು, ಮಲಗುವದು, ಭೋಜನವಂ ಮಾಡುವದು.

೬. ಪರಸ್ಪರ ಭಗವತ್ಕಥಾ ಗಂಧರಹಿತವಾದ ಲೋಕವಾರ್ತೆಗಳನ್ನಾಡುವದು, ಘಟ್ಟಿಯಾಗಿ ಮಾತನಾಡುವುದು, ವ್ಯರ್ಥವಾದ ಮತ್ತು ಅನಿಷ್ಟವಾರ್ತೆಗಳನ್ನಾಡುವದು.

೭. ಭಗವತ್ಸನ್ನಿಧಿಯಲ್ಲಿ ನಗುವುದು, ರೋದನ ಮಾಡುವುದು.

೮. ದೇವಾಲಯದಲ್ಲಿ ಜಗಳ ಮಾಡುವದು, ಶಿಕ್ಷಿಸುವದು, ಅನುಗ್ರಹಿಸುವದು.

೯. ಸ್ತ್ರೀಯರುಗಳಲ್ಲಿ ಕ್ರೀಡಾಸೂಚಕವಾದ ಮಾತುಗಳಾಡುವದು.

೧೦. ಅಪಾನವಾತವನ್ನು ಬಿಡುವುದು.

೧೧. ಕರೀಕಂಬಳಿಯನ್ನು ಧರಿಸಿಯೋ, ವಸ್ತ್ರವನ್ನು ಚನ್ನಾಗಿ ಹೊದ್ದುಕೊಂಡೋ, ಭಗವಂತನನ್ನು ಸೇವಿಸುವದು.

೧೨. ಇತರರನ್ನು ಸ್ತೋತ್ರ ಮಾಡುವದು, ಅಥವಾ ನಿಂದಿಸುವದು.

೧೩. ಭಗವಂತನಿಗೆ ಮುಖ್ಯೋಪಚಾರ ಮಾಡಲು ಶಕ್ತಿ ಇದ್ದಾಗ್ಯೂ ಗೌಣೋಪಚಾರ ಮಾಡುವದು.

೧೪. ಭಗವನ್ನಿವೇದಿತವಲ್ಲದ ಪದಾರ್ಥವನ್ನು ಭಕ್ಷಿಸುವದು.

೧೫. ಆಯಾಯಾ ಕಾಲದಲ್ಲಿ ದೊರಿಯುವ ಫಲಾದಿಗಳನ್ನು ಭಗವಂತನಿಗೆ ಸಮರ್ಪಿಸದಿರುವದು.

೧೬. ಭಗವನ್ನಿವೇದನವನ್ನು ವಿನಾ ಬೇರೆ ವಿನಿಯೋಗಿಸಲ್ಪಟ್ಟದ್ದ ಪದಾರ್ಥಶೇಷವನ್ನು ಭಗವನ್ನಿವೇದನಾರ್ಹವಾದ ವ್ಯಂಜನಾದಿ ಪದಾರ್ಥಗಳಲ್ಲಿ ಸೇರಿಸುವದು.

೧೭. ಭಗವಂತನಿಗೆ ಪೃಷ್ಠಭಾಗವಂ ತೋರಿಸಿಕೊಂಡು ಕೂರುವದು.

೧೮. ದೇವಾಲಯದೊಳ್ ಇತರರನ್ನು ಸೇವಿಸುವದು.

೧೯. ಆಚಾರ್ಯ ಸಾನ್ನಿಧ್ಯದಲ್ಲಿ ಮೌನವಾಗಿರುವದು.

೨೦. ಆತ್ಮಶ್ಲಾಘನೆ (ತನ್ನನ್ನು ತಾನೇ ಹೊಗಳಿಕೊಳ್ಳುವದು) ಮಾಡಿಕೊಳ್ಳುವದು.

೨೧. ದೇವತಾನಿಂದನೆಗೈವುದು.

೨೨. ಕೂದಲೂ ಉಗುರು, ಎಲುಬು ಇವುಗಳನ್ನ ದೇವಾಲಯದಲ್ಲಿ ಹಾಕುವುದು,

೨೩. ಉಗಿಯುವುದು.

೨೪. ದೇವಾಲಯ ಸಮೀಪದಲ್ಲಿ ಮೂತ್ರೋತ್ಸರ್ಜನ ಗೈಯುವುದು.

೨೫. ಭಗವನ್ಮಂದಿರದಲ್ಲಿ ಹೇಳಲ್ಪಡುವ ಭಗವತ್ಕಥೆಯನ್ನ ಕೇಳದೇ ಹೋಗುವುದು.

೨೬. ದೇವತಾಂತರೋದ್ದೇಶ್ಯವಾದ ಪುಷ್ಪಗಳನ್ನು ಭಗವಂತನಿಗೆ ಸಮರ್ಪಿಸುವುದು.

೨೭. ವಿಮಾನಚ್ಛಾಯೆಯನ್ನ ಅಜ್ಞಾನದಿಂ ತುಳಿದು ಮರತು ಪ್ರದಕ್ಷಿಣ ಮಾಡದೇ ಹೋಗುವುದು.

೨೮. ದೇವತಾಂತರದೊಡನೆ ಭಗವಂತನನ್ನ ಸಮಾನವಾಗಿ ಎಣಿಸುವುದು.

೨೯. ಭಗವದ್ವಿಗ್ರಹವನ್ನು ಲೋಹಾದಿ ಸಂಬಂಧವುಳ್ಳದ್ದೆಂದು ನೆನಿಸುವುದು.

೩೦. ಭಗವನ್ನಿವೇದನಾರ್ಹವಾದ ಪುಷ್ಪಾದಿಗಳನ್ನ ಮೂಸಿನೋಡುವುದು.

೩೧. ಭಗವತ್ಸೇವೆಗಾಗಿ ಬಂದಿರುವ ಶೂದ್ರಾದಿಗಳನ್ನ ಸ್ಪರ್ಶಿಸಿ ಸ್ನಾನಮಾಡುವುದು. ಉತ್ಸವಕಾಲಗಳಲ್ಲಿ ಸ್ಪರ್ಶಶಂಕೆಯಿಂದ ಸ್ನಾನ ಮಾಡುವುದು.

೩೨. ಭಗವದುದ್ದೇಶ್ಯವಾದ ದೀಪಗಳನ್ನು ಇತರಕಾರ್ಯಕ್ಕೆ ಉಪಯೋಗಿಸುವುದು. ಹೊರಗೆ ತೆಗದುಕೊಂಡು ಹೋಗುವುದು.

ಇಂತಹ ಅಪಚಾರಗಂಧವಿಲ್ಲದವನಾಗಿ ಭಗವದ್ದರ್ಶನಾನಂದದಿಂದ ಸಂತುಷ್ಟ, ಸರ್ವಾಂಗನಾಗಿ, ಸ್ತೋತ್ರಪ್ರಿಯನಾದ ಭಗವಂತನನ್ನ ಸ್ವಾಭಾವ ವರ್ಣಿಸುವ ಸ್ತೋತ್ರಗಳನ್ನು ಹೇಳುವುದು. ಭಗವದನುಗ್ರಹದಿಂದ [illegible]

ಪುರಸ್ಸರವಾಗಿ ಅಂಗೀಕರಿಸಿ ಯಥಾಯೋಗ್ಯವಾಗಿ ಉಪಯೋಗಿಸತಕ್ಕದ್ದು.

ಈ ಪ್ರಕಾರ ಭಗವತ್ಸೇವೆಯಿಂದ ತನ್ನನ್ನ ಕೃತಾರ್ಥನನ್ನಾಗಿ ತಿಳಿದು, ಭಗವದನುಜ್ಞೆಯಿಂದ ಏಕತ್ರ ಕುಳಿತುಕೊಂಡು ತತ್ಕಾಲಾರ್ಹವಾದ ಜಪಾದಿಗಳಿಂದ ಭಗವದುಪಾಸನ ಮಾಡುವುದು.

ಅನಂತರ॥ ಚಕ್ರವದ್ಭ್ರಮಯೇನ್ನಾಂಗಂಪೃಷ್ಠಭಾಗಂನದರ್ಶಯೇತ್,

ಎಂಬ ನಿಯಮಪ್ರಕಾರ, ಚಕ್ರಾಕಾರವಾಗಿ ತಿರಗದೇ ಹಿಂಭಾಗವನ್ನ ದೇವತಾಭಿಮುಖವಾಗಿ ತೋರಿಸದೇ ಈ ಅಪಚಾರರಹಿತನಾಗಿ ಭಗವಂತನನ್ನ ವಂದಿಸಿ ವಿಷ್ವಕ್ಸೇನಾದಿಗಳಿಂದ ಅನುಜ್ಞೆಯನ್ನ ಹೊಂದಿ ಉದಕಪೂರ್ಣವಾದ ಸ್ವರ್ಣ, ರಜತ, ತಾಮ್ರಾದಿ ಪಾತ್ರವನ್ನ ತೆಗದುಕೊಂಡು, ಪಾಷಂಡಾದಿ ನೀಚದರ್ಶನ ಸಂಭಾಷಣ ರಹಿತನಾಗಿ ಗೃಹವನ್ನ ಹೊಂದಿ ಚನ್ನಾಗಿ ತೊಳೆಯಲ್ಪಟ್ಟ ಕೈಕಾಲುಗಳುಳ್ಳವನಾಗಿ ತನ್ನಿಂದ ತರಲ್ಪಟ್ಟ ತೀರ್ಥಪಾತ್ರೋದಕದಿಂದ ಗೃಹವನ್ನ ಪ್ರೋಕ್ಷಿಸುವದು.

## ಅಥ ಔಪಾಸನ ಹೋಮವಿಧಿಃ.

ಅತ್ರವಿಷ್ಣುಃ॥ ಸಂಧ್ಯಾಕರ್ಮಾವಸಾನೇತುಸ್ವಯಂಹೋಮೋವಿಧೀಯತೇ । ಸ್ವಯಂಹೋಮೇಫಲಂಯತ್ಸ್ಯಾತ್ ನತದನ್ಯೇನಲಭ್ಯತೇ ॥ ಹೂಯಮಾನಂತಥಾನ್ಯೇನಫಲಮರ್ಥಂಪ್ರಪದ್ಯತೇ। ಋತ್ವಿಕ್ಪುತ್ರೋಗುರುರ್ಭ್ರಾತಾಭಾಗಿನೇಯೋಥವಿಟ್ಪತಿಃ । ಏತೈರಪಿಹುತಂಯತ್ಸ್ಯಾತ್ ತದ್ಧುತಂಸ್ವಯಮೇವತು ॥

ತಾತ್ಪರ್ಯ॥ ಸಂಧ್ಯಾದಿಕರ್ಮಾನಂತರ ಔಪಾಸನಾದಿ ಹೋಮಗಳನ್ನು ತಾನೇ ಅನುಷ್ಠಿಸಬೇಕು.

ತಾನು ಅನುಷ್ಠಿಸುವದರಲ್ಲಿ ಲಭಿಸುವ ಫಲವು ಇತರರು ತನಗಾಗಿ ಅನುಷ್ಠಿಸಿದರೆ ಬರಲಾರದು.

ಇತರರು ತನಗಾಗಿ ಅನುಷ್ಠಿಸಿದರೆ ತಾನು ಅನುಷ್ಠಿಸಿದರೆ ಪ್ರಾಪ್ತವಾಗುವ ಫಲದಲ್ಲಿ ಅರ್ಧಮಾತ್ರ ಪ್ರಾಪ್ತವಾಗುವುದು.

ಕುಲಕ್ರಮಾಗತನಾದ ಅಥವಾ ತನ್ನಿಂದ ವರಿಸಲ್ಪಟ್ಟ ಋತ್ವಿಕ್ಕೋ ಪುತ್ರನೋ, ಆಚಾರ್ಯನೋ, ಭ್ರಾತೃವೋ, ಸೋದರಳಿಯನೋ, ಅಳಿಯನೋ, ಇವರುಗಳು ಮಾತ್ರ ಯಜಮಾನನ ಉದ್ದಿಶ್ಯವಾಗಿ ಹೋಮ ಮಾಡಿದ್ದಾದರೆ ಅದು ಸ್ವಯಂಹೋಮದಂತೆ ಪರಿಗಣಿಸಲ್ಪಡತಕ್ಕದ್ದಾಗಿದೆ. ಇದು ಶಿಷ್ಯಾದಿಗಳಿಗೂ ಉಪಲಕ್ಷಣವು.

ಭರ್ತುರ್ವಿಪ್ರವಾಸೇಋತ್ವಿಗಾದ್ಯಭಾವೇಗೋಭಿಲಃ । ಕಾಮಂಗೃ
ಹ್ಯೇಗ್ನೌಪತ್ನೀಜುಹುಯಾತ್ಸಾಯಂ ಪ್ರಾತಃಹೋಮಾವಿತಿ ॥

ತಾತ್ಪರ್ಯ॥ ಪತಿಯು ಪರಸ್ಥಳವನ್ನು ಹೊಂದಿ, ಋತ್ವಿಗಾದಿಗಳು ಇಲ್ಲದಪಕ್ಷ, ಗೋಭಿಲರು ವಿಶೇಷವಂ ಹೇಳುತ್ತಾರೆ.

ಔಪಾಸನಾಗ್ನಿಯಲ್ಲಿ ಸಾಯಂಪ್ರಾತಃ ಹೋಮಗಳನ್ನು ಪತ್ನಿಯೇ ಅನುಷ್ಠಿಸತಕ್ಕದ್ದು.

ಚಂದ್ರಿಕಾಯಾಂ॥ ಅಸಮಕ್ಷಂತುದಂಪತ್ಯೋಃ ಹೋತವ್ಯಂನರ್ತ್ವಿ
ಗಾದಿನಾ । ಉಭಯೋರಸಮಕ್ಷಂತು ಭವೇದ್ಧುತಮನರ್ಥಕಂ॥

ತಾತ್ಪರ್ಯ॥ ಋತ್ವಿಗಾದಿಗಳು ಹೋಮ ಮಾಡತಕ್ಕ ಸಂದರ್ಭದಲ್ಲಿ ಯಜಮಾನ, ತತ್ಪತ್ನಿಗಳಲ್ಲಿ ಒಬ್ಬರಾದರೂ ಸಮಕ್ಷಮ ಇರಬೇಕು.

ಅನ್ಯಥಾ ಆ ಹೋಮವು ಸಾರ್ಥಕವಾಗಲಾರದು.

ವಿಷ್ಣುಃ॥ ಸ್ವಯಮಹುತ್ವಾನಪರಂಯಾಜಯೇತ್ ।

ತಾತ್ಪರ್ಯ॥ ತಾನು ಔಪಾಸನಾದಿಗಳನ್ನು ಅನುಷ್ಠಿಸದೇ ಇತರರಲ್ಲಿ ಆರ್ತ್ವಿಜ್ಯ ಮಾಡಕೂಡದು.

ಮನುಃ॥ ನೈವಕನ್ಯಾನಯುವತಿಃ ನಾಲ್ಪವಿದ್ಯೋನಬಾಲಿಶಃ ।
ಹೋತಾಸ್ಯಾದಗ್ನಿಹೋತ್ರಸ್ಯ ನಾರ್ತೋನಾಸಂಸ್ಕೃತೋ
ಶುಚಿಃ ॥

ತಾತ್ಪರ್ಯ॥ ಮನುವು ಅಗ್ನಿಹೋತ್ರದಲ್ಲಿ ವಿಶೇಷ ಹೇಳುವರು. ಕನ್ಯೆಯು, ಪ್ರಾಯದವಳಾದ ಸ್ತ್ರೀಯೂ, ಅಲ್ಪವಿದ್ಯೆಯುಳ್ಳವನೂ, ಮೂಢನೂ, ಅಪರಿಶುದ್ಧನೂ, ಆರ್ತನೂ, ಅನಧಿಕಾರಿಯೂ, ಅಗ್ನಿಹೋತ್ರ ಹೋಮವಂ ಮಾಡಕೂಡದು.

ಬೃಹಸ್ಪತಿಃ॥ ಸೂತಕೇಮೃತಕೇಚೈವ ಹ್ಯಶಕ್ತೌಶ್ರಾದ್ಧಭೋಜನೇ। ಪ್ರವಾಸಾದಿನಿಮಿತ್ತೇಷು ಹಾವಯೇನ್ನತುಹಾಪಯೇತ್॥

ತಾತ್ಪರ್ಯ। ಜಾತಾಶೌಚ ಮೃತಾಶೌಚಗಳಲ್ಲಿಯೂ, ಅಸಾಮರ್ಥ್ಯದಲ್ಲಿಯೂ, ಶ್ರಾದ್ಧಭೋಜನ (ನಿಮಂತ್ರಣ) ದಲ್ಲಿಯೂ, ಪರಸ್ಥಳವಾಸವೇ ಮೊದಲಾದ ಸಂದರ್ಭದಲ್ಲಿಯೂ, ಇತರರಿಂದ ಲಾದರೂ ಹೋಮ ಮಾಡಿಸಬೇಕೇ ವಿನಹಾ ಕರ್ಮವನ್ನೇ ಬಿಡಬಾರದು.

ಬ್ರಹ್ಮವಿದ್ಯಾದೀಪಿಕಾಯಾಂ॥

ವಿಷ್ಣುಧರ್ಮೋತ್ತರೇ॥ ಯಸ್ತುಸ್ಥಿತಾಯಾಂಭಾರ್ಯಾಯಾಂ ಅಗ್ನಿಂ ತ್ಯಜತಿಮೂಢಧೀಃ। ಸೋಽನಗ್ನಿಕ ಇತಿಖ್ಯಾತಃ ಸರ್ವಕರ್ಮಬಹಿಷ್ಕೃತಃ॥

ತಾತ್ಪರ್ಯ॥ ಯಾವವನು ಪತ್ನಿಇದ್ದಾಗ್ಯೂ ಔಪಾಸನ ಹೋಮಾನುಷ್ಠಾನವಂ ಮಾಡುವದಿಲ್ಲವೋ ಅವನು, ಅನಗ್ನಿಕನು. ಯಾವಕರ್ಮಾನುಷ್ಠಾನಕ್ಕೂ ಯೋಗ್ಯನಲ್ಲವು.

ಆಶ್ವಲಾಯನೋಪಿ॥ ಯಸ್ತುಹಿತ್ವಾದ್ವಿಜೋಽಪ್ಯಗ್ನಿಂಗೃಹಸ್ಥ ಇತಿಮನ್ಯತೇ। ಅನ್ನಂತಸ್ಯನಭೋಕ್ತವ್ಯಂಭುಕ್ತ್ವಾಚಾಂದ್ರಾಯಣಂಚರೇತ್॥

ತಾತ್ಪರ್ಯ॥ ಯಾವ ಗೃಹಸ್ಥಾಶ್ರಮಿಯು ಔಪಾಸನ ಮಾಡುವದಿಲ್ಲವೋ ಅಂತಹವನ ಅನ್ನವನ್ನ ಭುಜಿಸಬಾರದು. ಭೋಜನ ಮಾಡಿದ್ದರೆ ಚಾಂದ್ರಾಯಣ ಪ್ರಾಯಶ್ಚಿತ್ತವನ್ನ ಮಾಡಬೇಕು.

ಹೇಮಾದ್ರೌ॥ ಔಪಾಸನಪರಿತ್ಯಾಗೀಸುರಾಪೀತ್ಯುಚ್ಯತೇಬುಧೈಃ। ನಕರ್ಮಾರ್ಹೋಭವೇತ್ತತ್ರಶೂದ್ರಏವನಸಂಶಯಃ॥

ತಾತ್ಪರ್ಯ। ಔಪಾಸನ ಪರಿತ್ಯಾಗವಂ ಮಾಡಿದವನು, ಸುರಾಪಾನವಂ ಮಾಡಿದವನಿಗೆ ಸಮಾನವಾದ ದೋಷವುಳ್ಳವನೆಂದು ವಿದ್ವಾಂಸರುಗಳಿಂದ ಹೇಳಲ್ಪಡುತ್ತಾನಾದ ಕಾರಣ ಇಲ್ಲಿ ಯಾವಕರ್ಮಕ್ಕೂ ಅರ್ಹನಲ್ಲವು. ಅಂತಹವನನ್ನ ಶೂದ್ರನೆಂದು ಹೇಳಲು ಸಂಶಯ ಪಡಬೇಕಾದುದಿಲ್ಲ.

## ಅಥ ಹೋಮಕಾಲ ನಿರ್ಣಯಃ.

ಆಶ್ವಲಾಯನಃ ॥ ಪ್ರದೋಷಾಂತೋಹೋಮಕಾಲಃ । ಸಾಯಂ
ಸಂಗವಾಂತಃಪ್ರಾತರಿತಿ ॥

ತಾತ್ಪರ್ಯ॥ ಸಾಯಿಂಕಾಲ ಪ್ರದೋಷ (ಮೂರೂಮುಕ್ಕಾಲು ಘಳಿಗೆ) ಪರ್ಯಂತವೂ, ಹಗಲು ಸಂಗವ (ಆರುಘಳಿಗೆ) ಪರ್ಯಂತವೂ, ಮುಖ್ಯ ಕಾಲವು.

ಬೋಧಾಯನೀಯೇ॥ ಉಕ್ತಯೋಃಕಾಲಯೋಃಕರ್ತುಂಅಶಕ್ತೌ
ಸಾಯಮಾಹುತಿಂ। ರಾತ್ರೌಕುರ್ವೀತಕೃತ್ಸ್ನಾಯಾಂಕೃತ್ಸ್ನೇ
ಹ್ನಿವಾ ಪ್ರಾತರಾಹುತಿಂ ॥

ತಾತ್ಪರ್ಯ॥ ಉಕ್ತಕಾಲಗಳಲ್ಲಿ ಅನುಷ್ಠಿಸಲು ಸಾಧ್ಯವಾಗದ ಸಂದರ್ಭದಲ್ಲಿ ಸಾಯಂಹೋಮವನ್ನ ರಾತ್ರಿಯಲ್ಲಿಯೂ, ದಿವಾಹೋಮವನ್ನ ಹಗಲಿನಲ್ಲಿಯೂ ಅನುಷ್ಠಿಸಬಹುದು.

ಕಾತ್ಯಾಯನಃ ॥ ರಾತ್ರೌಪ್ರಹರಪರ್ಯಂತಂದಿವಾಕೃತ್ಯಾನಿಕಾರ
ಯೇತ್॥ ಬ್ರಹ್ಮಯಜ್ಞಂಚಸಾರಂಚವರ್ಜಯಿತ್ವಾವಿಶೇಷತಃ॥

ತಾತ್ಪರ್ಯ। ಮುಖ್ಯಕಾಲದಲ್ಲಿ ಅನುಷ್ಠಿಸಲು ಸಾಧ್ಯವಾಗದಪಕ್ಷ ಗೌಣ ಕಾಲನುಷ್ಠಾನಕ್ಕೆ ಕಾಲವನ್ನ ಕಾತ್ಯಾಯನ ಮಹರ್ಷಿಗಳು ಹೇಳುತ್ತಾರೆ. ಹಗಲು ಅನುಷ್ಠಿಸತಕ್ಕ ಕರ್ಮಗಳನ್ನು ರಾತ್ರಿ ಪ್ರಥಮಯಾಮ ಪರ್ಯಂತವೂ ಅನುಷ್ಠಿಸಬಹುದು. ಬ್ರಹ್ಮಯಜ್ಞಾದಿ ಪಂಚಮಹಾ ಯಜ್ಞಗಳನ್ನೂ ಸೂರ್ಯೋಪಸ್ಥಾನಾದಿ ಸಾರಮಂತ್ರಗಳನ್ನೂ ವಿಶೇಷವಾಗಿ ರಾತ್ರಿ ವರ್ಜಿಸಬೇಕು.

ಜಾಬಾಲಿ॥ ಏಕೇತೂದಿತಹೋಮಾಸ್ಸ್ಯುಃ ಅನ್ಯೇನುದಿತಹೋಮಿನಃ॥

ಉಶನಾಃ॥ ಅರ್ಧಮಂಡಲಸಂಪ್ರಾಪ್ತೇ ಭಾನಾವನುದಿತೇಹುತಂ।
ತಸ್ಮಿನ್ನಸ್ತಂಗತೇಹೋಮೋ ಭವೇದುದಿತಹೋಮಿನಃ ॥

ತಾತ್ಪರ್ಯ॥ ಉದಿತ ಹೋಮಿಗಳೆಂದೂ, ಅನುದಿತ ಹೋಮಿಗಳೆಂದೂ ಎರಡು ಪ್ರಕಾರವಾಗಿರುವವು.

ಅಪರಲ್ಲಿ, ಅನುದಿತ ಹೋಮಿಗಳು (ಸೂರ್ಯೋದಯಾತ್ಪೂರ್ವ ಔಪಾಸನ ಹೋಮ ಮಾಡತಕ್ಕವರು) ಸೂರ್ಯನು ಅರ್ಧಾಸ್ತಮಯವಾಗತಕ್ಕ ಕಾಲದಲ್ಲಿಯೂ, ಉದಿತ ಹೋಮಿಗಳು (ಸೂರ್ಯೋದಯಾನಂತರ ಹೋಮ ಮಾಡತಕ್ಕವರು) ಸೂರ್ಯಾಸ್ತಮಯಾನಂತರವೂ ಹೋಮ ಮಾಡುವದು.

ಆಪಸ್ತಂಬಃ॥ ನಕ್ಷತ್ರಂ ದೃಷ್ಟ್ವಾ, ಪ್ರದೋಷೇ, ನಿಶಾಯಾಂವಾ, ಸಾಯಂ । ಉಷಸ್ಯುದಯಂಸಮಯಾ ವಿಷಿತಉದಿತೇವಾ ಪ್ರಾತರಿತಿ ॥

ತಾತ್ಪರ್ಯ॥ ನಕ್ಷತ್ರವನ್ನ ನೋಡಿಯೋ, ಪ್ರದೋಷದಲ್ಲಿಯೋ, ರಾತ್ರಿಯಲ್ಲೋ, ಸಾಯಂ ಹೋಮಮಾಡುವದು. ಉದಯಾತ್ಪೂರ್ವದಲ್ಲಿಯೋ, ಸಮಯಾವಿಷಿತ (ಮುಂದಲ ಶ್ಲೋಕದಲ್ಲಿ ಇದರ ಅರ್ಥವು ಬರಿಯಲ್ಪಡುವದು) ದಲ್ಲಿಯೋ ಸೂರ್ಯೋದಯಾನಂತರವೋ, ಪ್ರಾತಃ ಹೋಮ ಮಾಡುವದು.

ಮನುಃ॥ ಗ್ರಹರ್ಕ್ಷಯುಕ್ತೋನುದಿತೋನಕ್ಷತ್ರಾರ್ಕವಿವರ್ಜಿತಃ । ಸಮಯಾವಿಷಿತಸ್ಸೋರ್ಕಉದಿತಃತ್ರಿಷುಹೋಮಯೇತ್ ।

ತಾತ್ಪರ್ಯ॥ ಗ್ರಹಗಳಿಂದಲೂ, ನಕ್ಷತ್ರಗಳಿಂದಲೂ, ಕೂಡಿರುವ ಕಾಲವು ಅನುದಿತಕಾಲವು. ನಕ್ಷತ್ರಗಳಿಂದಲೂ, ಸೂರ್ಯನಿಂದಲೂ, ವರ್ಜಿತವಾದ ಕಾಲವು ಸಮಯಾವಿಷಿತ ಕಾಲವು. ಸೂರ್ಯನಿಂ ಕೂಡಿದ ಕಾಲವು ಉದಿತಕಾಲವು.

## ಅಥ ಹವಿಸ್ಸ್ವನಿರ್ಣಯಃ.

ಆಪಸ್ತಂಬಃ॥ ಹಸ್ತೇನೈತೇಆಹುತೀತಂಡುಲೈರ್ಯವೈರ್ವಾಜುಹುಯಾತ್ ॥

ತಾತ್ಪರ್ಯ॥ ಅಕ್ಕಿಗಳಿಂದಲೋ ಯವಧಾನ್ಯಗಳಿಂದಲೋ ಮುಂದೆ ಹೇಳಲ್ಪಡುವ ಔಪಾಸನ ಹೋಮಗಳನ್ನ ಹಸ್ತದಿಂದಲೇ ಮಾಡತಕ್ಕದ್ದು.

ಸ್ಮೃತಿರತ್ನಾಕರೇ ಕಾತ್ಯಾಯನಃ॥ ಆಜ್ಯಂದ್ರವ್ಯಮನಾದೇಶೇ ಜುಹೋತಿಷುವಿಧೀಯತೇ ॥

ತಾತ್ಪರ್ಯ॥ ಯಾವಪ್ರಕರಣದಲ್ಲಿ ಹೋಮದ್ರವ್ಯವು ಹೇಳಲ್ಪಡುವದಿಲ್ಲವೋ ಅಲ್ಲಿ ಆಜ್ಯಹೋಮವು ವಿಧಿಸಲ್ಪಡುವದು.

ಬೃಹಸ್ಪತಿಃ॥ ಯಜ್ಞಾರ್ಥಂಗೋಘೃತಂಗ್ರಾಹ್ಯಂತದಲಾಭೇತು ಮಾಹಿಷಂ। ಆಜಂವಾತದಲಾಭೇತುಮಾಹಿಷಂ । ಆಜಂವಾತದಲಾ ಭೇತುಸಾಕ್ಷಾತ್ತೈಲಂಗ್ರಹಿಷ್ಯತೇ।

ತಾತ್ಪರ್ಯ॥ ಯಜ್ಞಾದಿಹೋಮಗಳಲ್ಲಿ ಗೋಘೃತ (ಹಸುವಿನತುಪ್ಪ)ವು ಮುಖ್ಯವಾದುದು. ಅದು ಇಲ್ಲದಪಕ್ಷ, ಮಹಿಷ (ಯೆಮ್ಮೆ) ಘೃತವನ್ನು ಅಂಗೀಕರಿಸಬಹುದು. ಅದೂ ಸಂಭವಿಸದ ಪಕ್ಷ ಅಜ (ಆಡು) ಘೃತವಾದರೂ ಆಗಬಹುದು. ಇದು ಯಾವದೂ ಸಂಭವಿಸದಿದ್ದರೆ ಸಾಕ್ಷಾತ್ತೈಲ (ಪುಟ್ಟೆಳ್ಳಿನ ಯೆಣ್ಣೆ) ವಾದರೂ ಆಗಬಹುದು.

## ಅಥ ಸಮಿನ್ನಿರ್ಣಯಃ

ಸ್ಮೃತ್ಯರ್ಥಸಾರೇ॥ ಸಮಿತ್ಪವಿತ್ರಂವೇದಿಶ್ಚ ತ್ರಯಃಪ್ರಾದೇಶಸಮ್ಮಿತಾಃ। ಇಧ್ಮಸ್ತು ದ್ವಿಗುಣಃಕಾರ್ಯಃ ತ್ರಿಗುಣಃಪರಿಧಿಸ್ಮೃತಃ॥

ತಾತ್ಪರ್ಯ॥ ಸಮಿತ್ತು, ಪವಿತ್ರವೂ, ವೇದಿಯೂ, ಪ್ರಾದೇಶ (ಒಂದು ಗೇಣು) ಪ್ರಮಾಣವುಳ್ಳದ್ದಾಗಿರತಕ್ಕದ್ದು. ಇಧ್ಮವು (ಉದ್ದವಾದ ಸಮಿತ್ತು) ಇದಕ್ಕೆ ದ್ವಿಗುಣವಾಗಿಯೂ ಪರಿಧಿಯು (ಇಧ್ಮಕ್ಕಿಂತಲೂ ಉದ್ದವಾದ ಸಮಿತ್ತು) ತ್ರಿಗುಣವಾಗಿಯೂ ಇರತಕ್ಕದ್ದು.

ಕಾತ್ಯಾಯನಃ॥ ನಾಂಗುಷ್ಠಾದಧಿಕಾಕಾರ್ಯಾಸಮಿತ್ಸ್ಥೂಲತಯಾ ಕ್ವಚಿತ್ ॥ ನವಿಯುಕ್ತಾತ್ವಚಾಚೈವನಸಕೀಟಾನಪಾಟಿತಾ। ಪ್ರಾದೇಶಿನ್ಯಧಿಕಾನಾತ್ರತಥಾನಸ್ಯಾದ್ವಿಶಾಖಿಕಾ। ನಸಪರ್ಣಾನನಿರ್ವೀರ್ಯಾಹೋಮೇಷುಚವಿಜಾನತಾ॥

ತಾತ್ಪರ್ಯ॥ ಸಮಿತ್ತು, ಅಂಗುಷ್ಠ ಪ್ರಮಾಣಕ್ಕಿಂತಲೂ ಸ್ಥೂಲವಾಗಿಯೂ, ತ್ವಕ್ಕಿನಿಂ (ಮೇಲಿನ ತೊಗಟೆ) ಬಿಡಲ್ಪಟ್ಟದ್ದಾಗಿಯೂ, ಹುಳುಗಳಿಂದ ಕೂಡಿರುವದಾಗಿಯೂ, ಸೀಳಿರುವದಾಗಿಯೂ, ಪ್ರಾದೇಶ ಪ್ರಮಾಣಕ್ಕೆ ಅಧಿಕವಾಗಿಯೂ, ಎರಡು ಕವೆ (ಕೊಂಬೆ) ಯುಳ್ಳ ಕೂಡಿ

ದ್ದಾಗಿಯೂ, ಎಲೆಗಳಿಂದ ಕೂಡಿದ್ದಾಗಿಯೂ, ಸಿರ್ಗೀರ್ಯ (ಟೊಳ್ಳು) ವಾಗಿಯೂ ಇರಕೂಡದು.

ಸ್ಮೃತ್ಯರ್ಥಸಾರೇ॥ ಪಲಾಶಖದಿರಾಶ್ವತ್ಥಬಿಲ್ವೋದುಂಬರಜಾಸಮಿತ್। ಅಪಾಮಾರ್ಗಶ್ಚ ದೂರ್ವಾ ಚ ಕುಶಾಶ್ಚೇತ್ಯಪರೇ ವಿದುಃ॥

ತಾತ್ಪರ್ಯ॥ ಮುತ್ತುಗ, ಕಗ್ಗಲಿ, ಅಶ್ವತ್ಥ, ಬಿಲ್ವ, ಅತ್ತಿ, ಈ ಸಮಿತ್ತುಗಳು ಆಗಬಹುದು. ಅಭಾವದಲ್ಲಿ, ಉತ್ತರಣೀ, ದೂರ್ವಾ, (ಹುಲ್ಲಿನಭೇದ) ದರ್ಭೆಗಳೂ ಆಗಬಹುದೆನ್ನುವರು.

ಸ್ಮೃತ್ಯಂತರೇ॥ ಇಂಧನೇ ತಿಂತ್ರಿಣೀಂ ನಿಂಬಂ ಸರ್ವಾನ್ ಕಂಟಕಿನಃ ತ್ಯಜೇತ್॥

ತಾತ್ಪರ್ಯ॥ ಹುಣಸೆ, ಬೇವು, ಯಾಜ್ಞೀಯವಲ್ಲದ ಮುಳ್ಳುಮರಗಳು ಇವುಗಳನ್ನು ಹೋಮಕ್ಕೆ ಉಪಯೋಗಿಸಕೂಡದು.

ಸ್ಕಾಂದೇ॥ ತುಲಸೀಕಾಷ್ಠಯುಕ್ತೇಗ್ನೌ ಜುಹ್ವತಾಮಕ್ಷಯಂ ಫಲಂ। ಹವಿಸ್ತೇನೈವ ಯತ್ಪಕ್ವಂ ವಿಷ್ಣೋರಾನಂತ್ಯಮಶ್ನುತೇ॥

ತಾತ್ಪರ್ಯ॥ ತುಲಸೀಕಾಷ್ಠ (ಸೌದೆ) ದಿಂ ಕೂಡಿರುವ ಅಗ್ನಿಯಲ್ಲಿ ಹೋಮಮಾಡಿದರೆ ಅಕ್ಷಯ ಫಲಪ್ರಾಪ್ತಿಯಾಗುವದು. ಹವಿಸ್ಸನ್ನು ಅದರಲ್ಲಿಯೇ ಪಕ್ವಮಾಡಿದರೆ ಅನಂತಫಲ ಪ್ರಾಪ್ತವಾಗುವದು.

ಆಪಸ್ತಂಬಃ॥ ನಾಪ್ರೋಕ್ಷಿತಮಿಂಧನಮಗ್ನಾವಾದಧ್ಯಾತ್॥

ತಾತ್ಪರ್ಯ॥ ಪರಿಶುದ್ಧವಲ್ಲದ ಇಂಧನ (ಸೌದೆ) ವನ್ನ ಅಗ್ನಿಯಲ್ಲಿ ಸಮರ್ಪಿಸಬಾರದು.

## ಅಥ ಅಗ್ನಿಧಮನ ವಿಧಿಃ.

ಸಂವರ್ತಃ॥ ನಶೂರ್ಪೇಣ ಧಮೇದಗ್ನಿಂ ನ ವಸ್ತ್ರೇಣ ನ ಪಾಣಿನಾ॥

ತಾತ್ಪರ್ಯ॥ ಮೊರವನ್ನ ಬೀಸಿಯೂ, ವಸ್ತ್ರದಿಂದಲೂ, ಹಸ್ತದಿಂದಲೂ ಅಗ್ನಿಧಮನ (ಉರಿಯುವಂತೆ ಮಾಡುವದು) ಮಾಡಬಾರದು.

ಆಪಸ್ತಂಬಃ॥ ನಾಗ್ನಿಂ ಮುಖೇನೋಪಧಮೇತ್ ನಗ್ನಾಂ ನೇಕ್ಷೇ

ತಟಸ್ತ್ರಿಯಂ। ನಚೈನಂಲಂಘಯೇದ್ವಿಪ್ರಃನಹನ್ಯಾದ್ವ್ಯಜನಾದಿಭಿಃ ॥

ತಾತ್ಪರ್ಯ॥ ಅಗ್ನಿಯನ್ನ ಬಾಯಿಂದ ಉರವಬಾರದು. ದಿಗಂಬರೆಯಾದ ಸ್ತ್ರೀಯನ್ನು ನೋಡಬಾರದು. ಅಗ್ನಿಯನ್ನ ದಾಟಬಾರದು. ಬೀಸಣಿಗೆ ಮೊದಲಾದ ಸಾಮಗ್ರಿಗಳಿಂದ ಉರಿಸಬಾರದು.

ಮರೀಚಿ। ನಾಗ್ನಿಂಮುಖೇನೋಪಧಮೇತ್, ಯದಿಧಮೇತ್, ಧಮನಿಮಂತರೇಕೃತ್ವಾ ತೃಣಂಕಾಷ್ಠಂವಾಧಮೇತ್ ॥

ತಾತ್ಪರ್ಯ॥ ಅಗ್ನಿಯನ್ನ ಬಾಯಿಂದ ಉರವಬಾರದು. ಹಾಗೆ ಬಾಯಿಂದಲೇ ಉರುವುವಪಕ್ಷ ಧಮನಿ (ಊದುವ ಕೊಳವೆ) ಯನ್ನೋ, ಹುಲ್ಲನ್ನೋ, ಸಾದೇ ಮುರಕನ್ನೋ, ಮಧ್ಯೆ ಇಟ್ಟುಕೊಂಡು ಉರುವದು.

## ಅಥ ಹೋಮಸ್ಥಾನಕರ್ಮಾದಿ ವಿವರಣಂ.

ದಕ್ಷಃ॥ ಯತ್ರಕಾಷ್ಠಂತುತಚ್ಛ್ರೋತ್ರಂ ಯತ್ರಧೂಮಸ್ತುನಾಸಿಕಾ।ಯತ್ರಾಲ್ಪಜ್ವಲನಂನೇತ್ರಂ ಯತ್ರಭಸ್ಮಾನಿತಚ್ಛಿರಃ। ಯತ್ರೈವಜ್ವಲತೇವಹ್ನಿಃಜಿಹ್ವಾತತ್ರೈವಕೀರ್ತಿತಾ॥

ತಾತ್ಪರ್ಯ॥ ಅಗ್ನಿಯಲ್ಲಿ ಯಾವಸ್ಥಳದಲ್ಲಿ ಸಾದೆ ಇರುವದೋ ಆ ಸ್ಥಳವು ಅಗ್ನಿಗೆ ಕಿವಿಯು. ಎಲ್ಲಿ ಹೊಗೆಯೋ, ಆ ಸ್ಥಳವು ನಾಸಿಕವು. ಎಲ್ಲಿ ಸ್ವಲ್ಪವಾಗಿ ಜ್ವಲಿಸುವದೋ ಆ ಪ್ರದೇಶವೇ ನೇತ್ರವು. ಎಲ್ಲಿ ಭಸ್ಮವಿರುವದೋ ಆ ಸ್ಥಳವೇ ಶಿರಸ್ಸು. ಯಾವ ಪ್ರದೇಶದಲ್ಲಿ ಚನ್ನಾಗಿ ಪ್ರಜ್ವಲಿಸುವದೋ ಆ ಸ್ಥಳವೇ ನಾಲಿಗೆಯು ಎಂದು ಹೇಳಲ್ಪಟ್ಟಿದೆ.

ಅಗ್ನಿಕರ್ಣೇಭವೇದ್ರೋಗೋನಾಸಿಕಾಯಾಂಧನಕ್ಷಯಃ। ಚಕ್ಷುಷೋರ್ಪಸಂಕುರ್ಯಾತ್ಕೇಶೇದಾರಿದ್ರ್ಯಕೃದ್ಭವೇತ್। ಹುತಂಶಿರಸಿನಾಪಂಸ್ಯಾತ್ತಸ್ಮಾಜ್ಜಿಹ್ವಾಸುಹೋಮಯೇತ್ ॥

ತಾತ್ಪರ್ಯ॥ ಅಗ್ನಿಯ ಕಿವಿಯಲ್ಲಿ ಹೋಮಮಾಡಿದರೆ ರೋಗವೂ, ನಾಸಿಕದಲ್ಲಿ ಧನಕ್ಷಯವೂ, ಕಣ್ಣುಗಳಲ್ಲಿ ಹೋಮಮಾಡಿದರೆ ...

ಕೇಶದಲ್ಲಿ ದಾರಿದ್ರ್ಯವೂ, ಶಿರಸ್ಸಿನಲ್ಲಿ ಪಾಪವೂ ಪ್ರಾಪ್ತವಾಗುವದು. ಆದಕಾರಣ ನಾಲಿಗೆಗಳಲ್ಲಿಯೇ ಹೋಮ ಮಾಡಬೇಕು.

ಹಿರಣ್ಯಾಕನಕಾರಕ್ತಾಕೃಷ್ಣಾಚೈವಾಥಸುಪ್ರಭಾ । ಅತಿರಕ್ತಾಬಹುರೂಪಾಸಪ್ತಜಿಹ್ವಾಃಪ್ರಕೀರ್ತಿತಾಃ । ಹಿರಣ್ಯಾಪಶ್ಚಿಮೇಜಿಹ್ವಾಕನಕಾಮಧ್ಯಮೇಸ್ಥಿತಾ । ರಕ್ತಾಚೈವೋತ್ತರೇಜಿಹ್ವಾ, ಕೃಷ್ಣಾದಕ್ಷಿಣದಿಕ್ಸ್ಥಿತಾ । ಸುಪ್ರಭಾಚೈವಪೂರ್ವಾಯಾಂಅತಿರಕ್ತಾಗ್ನಿದಿಕ್ಸ್ಥಿತಾ । ಬಹುರೂಪಾಚಶಾರ್ವಾಯಾಂ ಜಿಹ್ವಾಸ್ಥಾನಂಪ್ರಕೀರ್ತಿತಂ ॥

ತಾತ್ಪರ್ಯ॥ ಅಗ್ನಿಗೆ, ಹಿರಣ್ಯಾ, ಕನಕಾ, ರಕ್ತಾ, ಕೃಷ್ಣಾ, ಸುಪ್ರಭಾ, ಅತಿರಕ್ತಾ, ಬಹುರೂಪಾ, ಎಂದು ಏಳು ನಾಲಿಗೆಗಳು. ಈ ನಾಲಿಗೆಗಳು ಕ್ರಮವಾಗಿ ಪಶ್ಚಿಮ, ಮಧ್ಯ, ಉತ್ತರ, ದಕ್ಷಿಣ, ಪೂರ್ವ, ಆಗ್ನೇಯ, ಈಶಾನ್ಯ ದಿಕ್ಕುಗಳಲ್ಲಿರುವವು.

ವಿವಾಹೇಪಶ್ಚಿಮಾಜಿಹ್ವಾಜಾತಕರ್ಮಣಿಮಧ್ಯಮಾ । ಉತ್ತರಾಚೋಪನಯನೇಪಿತೃಕಾರ್ಯೇತುದಕ್ಷಿಣಾ । ಸರ್ವಕರ್ಮಸುಪೂರ್ವಾಯಾಂಅಭಿಚಾರೇಗ್ನಿದಿಕ್ಸ್ಥಿತಾ । ಶಾಂತಿಕರ್ಮಣಿಶಾರ್ವಾಯಾಂಸ್ಥಾನಕರ್ಮಸವಿಸ್ತರಂ ॥

ತಾತ್ಪರ್ಯ॥ ವಿವಾಹಕ್ಕೆ ಪಶ್ಚಿಮನಾಲಿಗೆಯು ಜಾತಕರ್ಮಕ್ಕೆ ಮಧ್ಯನಾಲಿಗೆಯೂ, ಉಪನಯನಕ್ಕೆ ಉತ್ತರನಾಲಿಗೆಯೂ, ಪಿತೃಕಾರ್ಯಗಳಲ್ಲಿ ದಕ್ಷಿಣನಾಲಿಗೆಯೂ, ಸರ್ವಕರ್ಮಕ್ಕೂ ಪೂರ್ವನಾಲಿಗೆಯೂ, ಅಭಿಚಾರದಲ್ಲಿ ಆಗ್ನೇಯನಾಲಿಗೆಯೂ. ಶಾಂತಿಕರ್ಮಗಳಲ್ಲಿ ಈಶಾನ್ಯ ನಾಲಿಗೆಯೂ ಹೋಮಸ್ಥಾನವೆಂದು ಹೇಳಲ್ಪಟ್ಟಿರುತ್ತೆ.

ಸಪ್ತಜಿಹ್ವಾಅವಿಜ್ಞಾಯಯಃಕುರ್ಯಾದಗ್ನಿಸನ್ನಿಧೌ । ಹೋಮೋನಿಷ್ಫಲತಾಂಯಾತಿಹೋತಾಚನರಕಂವ್ರಜೇತ್ ॥

ತಾತ್ಪರ್ಯ॥ ಈ ಏಳು ನಾಲಿಗೆಗಳನ್ನು ತಿಳಿಯದೇ ಯಾವನು ಹೋಮ

---

೧ ಅಭಿಚಾರ, ಶತ್ರುನಾಶಕರವಾದ ಹೋಮಾದಿಗಳು.

ಮಾಡುವನೋ ಆ ಹೋಮವು ನಿಷ್ಫಲವು ಅಲ್ಲದೇ ಹೋಮಮಾಡಿದವನು ನರಕವಂ ಹೊಂದುತ್ತಾನೆ.

ಚತುರ್ವಿಂಶತಿಮತೇ॥ ಹತಂಜ್ಞಾನಂಕ್ರಿಯಾಹೀನಂಹತಾಸ್ತ್ವಜ್ಞಾನಿನಃಕ್ರಿಯಾಃ । ಅಪಶ್ಯನ್ನಂಧಕೋದಗ್ಧಃಪಶ್ಯನ್ನಪಿಚಪಂಗುಕಃ ॥

ತಾತ್ಪರ್ಯ॥ ಕರ್ಮಾನುಷ್ಠಾನವಿಲ್ಲದ ಜ್ಞಾನವು ನಿಷ್ಪ್ರಯೋಜನವು, ಜ್ಞಾನವಿಲ್ಲದೇ ಮಾಡುವ ಕ್ರಿಯೆಗಳೂ ವ್ಯರ್ಥಗಳು. ಇದಕ್ಕೆ ದೃಷ್ಟಾಂತ, ಸುಡುವಮನೆಯಲ್ಲಿ, ಕಣ್ಣು ಕಾಣದೇ ಕುರುಡನು ಸುಟ್ಟು ಹೋಗುತ್ತಾನೆ. ಅದರಂತೆ ಕಣ್ಣು ಕಂಡಾಗ್ಯೂ ಕುಂಟನು ಹೋಗಲು ಯೋಗ್ಯತೆಯಿಲ್ಲದೇ ದಗ್ಧನಾಗುತ್ತಾನೆ.

## ಹೋಮ ನಿಯಮಃ ಆಹುತಿ ಪ್ರಮಾಣಾದೀನಿ.

ದಕ್ಷಃ॥ ಪೂರ್ವಂಪ್ರಾದೇಶಿಕಾಂದತ್ವಾತತೋಹೋಮೋವಿಧೀಯತೇ । ದ್ವಿತೀಯಾಪೃಷ್ಠತೋದೇಯಾತತೋಗ್ನಿಮುಪತಿಷ್ಠತೆ ॥

ತಾತ್ಪರ್ಯ॥ ಹೋಮಕ್ಕೆ ಪೂರ್ವ ಸಮಿತ್ತನ್ನ ಅಗ್ನಿಯಲ್ಲಿ ಸಮರ್ಪಿಶಿ ಅನಂತರ ಹೋಮಮಾಡುವದು. ಪುನಃ ಸಮಿತ್ತನ್ನ ಸಮರ್ಪಿಶಿ ಅನಂತರ ಅಗ್ನ್ಯುಪಸ್ಥಾನ ಮಾಡುವದು.

ಸ್ಮೃತ್ಯಂತರೇ॥ ಪಾಣ್ಯಾಹುತಿಃದ್ವಾದಶಪರ್ವಪೂರಿಕಾಸ್ರುವಾಹುತಿಶ್ಚೈತ್ಸ್ರುವಮಾತ್ರಪೂರಿಕಾ । ಸ್ವಂಗಾರಿಣಿಸ್ವರ್ಚಿಷಿಚೈವಪಾವಕೇದೈವೇನತೀರ್ಥೇನಚಹೂಯತೇಹವಿಃ॥

ತಾತ್ಪರ್ಯ॥ ಹಸ್ತದಲ್ಲಿ ಕೊಡತಕ್ಕ ತಂಡುಲಾದ್ಯಾಹುತಿಯು ದ್ವಾದಶ ಪರ್ವಗಳಲ್ಲಿ (ಅಂಗುಷ್ಠವಿನಹಾ ಮಿಕ್ಕ ನಾಲ್ಕು ಬೆರಳುಗಳಲ್ಲಿರುವ ಹನ್ನೆರಡು ಗೆಣ್ಣುಗಳು) ತುಂಬಿ ಇರಬೇಕು. ಸ್ರುವಾ (ಮರದಲ್ಲಿಯೋ, ಅಥವಾ ಮುತ್ತುಗದ ಎಲೆಯಲ್ಲಿಯೋ ಮಾಡತಕ್ಕ ಅಗ್ನಿಯಲ್ಲಿ ತುಪ್ಪವನ್ನು ಬಿಡುವ ಸಾಮಗ್ರಿ) ಹುತಿಯು ಸ್ರುವಮಾತ್ರ ತುಂಬಿ ಇರಬೇಕು. ಹವಿ

ಸ್ಸನ್ನ ದೇವತೀರ್ಥದಿಂದ, ಜ್ವಲಿಸುವ ಅಗ್ನಿಯಲ್ಲಿಯೋ, ಚೆನ್ನಾಗಿ ಥಳ ಥಳಿಸುವ ಕೆಂಡದಲ್ಲಿಯೋ ಹೋಮ ಮಾಡತಕ್ಕದ್ದು.

ವೃದ್ಧಹಾರೀತಃ॥ ದೇವಾನಾಂತರ್ಪಣಂಹೋಮಂಬಲಿಕರ್ಮಚ ಭೋಜನಂ। ಅರ್ಚನಂಮಾರ್ಜನಂಕುರ್ಯಾತ್ ದೇವತೀರ್ಥೇನ ಸರ್ವದಾ॥

ತಾತ್ಪರ್ಯ॥ ದೇವತೆಗಳ ಉದ್ದಿಶ್ಯವಾದ ತರ್ಪಣ, ಹೋಮ, ಬಲಿ, ಭೋಜನ, ಅರ್ಚನ, ಮಾರ್ಜನ, ಇವುಗಳನ್ನ ದೇವತೀರ್ಥದಿಂದಲೇ ಸರ್ವದಾ ಅನುಷ್ಠಿಸಬೇಕು.

## ಶ್ರೌತ ಪೂರ್ವತ್ವಾದಿ ವಿಧಿಃ.

ಭರದ್ವಾಜಃ। ಹೋಮಂವೈತಾನಿಕಂಕೃತ್ವಾಸ್ಮಾರ್ತಂಕುರ್ಯಾದ್ವಿಚಕ್ಷಣಃ॥

ತಾತ್ಪರ್ಯ॥ ಯಾವವನಿಗೆ ಶ್ರೌತಾಗ್ನಿಯೂ, ಸ್ಮಾರ್ತಾಗ್ನಿಯೂ ಇರುವದೋ ಅವನು ಪ್ರಥಮತಃ ಶ್ರೌತ ಹೋಮವನ್ನ ಮಾಡಿ ಅನಂತರ ಸ್ಮಾರ್ತಹೋಮ (ಔಪಾಸನ) ವಂ ಮಾಡುವದು.

ಗೀತಾಯಾಂ। ಯತ್ಕರೋಷಿಯದಶ್ನಾಸಿಯಜ್ಜುಹೋಷಿದದಾಸಿ ಯತ್॥ ಯತ್ತಪಸ್ಯಸಿಕೌಂತೇಯತತ್ಕುರುಷ್ವಮದರ್ಪಣಂ॥

ತಾತ್ಪರ್ಯ॥ ಅಯ್ಯಾ ಕುಂತೀಕುಮಾರನಾದ ಅರ್ಜುನನೇ ನಿನ್ನಿಂದ ಮಾಡಲ್ಪಡುವ, ಕರ್ಮ, ದಾನ, ಹೋಮ, ತಪಸ್ಸು ಮೊದಲಾದ ಸಕಲವನ್ನೂ ಭಗವಂತನಾದ ನನಿಗೆ ಅರ್ಪಣವಾಗುವಂತೆ ಮಾಡು. "ಎಂದು ಶ್ರೀ ಕೃಷ್ಣಸ್ವಾಮಿಯು ಅಪ್ಪಣೆ ಕೊಡಿಸಿರುವರು"

ಆಪಸ್ತಂಬಃ। ಸ್ಥಾಲೀಪಾಕವದ್ವ್ರತಂ, ಸಾಯಿಪೂರ್ವಾಹುತಿಃ ಪ್ರಾತರಿತ್ಯೇಕೆ, ಉಭಯತಃಪರಿಷೇಚನಂಯಥಾಪುರಸ್ತಾದಿತಿ॥

---

೧ ಈ ದೇವತೀರ್ಥಾದಿ ಲಕ್ಷಣಗಳು ಹಿಂದೆ ಆಚಮನಪ್ರಕರಣದಲ್ಲಿ ವಿವರಿಸಲ್ಪಟ್ಟವೆ.

ತಾತ್ಪರ್ಯ ॥ ಸ್ಥಾಲೀಪಾಕದಲ್ಲಿಯೋ ಪಾದೆಯಲ್ಲಿ ಔಪಾಸನದಲ್ಲಿಯೊ, ಅಗ್ನಯೇಸ್ವಾಹಾ, ಅಗ್ನಯೇಸ್ವಿಷ್ಟಕೃತೇಸ್ವಾಹಾ, ಎಂಬ ಎರಡು ಹೋಮಗಳು, ವಿಶೇಷವೇನೆಂದರೆ, ಪ್ರಾತಃಕಾಲಮಾತ್ರ, ಸೂರ್ಯಾಯಸ್ವಾಹಾ, ಅಗ್ನಯೇ ಸ್ವಿಷ್ಟಕೃತೇಸ್ವಾಹಾ. ಎಂಬ ಹೋಮಗಳು, ಹೋಮಕ್ಕೆ ಪೂರ್ವ, ಅನಂತರ ಸಹಾ, ಪರಿಷೇಚನ ಮಾಡತಕ್ಕದ್ದು. (ಪರಿಷೇಚನ ಮಂತ್ರಗಳು ಪ್ರಯೋಗದಲ್ಲಿ ಬರಿಯಲ್ಪಡುವವು.

ಹೋಮೇಪರ್ಯುಕ್ಷಣೇಶ್ರಾದ್ಧೇಸಂಧ್ಯಾಕರ್ಮಸುಮಾರ್ಜನೇ ।
ಆಚಾಮೇಭೋಜನೇಪಾತ್ರಂತೋಯಂವಾಮೇನಸಂಸ್ಪೃಶೇತ್ ॥

ತಾತ್ಪರ್ಯ ॥ ಹೋಮ, ಶ್ರಾದ್ಧ, ಭೋಜನಾದಿಗಳಲ್ಲಿ ಪಾತ್ರವನ್ನೂ ಸಂಧ್ಯಾಮಾರ್ಜನಾದಿಗಳಲ್ಲಿ ಉದಕವನ್ನೂ ಎಡಹಸ್ತದಿಂದ ಸ್ಪರ್ಶಮಾಡಿ ಕೊಂಡಿರುವದು.

ಬ್ರಹ್ಮಾಂಡೇ ॥ ಲೋಕೇತುಮಂಗಳಾನ್ಯಷ್ಟೌಬ್ರಾಹ್ಮಣೋಗೌ ಹುತಾಶನಃ । ಹಿರಣ್ಯಂಸರ್ಪಿರಾದಿತ್ಯಃಆಪೋರಾಜಾತಥಾಷ್ಟಮಃ॥

ತಾತ್ಪರ್ಯ॥ ಹೋಮಾನಂತರ ಕರ್ತವ್ಯ ವಿಧಿಯು ಹೇಳಲ್ಪಡುವುದು. ಲೋಕದಲ್ಲಿ ಮಂಗಳವೆಂದು ಪ್ರಸಿದ್ಧವಾದ, ಬ್ರಾಹ್ಮಣ, ಗೌಃ, ಅಗ್ನಿ, ಹಿರಣ್ಯ, ಆಜ್ಯ, (ತುಪ್ಪ) ಸೂರ್ಯ, ಉದಕ, ರಾಜ, ಎಂಬ ಎಂಟು ಮಂಗಳದ್ರವ್ಯಗಳಂ ನೋಡತಕ್ಕದ್ದು.

## ಹೋಮ ಕಾಲಾತ್ಯಯ ಪ್ರಾಯಶ್ಚಿತ್ತಂ.

ಸ್ಮೃತಿರತ್ನಾಕರೇ॥ ಅಷ್ಟಾಭ್ಯೋಹೋಮಕಾಲೇಭ್ಯಃಪ್ರಾಕ್ಪ್ರಾಯಶ್ಚಿತ್ತಪೂರ್ವಕಂ ॥ ಪೃಥಕ್ಕುರ್ಯಾದ್ಗತಾನ್ಹೋಮಾನ್ಹವ ದ್ವ್ಯಾದ್ವಿಪ್ರಾಯತತ್ಪರಂ ॥

ತಾತ್ಪರ್ಯ ॥ ಧಾರ್ಯವಾದ ಅಗ್ನಿಯಲ್ಲಿ ಎಂಟುವೇಳೆ ಹೋಮಕ್ಕೆ ಪೂರ್ವ (ಏಳು ಹೋಮಗಳು ಮಾಡಲ್ಪಡದೇ ಎಂಟನೆ ಹೋಮಕಾಲದಲ್ಲಿ) ಪ್ರಾಯಶ್ಚಿತ್ತಪೂರ್ವಕವಾಗಿ ಆಕಾಲಕ್ಕೆ ಅತೀತವಾದ ಹೋಮಗಳನ್ನ

ಬೇರೆ ಬೇರೆ ಮಾಡಬೇಕು. ಎಂಟು ಕಾಲವನ್ನೂ (ನಾಲ್ಕು ದಿವಸವ ನ್ನೂ) ಕಳದರೆ ಹೋಮದ್ರವ್ಯವನ್ನ ಬ್ರಾಹ್ಮಣನಿಗೆ ದಾನಮಾಡತಕ್ಕದ್ದು.

ವ್ಯಾಸಃ॥ ಯದಿಮಾಸಮಹೋಮಿಸ್ಯಾತ್ ವಿಪ್ರಾಯಗುಣಶಾಲಿನೇ।
ಪಂಚಪ್ರಸ್ಥಂಪ್ರದದ್ಯಾತ್ತು ಯಾವತ್ತಂಡುಲಮೇವಚ ॥

ತಾತ್ಪರ್ಯ॥ ಒಂದುತಿಂಗಳು ಔಪಾಸನ ಹೋಮ ಮಾಡದಿದ್ದರೆ ಗುಣ ಶಾಲಿಯಾದ ಬ್ರಾಹ್ಮಣನಿಗೆ ಐದುಬಳ್ಳ ಅಕ್ಕಿಯನ್ನ (ಈ ಬಳ್ಳವು ಬಹು ಶಃ ಈಗಿನ (೪೦) ರೂಪಾಯಿ ತೂಕವುಳ್ಳ ಒಂದು ಶೇರಿರಬಹುದಾಗಿ ತೋ ರುತ್ತೆ) ದಾನಮಾಡತಕ್ಕದ್ದು. ಇಲ್ಲಿ ಕಾತ್ಯಾಯನ ಮಹರ್ಷಿಗಳು ಹೇ ಳುವದೇನಂದರೆ ಒಂದುವರ್ಷ ಔಪಾಸನ ಮಾಡದಿದ್ದರೆ (೬೦) ಅರವತ್ತು ಬಳ್ಳ ಅಕ್ಕಿಯನ್ನೂ (೩) ಮೂರುಬಳ್ಳ ತುಪ್ಪವನ್ನೂ ಸಹಾ ದಾನಮಾ ಡಬೇಕು. ಎಂದು.

## ಅಥ ಪುನರಾಧಾನ ನಿಮಿತ್ತಂ.

ಅತ್ರಕಾತ್ಯಾಯನಃ॥ ವಿಹಾಯಾಗ್ನಿಂಸಭಾರ್ಯಶ್ಚೇತ್ಸೀಮಾಮುಲ್ಲಂ
ಘ್ಯಗಚ್ಛತಿ। ಹೋಮಕಾಲವ್ಯಪೇತಸ್ಯಪುನರಾಧಾನಮಿಷ್ಯತೇ॥

ತಾತ್ಪರ್ಯ। ಧಾರ್ಯಾಗ್ನಿಯುಳ್ಳ ಯಜಮಾನನು ಪತ್ನಿಯೊಡನೆ ಗ್ರಾ ಮದ ಎಲ್ಲೆಯನ್ನ ಅತಿಕ್ರಮಿಸಿ ಪ್ರಯಾಣ ಮಾಡಿದ್ದು ಹೋಮಕಾ ಲಕ್ಕೆ ಬರದೇ ಇದ್ದರೆ (ಇಬ್ಬರೂ ಬರದಿದ್ದರೆ) ಪುನಃ ಅಗ್ನಿಸಂಧಾನ ಮಾಡತಕ್ಕದ್ದು.

ಶೌನಕಃ। ಸಮಿದಾತ್ಮಸಮಾರೂಢೋದ್ವಿಕಾಲಮಹುತಸ್ತಥಾ ॥

ತಾತ್ಪರ್ಯ॥ ಸಮಿತ್, ಆತ್ಮಸಮಾರೂಢವಾದ ಅಗ್ನಿಯು ಎರಡುಕಾಲ (ಒಂದುದಿನ) ಹೋಮವಿಲ್ಲದಿದ್ದರೆ ಲೌಕಿಕವಾಗುವದು (ಪುನಸ್ಸಂಧಾನ ಮಾಡತಕ್ಕದ್ದು ಎಂದು ಭಾವ.)

# ಆತ್ಮ ಸಮಾರೋಹಣ ವಿಧಿಃ.

ಬೋಧಾಯನಃ ॥ ಏಕಾಗ್ನೇಸ್ತ್ರಿವಿಧಂಸಮಾರೋಪಣಂಆತ್ಮನ್ಯರ ಣ್ಯೋರ್ವಾಸಮಿತ್ಸು, ಸಮಿಧಶ್ಚಾತ್ರಪಾಲಾಶಾಶ್ವತ್ಥಬಿಲ್ವೋ ದುಂಬರಖಾದಿರಾಃ, ತಾಸ್ವನ್ಯಸ್ಮಿ ಅಯಂತೇಯೋನಿಃ, ಇತಿ ಮಂತ್ರೇಣಸಮಾರೋಪಯತೇಅರಣ್ಯೋರ್ವಾ, ಅಪಿವಾಆ ತ್ಮನಿಸಮಾರೋಪಣಂಭವತಿ, ಯಾತೇಅಗ್ನೇಯಜ್ಞಿಯಾತ ನೂಃ, ಇತ್ಯಾತ್ಮನಿಸಮಾರೋಪ್ಯ, ಉಪಾವರೋಹಜಾತವೇ ದಃ, ಇತಿಲೌಕಿಕಾಗ್ನಾವುಪಾವರೋಹ್ಯಜುಹುಯಾತ್, ಅಪಿವಾ, ಅಯಂತೇಯೋನಿಃ, ಇತಿ, ಸಮಿಧಿಸಮಾರೋಪ್ಯ, ಆಜುಹ್ವಾನಃ, ಉದ್ಬುಧ್ಯಸ್ವಾಗ್ನೇ, ಇತಿದ್ವಾಭ್ಯಾಂಲೌಕಿಕಾ ಗ್ನೌಸಮಿಧಮಭ್ಯಾಧಾಯಜುಹುಯಾದಿತಿ,

ಸಪಿವ ॥ ಆತ್ಮಾರೂಢೋನಿಮಜ್ಜೇದ್ವಾವದೇದ್ವಾಪತಿತಾದಿಭಿಃ । ಅನ್ಯತೌವಾಸ್ತ್ರಿಯಂಗಚ್ಛೇದಥವಾಕಾಮಮೋಹಿತಃ । ಪದಂ ತ್ವೇಷುನಿಮಿತ್ತೇಷುಕೇಚಿದಗ್ನಿವಿನಾಶನಂ। ಆಪಸ್ತಂಬಸ್ಯತನ್ನೇ ಷ್ಟಂಆತ್ಮಾರೂಢಸ್ಸದಾಶುಚಿಃ ॥

ತಾತ್ಪರ್ಯ । ದಾರ್ಶ್ಯಾಗ್ನಿಯನ್ನ ಇಡಲು ಶಕ್ತಿಯಿಲ್ಲದ ಪಕ್ಷ ಔಪಾಸನಾ ಗ್ನಿಯನ್ನ ತನ್ನಲ್ಲಿಯೋ, ಅರಣಿಗಳಲ್ಲಿಯೋ, ಪಾಲಾಶಾದಿ ಸಮಿತ್ತುಗಳಲ್ಲಿ ಯೋ ಆರೋಪಣ ಮಾಡಬಹುದು.

ಆತ್ಮಸಮಾರೋಪಣ ಪಕ್ಷದಲ್ಲಿ, ಯಾತೇಅಗ್ನೇ, ಎಂಬ ಮಂತ್ರ ದಿಂದ ಸಮಾರೋಪಣಮಾಡಿ, ಉಪಾವರೋಹ ಎಂಬ ಮಂತ್ರದಿಂದ ಅವ ರೋಹಣ ಮಾಡುವುದು.

---

೧ ಈ ಮಂತ್ರಗಳೆಲ್ಲವೂ ಮುಂದೆ ಪ್ರಯೋಗದಲ್ಲಿ ಬರೆಯಲ್ಪಡುವುವು.

ಅಯಂತೇಯೋನಿಃ, ಎಂಬ ಮಂತ್ರದಿಂದ ಸವಿತ್ಸಮಾರೋಪಣ ಮಾಡಿ, ಆಜುಹ್ವಾನಃ, ಉದ್ಬುಧ್ಯಸ್ವಾಗ್ನೇ, ಎಂಬ ಎರಡು ಮಂತ್ರಗಳಿಂದ ಲೌಕಿಕಾಗ್ನಿಯಲ್ಲಿ ಸವಿತ್ತನ್ನ ಇಟ್ಟು ಹೋಮ ಮಾಡತಕ್ಕದ್ದು.

ಆತ್ಮಾರೂಢವಾದ ಅಗ್ನಿಯು. ಸ್ನಾನ, ಪತಿತಾದಿ ಸಂಭಾಷಣ, ಋತುಕಾಲಕ್ಕೆ ಇತರವಾದ ಕಾಲದಲ್ಲಿ ಕಾಮದಿಂದ ಸ್ತ್ರೀಗಮನ, ಇತ್ಯಾದಿ ನಿಮಿತ್ತಗಳಲ್ಲಿ ನಷ್ಟನಾಗುವದೆಂದು ಕೆಲವರು ಹೇಳುತ್ತಾರೆ.

ಆಪಸ್ತಂಬ ಮಹರ್ಷಿಗಳಿಗೆ ಅದು ಇಷ್ಟವಿಲ್ಲ. ಆತ್ಮಾರೂಢವಾದ ಅಗ್ನಿಯು ಸರ್ವದಾ ಪರಿಶುದ್ಧವೆಂದೇ ಇಷ್ಟವು.

## ಬ್ರಹ್ಮಚಾರಿಣಃ ಕರ್ತವ್ಯವಿಧಿಃ.

ಯಾಜ್ಞವಲ್ಕ್ಯಃ॥ ಅಗ್ನಿಕಾರ್ಯಂತತಃಕುರ್ಯಾತ್ಸಂಧ್ಯಯೋರುಭಯೋರಪಿ, ಇತಿ.

ತಾತ್ಪರ್ಯ॥ ಬ್ರಹ್ಮಚಾರಿಯು ಸಾಯಂ ಪ್ರಾತಃ ಅಗ್ನಿಕಾರ್ಯವನ್ನ ಮಾಡಬೇಕು.

ಬೋಧಾಯನಃ॥ ಸಮಾವರ್ತನಪ್ರಭೃತಿ, ಆಜ್ಯೇನವ್ಯಾಹೃತಿಭಿರೇವಹೂಯತೇಆಪಾಣಿಗ್ರಹಣಾತ್॥

ತಾತ್ಪರ್ಯ॥ ಸಮಾವರ್ತನಾನಂತರ ವ್ಯಾಹೃತಿಗಳಿಂದ ಯಾವದ್ವಿವಾಹ ಪರ್ಯಂತ ಆಜ್ಯಾಹುತಿಯು ಮಾಡತಕ್ಕದ್ದು.

---

೧ ಭೂರ್ಭುವಸ್ಸುವಃ, ಇವೇ ವ್ಯಾಹೃತಿಗಳು.

# ಅಥ ಔಪಾಸನ ಪ್ರಯೋಗಃ.

ಪಾದೌಪ್ರಕ್ಷಾಳ್ಯ, ದ್ವಿರಾಚಮ್ಯ,

ಪೂರ್ವದಿನದಲ್ಲಿ ಆತ್ಮಸಮಾರೋಪಣ ಮಾಡಿದ್ದ ಪಕ್ಷ.

ಉಪಾವರೋಹ ಜಾತವೇದಃ ಪುನಸ್ತ್ವಂದೇವೇಭ್ಯೋ ಹವ್ಯಂವಹ

ನಃ ಪ್ರಜಾನನ್ ಆಯುಃ ಪ್ರಜಾಗ್ಂ ರಯಿಮಸ್ಮಾಸು ಧೇಹಿ,

ಅಜಸ್ರೋ ದೀದಿಹಿ ನೋ ದುರೋಣೇ ॥

ಎಂಬ ಈ ಮಂತ್ರದಿಂದ ಆತ್ಮಸಮಾರೂಢಾಗ್ನಿಯನ್ನು ಲೌಕಿಕಾಗ್ನಿಯಲ್ಲಿ ಸೇರುವಂತೆ ಅಭಿನಯಿಸಿ (ದರ್ಭಾದಿಗಳನ್ನು ಲೌಕಿಕಾಗ್ನಿಯಲ್ಲಿ ಹಾಕುವದು.)

ಸಮಿತ್ಸಮಾರೋಪಣ ಮಾಡಿದ್ದ ಪಕ್ಷ.

ಆಜುಹ್ವಾನಸ್ಸುಪ್ರತೀಕಃ ಪುರಸ್ತಾದಗ್ನೇ ಸ್ವಾಂ ಯೋನಿಮಾಸೀದ

ಸಾಧ್ವಾ,—ಅಸ್ಮಿನ್ತ್ಸಧಸ್ಥೇ ಅಧ್ಯುತ್ತರಸ್ಮಿನ್ ವಿಶ್ವೇದೇವಾ ಯ

ಜಮಾನಶ್ಚ ಸೀದತ, ಇತಿ ಮಂತ್ರೇಣ, ಉದ್ಬುಧ್ಯಸ್ವಾಗ್ನೇ ಪ್ರತಿ

ಜಾಗೃಹ್ಯೇನಮಿಷ್ಟಾಪೂರ್ತೇ ಸಗ್ಂಸೃಜೇಥಾಮಯಂಚ, ಪು

ನಃ ಕೃಣ್ವಗ್ಗ್ಂಸ್ತ್ವಾ ಪಿತರಂ ಯುವಾನಮನ್ವಾತಾಗ್ಂಸೀತ್ತ್ವ

ಯಿತಂತುಮೇತಂ ॥

ಎಂಬ ಈ ಮಂತ್ರದಿಂದಲೂ ಆ ವಾಹಿತಾಗ್ನಿಯುಳ್ಳ ಸಮಿತ್ತನ್ನ ಲೌಕಿಕಾಗ್ನಿಯಲ್ಲಿ ಸಮರ್ಪಿಸಿ.

ಪವಿತ್ರಪಾಣಿಃ, ಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾಭಗವತ್ಪ್ರೀತ್ಯರ್ಥಂಪ್ರಾತರೌಪಾಸನಹೋಮಂತಂಡುಲೈರ್ಹೋಷ್ಯಾಮಿ, ಇತಿಸಂಕಲ್ಪ್ಯ.

ಕೃತಂಚಕರಿಷ್ಯಾಮಿ, ಭಗವನ್ನಿತ್ಯೇನ ಭಗವತ್ಪ್ರೀತ್ಯರ್ಥೇನ ಮಹಾವಿಭೂತಿಚಾತುರಾತ್ಮ್ಯ ಭಗವದ್ವಾಸುದೇವಪಾದಾರವಿಂದಾರ್ಚನೇನ, ಪ್ರಾತರೌಪಾಸನೇನ ಭಗವತ್ಕರ್ಮಣಾ, ಭಗವಂತಂವಾಸುದೇವಮರ್ಚಯಿಷ್ಯಾಮಿ, ಇತಿಸಂಕಲ್ಪ್ಯ.

ಭಗವತೋಬಲೇನಭಗವತೋವೀರ್ಯೇಣ, ಭಗವತಸ್ತೇಜಸಾಭಗವತಃಕರ್ಮಣಾ, ಭಗವತಃಕರ್ಮಕರಿಷ್ಯಾಮಿ, ಭಗವತೋವಾಸುದೇವಸ್ಯ॥

ಇತಿಬಲಮಂತ್ರಮನುಸಂಧಾಯ (ಎಂದು ಬಲಮಂತ್ರಾನುಸಂಧಾನಮಾಡಿ)

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರಸೇನಮಾಯಾ, ಸ್ವಕೀಯೈಶ್ಚೋಪಕರಣೈಃ, ಸ್ವಾರಾಧನೈಕಪ್ರಯೋಜನಾಯ, ಪರಮಪುರುಷಸ್ಸರ್ವಶೇಷೀ, ಸ್ವಶೇಷಭೂತಮಿದಂ, ಪ್ರಾತರೌಪಾಸನಾಖ್ಯಂಕರ್ಮ, ಸ್ವಪ್ರೀತಯೇಸ್ವಯಮೇವಕಾರಯತಿ. ಇತಿ, ಸಾತ್ವಿಕತ್ಯಾಗಂಕೃತ್ವಾ.

(ಫಲಾಪೇಕ್ಷೆ ಇಲ್ಲದೇ, ಮಾಡಲ್ಪಡುವ ಕರ್ಮಗಳನ್ನ ಭಗವದರ್ಪಣ ಮಾಡುವದೇ ಸಾತ್ವಿಕತ್ಯಾಗವು.)

ಸ್ಥಂಡಿಲಂಕಲ್ಪಯಿತ್ವಾ,

ರಂಗವಲ್ಲೀ, ಅಥವಾ ಮಣ್ಣು ಇವುಗಳಿಂದ ಅಗ್ನಿಹೋತ್ರಕ್ಕಾಗಿ ಮಾಡಲ್ಪಡುವ ಪ್ರದೇಶವು ಸ್ಥಂಡಿಲವು.

ಪ್ರಾಚೀಃಪೂರ್ವಮುದಕ್ಸಗ್ರಂಸ್ಥಂ ದಕ್ಷಿಣಾರಂಭಮಾಲಿಖೇತ್—
ಅಥೋದೀಚೀಃಪುರಸ್ಸಗ್ರಂಸ್ಥಂ ಪಶ್ಚಿಮಾರಂಭಮಾಲಿಖೇತ್,

ದರ್ಭಾದಿಗಳಿಂದ, ಪೋವರ್ಾಗ್ರವಾದ ಸ್ಥಂಡಿಲದಲ್ಲಿ, ಪ್ರಥಮತಃ, ದಕ್ಷಿಣಭಾಗದಲ್ಲಿ ಅನಂತರ ಮಧ್ಯದಲ್ಲಿ, ಅನಂತರ, ಉತ್ತರಭಾಗದಲ್ಲಿ, ಪಶ್ಚಿಮಾರಭ್ಯ ಪೂರ್ವಪರ್ಯಂತ ರೇಖೆಯನ್ನ ಎಳೆದು, ಅನಂತರ ಪ್ರಥಮತಃ ಪಶ್ಚಿಮಭಾಗದಲ್ಲಿ, ಆ ಮೇಲೆ ಮಧ್ಯೇ, ಅನಂತರ ಪೂರ್ವಭಾಗದಲ್ಲಿ ದಕ್ಷಿಣಾರಭ್ಯ ಉತ್ತರ ಪರ್ಯಂತ ರೇಖೆಯನ್ನ ಎಳೆಯುವದು,

ಅವಾಕ್ಕರೋಭ್ಯುಕ್ಷ್ಯ, ತೃಣಂನ್ನೈರ್ರುತ್ಯಾಂನಿರಸ್ಯ, ಅಪಉಪಸ್ಪೃಶ್ಯ,

ಸ್ಥಂಡಿಲವನ್ನ ಪ್ರೋಕ್ಷಿಸಿ ರೇಖೆಗೆ ಉಪಯೋಗಿಸಿದ್ದ ತೃಣ (ದರ್ಭ) ವನ್ನ ನೈರುತ್ಯಕ್ಕೆ ಹಾಕಿ, ಕೈತೊಳೆದು,

ಭೂರ್ಭುವಸ್ಸುವರೋಂ, ಇತಿ, ಅಗ್ನಿಂಪ್ರತಿಷ್ಠಾಪ್ಯ॥

ಅತ್ರಕಾರಿಕಾ ॥ ನಿಧಾಯವಹ್ನಿಂ, ಉತ್ಸೃಜ್ಯಾತೇಪ್ರೋಕ್ಷಣಶೇಷತೋಯಂ । ಪ್ರಾಕ್ಸ್ತೋಯಮನ್ಯನ್ನಿಧಧಾತ್ಯುದಗ್ವಾಯಥಾ ಬಹಿಸ್ಸ್ಯಾಚ್ಚ ಪರಿಸ್ತರಾಣಾಂ ॥

ತಾತ್ಪರ್ಯ॥ ಭೂರ್ಭುವಸ್ಸುವರೋಂ, ಎಂದು ಅಗ್ನಿಪ್ರತಿಷ್ಠೆಯಂ ಮಾಡಿ, ಅಪ್ರೋಕ್ಷಣಶೇಷೋದಕ (ಪ್ರಥಮದಲ್ಲಿ ರೇಖೆಯನ್ನ ಮಾಡಿದ ನಂತರ ಸ್ಥಂಡಿಲಕ್ಕೆ ಪ್ರೋಕ್ಷಿಸಿದ ನೀರಿನ ಶೇಷ) ವನ್ನ ಕೆಳಗೆ ಬಿಟ್ಟು, ಅಗ್ನಿಗೆ, ಪೂರ್ವಭಾಗದಲ್ಲಿಯೋ ಅಥವಾ ಉತ್ತರಭಾಗದಲ್ಲಿಯೋ ಒಂದು ಬಟ್ಟಲಲ್ಲಿ, ಪರಿಸ್ತರಣಕ್ಕೆ ಹೊರಗೆ ನೀರನ್ನ ತುಂಬಿ ಇಡುವದು.

ಅಂಜಲಿಂಬಧ್ವಾ (ಕೈಮುಗಿದು)

ಚತ್ವಾರಿಶೃಂಗಾತ್ರಯೋಅಸ್ಯಪಾದಾದ್ವೇಶೀರ್ಷೇಸಪ್ತಹಸ್ತಾಸೋ

ಅಸ್ಯ, ತ್ರಿಧಾಬದ್ಧೋವೃಷಭೋರೋರವೀತಿಮಹೋದೇವೋ

ಮರ್ತ್ಯಾಗ್ಂಆವಿವೇಶ.

ವಿಷಹಿದೇವ ಪ್ರದಿಶೋನುಸರ್ವಾಃ ಪೂರ್ವೋಹಜಾತಸ್ಸಉಗ

ರ್ಭೇ ಅಂತಃ, ಸವಿಜಾಯಮಾನಸ್ಸಜನಿಷ್ಯಮಾಣಪ್ರತ್ಯಙ್ಮು

ಖಾಸ್ತಿಷ್ಠತಿವಿಶ್ವತೋಮುಖಃ ॥

ಪ್ರಾಙ್ಮುಖೋದೇವಾಗ್ನೇಽಭಿಮುಖೋಭವ, ಇತಿ ಅಗ್ನಿಂಪ್ರಾರ್ಥ್ಯ.

ಸತ್ಕ್ರಿಯಾಕಲ್ಪಮಂಜರ್ಯಾಂ ಸಂಭವೇಪರಿಸ್ತೀರ್ಯ, (ಅನುಕೂಲಿಸುವ ಪಕ್ಷ ಪರಿಸ್ತರಣವಂ ಹಾಕಿ,)

ಓಂ, ಅಗ್ನಯೇನಮಃ, ಓಂ ಜಾತವೇದಸೇನಮಃ, ಓಂ ಸಹೋಜಸೇನಮಃ, ಓಂ ಅಜಿರಾಪ್ರಭವೇನಮಃ, ಓಂ ವೈಶ್ವಾನರಾಯನಮಃ, ಓಂ ನರ್ಯಾಪಸೇನಮಃ, ಓಂ ಪಂಕ್ತಿರಾಧಸೇನಮಃ, ಓಂ ವಿಸರ್ಪಿಣೇನಮಃ,

ಎಂದು ಪೂರ್ವಾದಿ ಎಂಟುದಿಕ್ಕುಗಳಲ್ಲಿಯೂ ಶೋಭನಾಕ್ಷತೆಗಳಿಂದ ಪೂಜೆ ಮಾಡಿ,

ಓಂ ಯಜ್ಞಪುರುಷಾಯನಮಃ.

ಎಂದು ಮಧ್ಯೆ ಯಜ್ಞಪುರುಷನನ್ನ ಅಕ್ಷತೆಗಳಿಂದ ಪೂಜಿಸಿ.

ಓಂ ಅದಿತೇನುಮನ್ಯಸ್ವ, ಓಂ ಅನುಮತೇನುಮನ್ಯಸ್ವ, ಓಂ ಸರಸ್ವತೇನುಮನ್ಯಸ್ವ, ಓಂ ದೇವಸವಿತಃಪ್ರಸುವ.

ಎಂದು ಅಗ್ನಿಪರಿಷೇಚನವಂ ಮಾಡಿ.

ಹೋಷ್ಯಾಮಿ, ಎಂದು ಅಗ್ನಿಯಲ್ಲಿ ದರ್ಭವಂ ಸಮರ್ಪಿಸಿ,

ಒಂದು ಮುಷ್ಟಿ[೧] ತಂಡುಲ (ಅಕ್ಕಿ) ವಂ ತೆಗೆದುಕೊಂಡು, ಎಡಗೈಯಲ್ಲಿಟ್ಟುಕೊಂಡು ಬಲಗೈಯಿಂದ ಪ್ರೋಕ್ಷಿಸಿ ಅರ್ಧಾಂಶವಂ ತೆಗೆದುಕೊಂಡು

೧ ಒಂದು ಮುಷ್ಟಿ ಅಕ್ಕಿಯನ್ನ ಪ್ರೋಕ್ಷಿಸಲ್ಪಟ್ಟ ಪತ್ನಿಹಸ್ತದಲ್ಲಿ ಕೊಡು. ಅವಳಿಂದ ಅರ್ಧಾಂಶ, ಅದರಂಶವಾಗಿ ಅಂಗೀಕರಿಸಿ ಹೋಮ ಮಾಡತಕ್ಕದ್ದು ಕೆಲವುಕಡೆ ಆಚಾರದಲ್ಲಿದೆ.

ಓಂ ಸೂರ್ಯಾಯಸ್ವಾಹಾ,

ಎಂದು ಅಗ್ನಿಯಲ್ಲಿ ಪಶ್ಚಿಮ ದಕ್ಷಿಣ (ನೈರುತ್ಯ) ಭಾಗದಲ್ಲಿ ಹೋಮ ಮಾಡಿ,

ಸೂರ್ಯಾಯೇದನ್ನಮಮ, ಎಂದು ಹೇಳಿ,

ಓಂ ಅಗ್ನಯೇಸ್ವಿಷ್ಟಕೃತೇಸ್ವಾಹಾ,

ಎಂದು ಅಗ್ನಿಯಲ್ಲಿ ಪ್ರಾಗುತ್ತರ (ಈಶಾನ್ಯ) ಭಾಗದಲ್ಲಿ ಹೋಮಮಾಡಿ.

ಅಗ್ನಯೇಸ್ವಿಷ್ಟಿಕೃತೇಇದಂ ನಮಮ, ಎಂದು ಹೇಳುವದು.

ರಾತ್ರ್ಯುಪಾಸನದಲ್ಲಿ, ಪ್ರಥಮತಃ, ಓಂ ಅಗ್ನಯೇಸ್ವಾಹಾ,

ಎಂದು ಅಗ್ನಿಯಲ್ಲಿ ಪಶ್ಚಿಮೋತ್ತರ ದಿಗ್ಭಾಗದಲ್ಲಿ ಹೋಮ ಮಾಡಿ,
ಅನಂತರ, ಅಗ್ನಯಇದಂನಮಮ, ಎಂದು ಹೇಳಿ,

ಓಂ ಅಗ್ನಯೇಸ್ವಿಷ್ಟಕೃತೇಸ್ವಾಹಾ

ಎಂದು ಅಗ್ನಿಯಲ್ಲಿ ಪ್ರಾಗುತ್ತರಭಾಗದಲ್ಲಿ ಹೋಮಮಾಡಿ,

ಅಗ್ನಯೇಸ್ವಿಷ್ಟಕೃತಇದಂನಮಮ, ಎಂದುಹೇಳಿ, ಒಂದು ಸಮಿತ್ತು ಸಮರ್ಪಿಸಿ, ಎರಡು ಆಹುತಿಗಳಿಗೂ ಸಂಸರ್ಗವಾದಪಕ್ಷ,

ಆಹುತಿಸಂಸರ್ಗಪ್ರಾಯಶ್ಚಿತ್ತಾರ್ಥಂವನಸ್ಪತಿಹೋಮಂಕರಿಷ್ಯೇ,
ಎಂದು ಸಂಕಲ್ಪಮಾಡಿ,

ಯತ್ರವೇತ್ಥವನಸ್ಪತೇದೇವಾನಾಂಗುಹ್ಯಾನಾಮಾನಿ ತತ್ರಹವ್ಯಾನಿ ಗಾಮಯ,

ಸ್ವಾಹಾ, ಎಂದು ಸಮಿತ್ತನ್ನ ಸಮರ್ಪಿಸಿ, ವನಸ್ಪತಯ ಇದಂನಮಮ ಎಂದು ಹೇಳಿ,

ಓಂ ಅದಿತೇನ್ವಮಗ್ಗ್ಂಸ್ವಾಹಾ, ಓಂ ಅನುಮತೇನ್ವಮಗ್ಗ್ಂಸ್ವಾಹಾ,
ಓಂ ಸರಸ್ವತೇನ್ವಮಗ್ಗ್ಂಸ್ವಾಹಾ, ಓಂ ದೇವಸವಿತಃಪ್ರಾಸಾವೀಃ,

ಎಂದು ಅಗ್ನಿಪರಿಷೇಚನವಂ ಮಾಡಿ,

ಓಂಶ್ರೀವಿಷ್ಣವೇಸ್ವಾಹಾ,

ಎಂದು ಸಮಿತ್ತನ್ನು ಅಥವಾ ದರ್ಭವನ್ನು ಸಮರ್ಪಿಸಿ (ಹೋಮಮಾಡಿ)

ಶ್ರೀವಿಷ್ಣವೇಪರಮಾತ್ಮನೇಇದಂನಮಮ,

ಎಂದುಹೇಳಿ (ಹೀಗೆ ಹೇಳುವದೇ ಉದ್ದೇಶತ್ಯಾಗವೆನಿಸುವದು),

ಅನಂತರ ನಿಂತುಕೊಂಡು,

ಅಗ್ನೇನಯಸುಪಥಾರಾಯೇಅಸ್ಮಾನ್ವಿಶ್ವಾನಿದೇವವಯುನಾನಿವಿ
ದ್ವಾನ್, ಯುಯೋಧ್ಯಸ್ಮಜ್ಜುಹುರಾಣಮೇನೋಭೂಯಿಷ್ಠಾಂ
ತೇನಮಉಕ್ತಿಂವಿಧೇಮ,

ಅಗ್ನಯೇನಮಃ ॥ ಮಂತ್ರಹೀನಂಕ್ರಿಯಾಹೀನಂಭಕ್ತಿಹೀನಂಹು
ತಾಶನ । ಯದ್ಧುತಂತುಮಯಾದೇವಪರಿಪೂರ್ಣನ್ತದಸ್ತುತೇ ॥
ಪ್ರಾಯಶ್ಚಿತ್ತಾನ್ಯಶೇಷಾಣಿತಪಃಕರ್ಮಾತ್ಮಕಾನಿವೈ । ಯಾ
ನಿತೇಷಾಮಶೇಷಾಣಾಂಕೃಷ್ಣಾನುಸ್ಮರಣಂಪರಂ ॥

ಇತಿಪ್ರಣಮ್ಯ, ಅಭಿವಾದ್ಯ, ಆಚಮ್ಯ ಪ್ರಾಣಾನಾಯಮ್ಯ,

ಸಮಿತ್ಸಮಾರೋಪಣ ಮಾಡುವಪಕ್ಷ.

ಶ್ರೀಭಗವದಾಜ್ಞಯಾಭಗವತ್ಪ್ರೀತ್ಯರ್ಥಂ ಸಮಿತ್ಸಮಾರೋಪ
ಣಂಕರಿಷ್ಯೇ, ಎಂದು ಸಂಕಲ್ಪಮಾಡಿ,

ಅಯಂತೇಯೋನಿರ್ಋತ್ವಿಯೋ ಯತೋಜಾತೋಅರೋಚಥಾಃ,
ತಂಜಾನನ್ನಗ್ನಆರೋಹಾಥಾನೋವರ್ಧಯಾರಯಿಂ,

ಎಂದು ಅಗ್ನಿಯನ್ನು ಸಮಿತ್ಸಮಾರೋಪಣ ಮಾಡುವದು.

ಆತ್ಮಸಮಾರೋಪಣಪಕ್ಷ,

ಶ್ರೀಭಗವದಾಜ್ಞಯಾಭಗವತ್ಪ್ರೀತ್ಯರ್ಥಂಆತ್ಮಸಮಾರೋಪಣಂ
ಕರಿಷ್ಯೇ

ಎಂದು ಸಂಕಲ್ಪಮಾಡಿ,

ಯಾತೇಅಗ್ನೇಯಜ್ಞಿಯಾತನೂಸ್ತಯೇಹ್ಯಾರೋಹಾತ್ಮಾತ್ಮಾ
ನಂಅಚ್ಛಾವಸೂನಿಕೃಣ್ವನ್ನಸ್ಮೇನರ್ಯಾಪುರೂಣಿಯಜ್ಞೋ
ಭೂತ್ವಾಯಜ್ಞಮಾಸೀದಸ್ವಾಂಯೋನಿಂಜಾತವೇದೋಭುವಆ
ಜಾಯಮಾನಸ್ಸಕ್ಷಯಏಹಿ,

ಎಂದು ಅಗ್ನಿಯನ್ನು ಆತ್ಮನಲ್ಲಿ ಸಮಾರೋಪಣ ಮಾಡುವದು.

ಅನಂತರ ಶುದ್ಧಾಚಮನವಂ ಮಾಡಿ,

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರ
ಸೇನಮಯಾಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರ
ಯೋಜನಾಯಪರಮಪುರುಷಸ್ಸರ್ವಶೇಷೀಸ್ವಶೇಷಭೂತಮಿ
ದಂಪ್ರಾತರೌಪಾಸನಾಖ್ಯಂಕರ್ಮಸ್ವಸ್ಮೈಸ್ವಪ್ರೀತಯೇಸ್ವ
ಯಮೇವಕಾರಿತವಾನ್, ಎಂದು ಸಾತ್ವಿಕತ್ಯಾಗಮಾಡಿ,

ಅನೇನಔಪಾಸನಾಖ್ಯೇನಕರ್ಮಣಾಭಗವಾನ್ಪ್ರಿಯತಾಂವಾಸು
ದೇವಃ, ಇತಿಔಪಾಸನಂಸಮಾಪಯೇತ್ ॥

## ಅಥ ಅಭಿಗಮನಾರಾಧನ ಕ್ರಮಃ.

ಪುಷ್ಪ ಚಂದನ ವಸ್ತ್ರ ಭೂಷಣಾದಿಗಳಿಂದ ಅಲಂಕೃತನಾಗಿ ತನ್ನಾಗಿ
...ಪ್ಪತ್ತು ಕೈಕಾಲುಗಳನ್ನು ತೊಳೆದು ನೇವಗೃಹ ಪ್ರವೇಶಮಾಡಿ

ದೂರದಲ್ಲಿಯೇ ಪ್ರಣಾಮವಮಾಡಿ ದ್ವಾರಪಾಲಕರುಗಳನ್ನು ಅಭಿನಂದಿಸಿ ಅನುಜ್ಞೆಯನ್ನಹೊಂದಿ ಭಗವತ್ಸಮೀಪದಲ್ಲಿ ನಿಂತು,

ಕೌಸಲ್ಯಾಸುಪ್ರಜಾರಾಮಪೂರ್ವಾಸಂಧ್ಯಾಪ್ರವರ್ತತೇ ॥ ಉತ್ತಿ
ಷ್ಠ ನರಶಾರ್ದೂಲಕರ್ತವ್ಯಂದೈವಮಾಹ್ನಿಕಂ॥

ಇತ್ಯಾದಿ ಸುಪ್ರಭಾತ ಶ್ಲೋಕಗಳಿಂದ ಭಗವಂತನನ್ನ ಯಚ್ಚರಗೊಳಿಸಿ ದೇಶಕಾಲಾನುಗುಣ್ಯವಾಗಿ ಪತ್ರ ಪುಷ್ಪ ಫಲಾದಿಗಳಿಂದ ಭಗವಂತನನ್ನು ಪೂಜಿಸಿ, ಅಷ್ಟಾಂಗಪ್ರಣಾಮವಂ ಮಾಡಿ,

| | |
|---|---|
| ಅಷ್ಟಾಂಗಪ್ರಣಾಮ ಲಕ್ಷಣಂ, ನಿತ್ಯ, | ಉರಸಾಶಿರಸಾಚಕ್ಷುವಮನಸಾವಪುಷಾಸಿರಾ । ಪ ದ್ಭ್ಯಾಂಕರಾಭ್ಯಾಂಜಾನುಭ್ಯಾಂಪ್ರಣಾಮೋಽಷ್ಟಾಂ ಗಉಚ್ಯತೇ ॥ |

ತಾತ್ಪರ್ಯ ॥ ಶರೀರ, ಎದೆ, ಶಿರಸ್ಸು, ಕೈಗಳು ಕಾಲುಗಳು, ಬುಂಡಿಗಳು, ಸಹ ಚನ್ನಾಗಿ ನೆಲದಲ್ಲಿ ತಾಗುವಂತೇ ವಂದನ ಮಾಡುವದಲ್ಲದೇ ಮನಸ್ಸಿನಲ್ಲಿಯೂ, ಅಭಿವಾದನಮಾಡಿ, ನಮಃ ಎಂದು ವಾಕ್ಕಿನಲ್ಲಿ ಹೇಳುವದೇ, ಅಷ್ಟಾಂಗ ನಮಸ್ಕಾರವು,

ಅಷ್ಟಾಂಗ ಪ್ರಣಾಮಕ್ಕೆ ಶಕ್ತಿ ಇಲ್ಲದಪಕ್ಷ, ತತ್ತದ್ದೇಶ ಕಾಲಾನುಗುಣವಾಗಿ,

ಮಸ್ತಿಷ್ಕ, ಸಂಪುಟ, ಪ್ರಹ್ವಾಂಗ, ಪಂಚಾಂಗ ದಂಡಾಂಗಾದಿ ಪ್ರಣಾಮಗಳಲ್ಲಿ ಯಥಾಶಕ್ತಿ ಪ್ರಣಾಮ ಮಾಡುವದು.

ಮಸ್ತಿಷ್ಕಾದಿಪ್ರಣಾಮ ಪಂಚಕಲಕ್ಷಣವು ವೈಖಾನಸದಲ್ಲಿ ಹೇಳಲ್ಪಟ್ಟಿರುವದು.

ಪಾಂಚರಾತ್ರರಕ್ಷಾಯಾಂ । ವೈಖಾನಸೇ, ಸಮಸ್ತಿಷ್ಕಪ್ರಣಾಮ
ಸ್ಸ್ಯಾದಂಜಲಿಂಮಸ್ತಕೇನ್ಯಸೇತ್ । ಪ್ರಣಾಮಸ್ಸಂಪುಟಸ್ಸಸ್ಯಾ
ತ್ಹೃದಯೇಂಜಲಿಮರ್ಪಯೇತ್ । ಪ್ರಹ್ವಾಂಗಃಸಂಪುಟಂಕು
ರ್ಯಾತ್ಸಪ್ರಹ್ವಾಂಗನಮಸ್ಕ್ರಿಯಾ॥

ಪಾದಾಂಗುಳಭ್ಯಾಂಜಾನುಭ್ಯಾಂಶಿರಸಾಚಾವನಿಂಸ್ಪೃಶೇತ್ । ಬ
ದ್ಧಾಂಜಲಿರ್ನಮಸ್ಕುರ್ಯಾತ್ಸಪಂಚಾಂಗಉದಾಹೃತಃ ॥ ಪಾದಾ

ಹಸ್ತಪ್ರಸಾರ್ಯ ಪಶೇತೇಭೂಮೌಚದಂಡವತ್ । ಸದಂಡಾಂಗಪ್ರಣಾಮಸ್ಸ್ಯಾತ್ಪ್ರಣಾಮಾನೇವಮಾಚರೇತ್, ಏಕೇನ ಪಾಣಿನಾಯಸ್ತು ಪ್ರಣಮೇತ್ಪುರುಷೋತ್ತಮಂ । ನ್ಯಾಯಸ್ತಸ್ಯಕರಚ್ಛೇದಃ ಇತಿ ಧರ್ಮವಿದೋವಿದುಃ॥

ತಾತ್ಪರ್ಯ॥ ಶಿರಸ್ಸಿನಲ್ಲಿ ಅಂಜಲಿಬಂಧ ಮಾಡುವದೇ ಮಸ್ತಿಷ್ಕಪ್ರಣಾಮವು, (ಅಂಜಲಿ ಕೈಮುಗಿಯುವದು)

ಹೃದಯ (ವಕ್ಷಸ್ಥಳ) ದಲ್ಲಿ ಅಂಜಲಿಬಂಧವಂ ಮಾಡುವದೇ ಸಂಪುಟ ಪ್ರಣಾಮವು,

ಪ್ರಹ್ವಾಂಗನಾಗಿ (ಬಗ್ಗಿಸಲ್ಪಟ್ಟ ಅವಯವವುಳ್ಳವನಾಗಿ) ಸಂಪುಟ ನಮಸ್ಕಾರ (ಹೃದಯದಲ್ಲಿ ಅಂಜಲಿಬಂಧ) ಮಾಡುವದೇ ಪ್ರಹ್ವಾಂಗ ನಮಸ್ಕಾರವು.

ಕಾಲು ಬೆರಳುಗಳಿಂದಲೂ, ಮಂಡಿಗಳಿಂದಲೂ, ಶಿರಸ್ಸಿನಿಂದಲೂ ಅಭಿವಾದನ ಮಾಡಿ ಕೈಮುಗಿಯುವದೇ ಪಂಚಾಂಗ ನಮಸ್ಕಾರವು.

ಕೈಕಾಲುಗಳನ್ನು ನೀಡದಲ್ಲಿ ದಂಡ (ಕೋಲು) ದಂತೆ ನೀಡಿ ನಮಸ್ಕರಿಸುವದೇ ದಂಡಾಂಗ ನಮಸ್ಕಾರವು.

ಏಕಹಸ್ತದಿಂದ ನಮಸ್ಕಾರಮಾಡಿದರೆ ಹಸ್ತಛೇದನವೇ ಕರ್ತವ್ಯವೆಂದು ಧರ್ಮಶಾಸ್ತ್ರಜ್ಞರು ಹೇಳುವರು.

ಭಕ್ತಿಯಿಂದಕೂಡಿ ದ್ವಯ ಮಂತ್ರವನ್ನು ಉಚ್ಚರಿಸಿ, ದ್ವಯಾರ್ಥವಿವರಣ ರೂಪವಾದ ವಿಙ್ಞಪ್ತಿಯನ್ನು ಅನುಸಂಧಾನ ಮಾಡಿ,

ಸತ್ಯಜ್ಞಾನಾನಂದಾನಂತಸ್ವರೂಪ, ಅಮಲ, ವತ್ಸಲ, ಸ್ವಾಮಿನ್, ಸುಶೀಲ, ಸುಲಭ, ಸರ್ವಜ್ಞ, ಸರ್ವಶಕ್ತೇ, ಪರಮಕಾರುಣಿಕ, ಕೃತಜ್ಞ, ಸ್ಥಿರ, ಪರಿಪೂರ್ಣ, ಪರಮೋದಾರ, ಶುದ್ಧಸತ್ವಮಯದಿವ್ಯಮಂಗಳವಿಗ್ರಹೋಪೇತ, ಶ್ರೀಮನ್ನಾರಾಯಣ, ಅಶ್ಯಂತಪರಿಶುದ್ಧೋಽಹಂ, ಇತಃ ಪ್ರಾಗನಂತಕಲ್ಪಮೇಷ್ವನಾದ್ಯ ತ್ವದಾಜ್ಞಾತಿಕ್ರಮಣಾನಲ್ಪಸಿದ್ಧ, ದುರಂತ, ದುಃಖಮೂಲ, ರಾಗಲೋಭ [illegible]

ರೂಪರಕ್ಷಾಯಾಂ, ತ್ವಾ. ವಿನಾ, ಕಲ್ಪಕೋಟಿಸಹಸ್ರೇಣಾಪಿ ಸಾಧನಂನಾಸ್ತಿ, ತ್ವಮೇವೋಪಾಯಾಂತರಸ್ಥಾನೇಸ್ಥಿತ್ವಾಸಿರು ಕ್ತಕೈಂಕರ್ಯೋತ್ಪಾದನರೂಪರಕ್ಷಾಂ ಏತತ್ಕೈಂಕರ್ಯರಾಧ್ಯ ತಾಭ್ಯುಪಗಮದ್ವಾರೇಣಕರಿಷ್ಯಸಿ, ಇತಿಸುದೃಢಮಧ್ಯವಸ್ಯಾಮಿ, ತ್ವಮೇವೈತದ್ರಕ್ಷಾಂಕುರು,

ದೇಹೇಂದ್ರಿಯಾದಿವಿಲಕ್ಷಣೋಽಹಂ, ಮದೀಯತ್ವೇನಾಭಿಮತಂಚ ವಸ್ತುಸರ್ವಸ್ವಾಮಿನೇ ಶ್ರೀಮತೇನಾರಾಯಣಾಯತುಭ್ಯಮೇವನಮಮ, ನಿರುಕ್ತಕೈಂಕರ್ಯೋತ್ಪಾದನರೂಪ ರಕ್ಷಾಭರಃ ಉಕ್ತಗುಣವಿಶಿಷ್ಟಾಯತುಭ್ಯಮೇವನಮಮ.

ಏತದ್ರಕ್ಷಾಫಲಮಪಿ ತಾದೃಶಾಯತುಭ್ಯಮೇವನಮಮ, ಇತಿಪ್ರಪದನಂಕುರ್ಯಾತ್ (ಎಂದು ಪ್ರಪದನ ಮಾಡುವದು)

ತಾತ್ಪರ್ಯ॥ ಈ ಪ್ರಪದನ ಲಕ್ಷಣಾದಿಗಳು ಮುಮುಕ್ಷೂಪಾಯ ಸಂಗ್ರಹದಲ್ಲಿ ವಿವರಿಸಲ್ಪಡುತ್ತಾಗಿ ಇಲ್ಲಿ ತಾತ್ಪರ್ಯದಲ್ಲಿ ವಿವರಿಸಲಿಲ್ಲವು.

ನಂತರ ಮಂಗಳದ್ರವ್ಯಗಳನ್ನ ನೋಡುವದು.

ಅನಂತರ। ಸೌರಭೇಯಾಸ್ಸರ್ವಹಿತಾಃ ಪವಿತ್ರಾಃಪುಣ್ಯರಾಶಯಃ ।
ಪ್ರತಿಗೃಹ್ಣಂತುಮೇಗ್ರಾಸಂಗಾವಸ್ತ್ರೈಲೋಕ್ಯಮಾತರಃ ॥

ತಾತ್ಪರ್ಯ॥ ಮೂರುಲೋಕಕ್ಕೂ, ಮಾತೃಪ್ರಾಯಗಳಾಗಿಯೂ, ಪರಿಶುದ್ಧಗಳಾಗಿಯೂ, ಸುರಭಿಯ (ಕಾಮಧೇನುವಿನ) ಕುಲೋತ್ಪನ್ನಗಳಾಗಿಯೂ, ಪುಣ್ಯರಾಶಿಗಳಾಗಿಯೂ, ಇರುವ ಗೋವುಗಳೇ ನನ್ನಿಂದ ಕೊಡಲ್ಪಡುವ ತೃಣಕಬಳವನ್ನ ಅಂಗೀಕರಿಸಿರಿ, ಎಂದು ಇತರರ ಗೋವಿಗೆ ಗ್ರಾಸಮುಷ್ಟಿಯನ್ನ ಕೊಡತಕ್ಕದ್ದು.

ಅನಂತರ ಆಚಾರ್ಯರನ್ನೂ. ವೃದ್ಧರನ್ನೂ ನಮಸ್ಕರಿಸುವದು.

ಅನಂತರ ವೇದಾಧ್ಯಯನ, ತದರ್ಥ ವಿಚಾರಗಳನ್ನು ಪ್ರಥಮ ಯಾಮದಲ್ಲಿ ಮಾಡುವದು.

ಹಿಂದೆ ಹೇಳಿರುವಂತೆ, ಪ್ರಪನ್ನರೂಪವಾದ ಅಭಿಗಮನದಲ್ಲಿ ಶಕ್ತಿ

ಇಲ್ಲವೆಪಕ್ಷ ತನ್ನ ಆಚಾರ್ಯರ ಪಾದಾರವಿಂದದಲ್ಲಿ ಭರಸಮರ್ಪಣ ಮಾಡುವದು.

ಅದಕ್ಕೂ ಅನುಕೂಲ್ಯವಿಲ್ಲದಪಕ್ಷ, ಧ್ಯಾನ, ಅರ್ಚನ, ಸ್ತೋತ್ರ, ಸಂಕೀರ್ತನ, ಪ್ರಣಾಮ, ಅಂಜಲಿಬಂಧಾದಿಗಳನ್ನು ಶಕ್ತ್ಯನುಗುಣವಾಗಿ ಮಾಡುವದು.

ಸೂತಕಾ ಶೌಚಾದ್ಯ ಪರಿಶುದ್ಧ ಕಾಲಗಳಲ್ಲಿ ಮನಸ್ಸಿನಿಂದಲೇ ಮಾಡತಕ್ಕದ್ದು.

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರ
ಸೇನಮಯಾ ಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರ
ಯೋಜನಾಯ ಪರಮಪುರುಷಸ್ಸರ್ವಶೇಷೀ ಸ್ವಶೇಷಭೂತ
ಮಿದಂಅಭಿಗಮನಾಖ್ಯಂ ಕರ್ಮಸ್ವಸ್ಮೈಸ್ವಪ್ರೀತಯೇಸ್ವಯ
ಮೇವಕಾರಿತವಾನ್, ಇತಿಸಾತ್ವಿಕತ್ಯಾಗಂಕೃತ್ವಾ, ಅನೇನಅಭಿ
ಗಮನಾಖ್ಯೇನಕರ್ಮಣಾಭಗವಾನ್‌ಪ್ರಿಯತಾಂ ವಾಸುದೇವಃ
ಇತಿ ಅಭಿಗಮನಂ, ಸಮಾಪಯೇತ್ ||

## ಅಥ ಉಪಾದಾನ ಪ್ರಕರಣಂ.

### ಉಪಾದಾನವಿಧಿಃ.

ತಾತ್ಪರ್ಯ! ಉಪಾದಾನವೆಂದರೆ ಭಗವದಾರಾಧನೋಪಯೋಗಿ ಸಾಮಗ್ರಿ ಸಂಪಾದನವು.

ಉತ್ತಮಂಸ್ವಾರ್ಜಿತಂಪುಷ್ಪಂ ಮಧ್ಯಮಂವನ್ಯಮುಚ್ಯತೇ ।
ಅಧಮಂತುಕ್ರಯಕ್ರೀತಂಪಾರಕ್ಯಮಧಮಾಧಮಂ || ಹಸ್ತಾ
ನೀತಂಪಟಾನೀತಂಸ್ವಯಂಪತಿತಮೇವವಾ । ದೇವಾರಾಮೋ
ದ್ಭವಂಪುಷ್ಪಂಗೃಹೀತ್ವಾಯನಾರ್ಚಯೇತ್ ||

ತಾತ್ಪರ್ಯ! ತನ್ನ ಕ್ಷೇತ್ರದಲ್ಲಿ ತಾನು ಶ್ರಮಪಟ್ಟು ಬೆಳೆದ ಪುಷ್ಪಾದಿಗಳು ಶ್ರೇಷ್ಠವು, ಅರಣ್ಯದಲ್ಲಿ ತರುವದು ಮಧ್ಯಮವು, ಕ್ರಯಕ್ಕೆ ತರುವದು ಅಧಮವು, ಪರರ ಕ್ಷೇತ್ರದಲ್ಲಿ ತರುವದು ಅಧಮಾಧಮವು.

ಪುಷ್ಪಭಾಜನ (ಬುಟ್ಟಿ) ದಲ್ಲಿ ತರದೇ ಹಸ್ತದಲ್ಲಿ ತಂದ ಪುಷ್ಪಗಳೂ, ವಸ್ತ್ರದಲ್ಲಿ ತಂದ ಪುಷ್ಪಗಳೂ, ತಾನಾಗಿಯೇ ಕೆಳಗೆ ಬಿದ್ದಿರುವ ಪುಷ್ಪಾದಿಗಳೂ ಆರಾಧನಕ್ಕೆ ಅರ್ಹಗಳಲ್ಲವು. ದೇವಾಲಯಗಳಲ್ಲಿ ಇರತಕ್ಕ ಪುಷ್ಪಾದಿಗಳಿಂದ ಗೃಹದೇವಾರ್ಚನೆ ಮಾಡಬಾರದು.

ಆರವಾರೇಚ ಶುಕ್ರೇಚ ಮನ್ವಾದಿಷುಯುಗಾದಿಷು। ನಾಹರೇತ್ತುಲಸೀಪತ್ರಂಮಧ್ಯಾಹ್ನಾತ್ಪರತಸ್ತಥಾ ॥ ಸಂಕ್ರಾಂತ್ಯಾಂಪಕ್ಷಯೋರಂತೇದ್ವಾದಶ್ಯಾಂನಿಶಿಸಂಧ್ಯಯೋಃ । ತುಲಸೀಂಯೇವಿಚಿನ್ವಂತಿತೇಕೃಂತಂತಿಹರೇಶ್ಶಿರಃ ॥

ತಾತ್ಪರ್ಯ॥ ಮಂಗಳವಾರ, ಶುಕ್ರವಾರ, ಮನ್ವಾದಿ, ಯುಗಾದಿ, ಮಧ್ಯಾಹ್ನಾನಂತರ, ಸಂಕ್ರಮಣ, ಪೌರ್ಣಿಮಾ, ಅಮಾವಾಸ್ಯಾ, ದ್ವಾದಶೀ, ರಾತ್ರಿ, ಸಂಧ್ಯೆಗಳಲ್ಲಿ (ಪ್ರಾತಃಸಂಧ್ಯಾ ಸಾಯಂಸಂಧ್ಯಾ ಕಾಲಗಳಲ್ಲಿ, ತುಲಸಿಯನ್ನ ಎತ್ತಬಾರದು; ಎತ್ತಿದ್ದಾದರೆ ಹರಿಯ ಶಿರಸ್ಸನ್ನ ಕುಯಿದಂತೆ ದೋಷಪ್ರಾಪ್ತಿಯಾಗುವದು.

ಮಣಿಕಾಂಚನಪುಷ್ಪಾಣಿ ಮುಕ್ತಾವೈಡೂರ್ಯಕಾನಿಚ । ತುಲಸೀಪತ್ರದಾನಸ್ಯಕಲಾಂನಾರ್ಹಂತಿಷೋಡಶೀಂ ॥ ಸುಮಂಜರೀದಳೈರ್ಯುಕ್ತೈಃ ಕೋಮಲೈಸ್ತುಳಸೀದಳೈಃ । ಯೇಕುರ್ವಂತಿ ಹರೇಪೂಜಾಂತೇಕೃತಾರ್ಥಾಃಕಲೌಯುಗೇ ॥

ತಾತ್ಪರ್ಯ॥ ಮಣಿ, ಕಾಂಚನ, ಪುಷ್ಪಾದಿಗಳಿಂದಲೂ, ಮುಕ್ತಾವೈಡೂರ್ಯಾದಿಗಳಿಂದಲೂ ಪೂಜೆ ಮಾಡಿದಾಗ್ಯೂ ಆ ಅರ್ಚನೆಯು ತುಲಸೀ ದಳದಲ್ಲಿ ಮಾಡಲ್ಪಡುವ ಅರ್ಚನೆಯ ಹದಿನಾರನೇ ಒಂದುಭಾಗವನ್ನೂ ಹೊಂದಲಾರದು.

ಕೋಮಲಗಳಾಗಿಯೂ ನಾಲ್ಕಾರು ಎಲೆಗಳಿಂದ ಕೂಡಿ ಗೊಂಚಲಿನ ಹಾಗೆ ರಮಣೀಯವಾಗಿಯೂ ಇರುವ ತುಲಸೀದಳಗಳಿಂದ ಯಾರು ಭಗವಂತನನ್ನ ಪೂಜಿಸುವರೋ ಅವರೇ ಈ ಕಲಿಯುಗದಲ್ಲಿ ಕೃತಾರ್ಥರೆಂದು ತಿಳಿಯುವದು.

ವರ್ಜ್ಯಂಪರ್ಯುಷಿತಂಪುಷ್ಪಂ ನವರ್ಜ್ಯಂತುಲಸೀದಲಂ । ನಾಕ್ಷತೈ
ರರ್ಚಯೇದ್ವಿಷ್ಣುಂ ನಶಂಖಂಶಂಖವಾರಿಣಾ ॥

ತಾತ್ಪರ್ಯ॥ ಪುಷ್ಪಾದಿಗಳು ಪರ್ಯುಷಿತ (ಹಳೇದು) ವಾದರೆ ಅರ್ಚನೆ ಯಲ್ಲಿ ವರ್ಜನೆ ಮಾಡತಕ್ಕವುಗಳು, ತುಲಸಿಯು ಪರ್ಯುಷಿತವಾದಾಗ್ಯೂ ಬಾಧಕವಲ್ಲವು.

ಪರ್ಯುಷಿತವಾದ ತುಲಸಿಯಿಂದಲಾದರೂ ಹರ್ಯರ್ಚನೆ ಮಾಡಬಹುದೇ ವಿನಹಾ ಅಕ್ಷತೆಗಳಿಂದ ಅರ್ಚಿಸಬಾರದು. ಇದರಂತೆ ಶಂಖೋದಕದಿಂದ ರುದ್ರಾಭಿಷೇಕ ಮಾಡಬಾರದು.

## ಅಥ ಉಪಾದಾನಪ್ರಯೋಗಃ.

ರಡನೇ ಯಾಮ ಪ್ರಾಪ್ತವಾದ ಬಳಿಕ,

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿ ಸ್ವಶೇಷತೈಕ
ರಸೇನಮಯಾ, ಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕ
ಪ್ರಯೋಜನಾಯಪರಮಪುರುಷಸ್ಸರ್ವಶೇಷೀ ಸ್ವಶೇಷಭೂ
ತಮಿದಂಉಪಾದಾನಾಖ್ಯಂ ಕರ್ಮಸ್ವಪ್ರೀತಯೇಸ್ವಯಮೇವ
ಕಾರಯತಿ ॥

ಎಂದು ಸಾತ್ವಿಕತ್ಯಾಗವಂ ಮಾಡಿ, ಸಮಿತ್ತು, ಲಸೀ, ದರ್ಭಾದಿಗಳನ್ನು ಸಂಗ್ರಹಿಸುವದು.

ಸಮಿಧಃಪಾವನಾಃಪೂತಾಃ ಶ್ಚಿದ್ಮಯುಕ್ತಾಃ ಪರಂತ್ವಪಃ । ಯು
ಷ್ಮಾನ್ಹರಾಮಿಪೋವರ್ಥಂ ಅಸ್ಮಾನ್ರಕ್ಷಂತುಸರ್ವದಾ ॥

ಎಂದು ಈ ಮಂತ್ರದಿಂದ ಸಮಿದಾಹರಣ ಮಾಡುವದು.

ತುಲಸ್ಯಮೃತಜನ್ಮಾಸಿಸದಾತ್ವಂಕೇಶವಪ್ರಿಯೇ । ಕೇಶವಾರ್ಥಂ
ಲುನಾಮಿತ್ವಾಂವರದಾಭವಶೋಭನೇ ॥

ಮೋಕ್ಷೈಕಹೇತೋರ್ಧರಣಿಪ್ರಸೂತೇ ವಿಷ್ಣೋಸ್ಸಮಸ್ತಸ್ಯಗು
ರೋಃಪ್ರಿಯೇತೇ । ಆರಾಧನಾರ್ಥಂಪುರುಷೋತ್ತಮಸ್ಯ ಲು
ನಾಮಿಪತ್ರಂತುಲಸಿಕ್ಷಮಸ್ವ ।

ಪ್ರಸೀದಮಮದೇವೇಶಿ ಪ್ರಸೀದಹರಿವಲ್ಲಭೇ । ಕ್ಷೀರೋದಮಥ
ನೋದ್ಭೂತೇ ತುಲಸಿತ್ವಂಪ್ರಸೀದಮೇ ॥

ಈ ಮಂತ್ರಗಳಿಂದ ಅನಿಷಿದ್ಧವಾದ ದಿವಸಗಳಲ್ಲಿ ನಾಲ್ಕು ಅಥವಾ ಆರು ಪತ್ರಗಳಿಂದ ಕೂಡಿರುವ ತುಳಸೀದಳವನ್ನು ಗ್ರಹಿಸುವದು.

ಅಲ್ಲದೇ, ಅಪರಿಶುದ್ಧವಾದ ಸ್ಥಳದಲ್ಲಿರುವ ಕ್ರೂರವಾದ ವಾಸನೆಯುಳ್ಳ, ವಾಸನೆಯೇ ಇಲ್ಲದಿರುವ, ಸ್ಮಶಾನಾದಿ ಕ್ಷೇತ್ರಗಳಲ್ಲಿರುವ ಕ್ರಿಮ್ಯಾದಿಗಳಿಂದ ದೂಷಿತವಾದ ಪತ್ರಪುಷ್ಪಾದಿಗಳನ್ನೂ, ಕೃಷ್ಣತುಲಸಿಯನ್ನು ವಿನಾ, ಕಪ್ಪಾದ ಪುಷ್ಪಾದಿಗಳನ್ನೂ, ಕರವೀರ (ಕಣಿಗಲು ಇದು ಗೃಹಾರ್ಚನೆಗೆ ಕೂಡದು) ಪುಷ್ಪವನ್ನೂ ಬಿಡತಕ್ಕದ್ದು.

ರಮಣೀಯವಾಗಿಯೂ, ಸುಗಂಧವುಳ್ಳದ್ದಾಗಿಯೂ, ಶುಭ್ರ (ಬಿಳಿವು) ವಾಗಿಯೂ, ಅಥವಾ ಕೆಂಪಾಗಿಯೂ ಇರುವ ಪುಷ್ಪಗಳನ್ನು ಸ್ವೀಕರಿಸತಕ್ಕದ್ದು. ಪುಷ್ಪಫಲಾದಿಗಳನ್ನು ಅಸ್ತ್ರಮಂತ್ರದಿಂದ ಗ್ರಹಿಸುವದು.

## ಕುಶಾಹರಣ ಪ್ರಯೋಗಃ.

ಶುಚೌದೇಶೇಶುಚಿರ್ಭೂತ್ವಾ ಸ್ಥಿತಃಪೂರ್ವೋತ್ತರಾಮುಖಃ ।
ಹುಂಕಾರೇಣೈವಮಂತ್ರೇಣ ಕುಶಾನ್ಸ್ಪೃಶ್ಯಾದ್ವಿಜೋತ್ತಮಃ ॥

ತಾತ್ಪರ್ಯ॥ ಶುದ್ಧವಾದ ಪ್ರದೇಶದಲ್ಲಿ ಪರಿಶುದ್ಧನಾದವನಾಗಿ, ಪೂರ್ವ ಅಥವಾ ಉತ್ತರಾಭಿಮುಖನಾಗಿ, ಹುಂ ಎಂಬ ಮಂತ್ರದಿಂದ ದರ್ಭಗಳನ್ನ ಸ್ಪರ್ಶಮಾಡಿ.

ವಿರಿಂಚೇನಸಹೋತ್ಪನ್ನಪರಮೇಷ್ಠಿನಿಸರ್ಗಜ । ನುದಸರ್ವಾಣಿ
ಪಾಪಾನಿ ದರ್ಭಸ್ವಸ್ತಿಕರೋಭವ ॥

ಎಂಬ ಮಂತ್ರದಿಂದ ದರ್ಭಾಹರಣ ಮಾಡುವದು.

ಸ್ಮೃತಿರತ್ನಾಕರೇ॥ ಹಾರೀತಃ। ಮಾಸೇನಭಸ್ಯಮಾವಾಸ್ಯಾತಸ್ಯಾಂ
ದರ್ಭೋಚ್ಚಯೋಮತಃ । ಅಯಾತಯಾಮಾಸ್ತೇದರ್ಭಾಃ
ನಿಯೋಜ್ಯಾಸ್ಯುಃಪುನಃಪುನಃ ॥

ಸ್ಮೃತಿರತ್ನಾವಳ್ಯಾಂ॥ ಅಮಾಸ್ಯಾಸಿತಮಾಘೇ ಕುಶೋತ್ಪಾದಃ ಪ್ರಶಸ್ಯತೇ॥

ಧರ್ಮಸಿಂಧುಸಾರೇ॥ ಕೇಚಿದ್ಭಾದ್ರಮಾಯಾಂ ದರ್ಭಗ್ರಹಣ ಮಾಹುಃ, ಇತಿ.

ತಾತ್ಪರ್ಯ॥ ಶ್ರಾವಣಾಮಾವಾಸ್ಯೆಯಲ್ಲಿ ದರ್ಭಾಹರಣ ಮಾಡಿದರೆ ಸಂವತ್ಸರಪರ್ಯಂತವೂ ಆ ದರ್ಭಗಳನ್ನೇ ಉಪಯೋಗಿಸಬಹುದು.

ಪ್ರತ್ಯಹದಲ್ಲಿಯೂ, ತರಲ್ಪಡುವ ದರ್ಭಗಳು ಪ್ರಶಸ್ತವು.

ಕೆಲವರು ಭಾದ್ರಪದಬಹುಳ ಅಮಾವಾಸ್ಯೆಯಲ್ಲಿಯೂ ವತ್ಸರ ದರ್ಭಗ್ರಹಣ ಮಾಡಬಹುದೆನ್ನುವರು.

ಅಲ್ಲದೇ, ಮಾಘಬಹುಳ ಅಮಾವಾಸ್ಯೆಯಲ್ಲಿ ದರ್ಭಾಹರಣ ಮಾಡಿದರೆ ಆರುತಿಂಗಳು ಉಪಯೋಗಿಸಬಹುದೆಂದೂ, ಅಮಾವಾಸ್ಯೆಯಲ್ಲಿ ತಂದ ದರ್ಭವು ಒಂದುತಿಂಗಳು ಉಪಯೋಗಿಸಬಹುದೆಂದೂ, ಭಾನುವಾರ ತರಲ್ಪಡುವ ದರ್ಭವು ಒಂದುವಾರ ಉಪಯೋಗಾರ್ಹವೆಂದೂ ಸ್ಮೃತ್ಯಂತರದಲ್ಲಿರುವದಾಗಿ ಹೇಳುತ್ತಾರೆ.

## ಅಥ ಸದಸತ್ಪ್ರತಿಗ್ರಹ ಕ್ರಮಃ.

ದ್ವಿಜಾತಿಭ್ಯೋ ಧನಂ ಲಿಪ್ಸೇತ್ಪ್ರಶಸ್ತೇಭ್ಯೋ ವಿಶೇಷತಃ। ಅಪಿ ವಾ ಜಾತಿಮಾತ್ರೇಭ್ಯೋ ನ ತು ಶೂದ್ರಾತ್ಕಥಂಚನ।

ತಾತ್ಪರ್ಯ॥ ಸ್ವಧರ್ಮವರ್ತಿಗಳಾದ ಬ್ರಾಹ್ಮಣಾದಿಗಳಿಂದ ದಾನ ತೆಗೆದುಕೊಳ್ಳಬಹುದು. ಅದು ಸಂಭವಿಸದ ಪಕ್ಷ, ಜಾತಿಮಾತ್ರರಾದ ಬ್ರಾಹ್ಮಣಾದಿ ತ್ರೈವರ್ಣಿಕರಿಂದ ತೆಗೆದುಕೊಳ್ಳಬಹುದು. ಎಂಥಾ ಕಷ್ಟಕಾಲದಲ್ಲಿಯೂ ಶೂದ್ರನಿಂದ ದಾನ ತೆಗೆದುಕೊಳ್ಳಬಾರದು.

ಆಪತ್ತಿನಿಂದ ಅಸತ್ತುಗಳಿಂದ ದಾನ ತೆಗೆದುಕೊಳ್ಳುವ ಪಕ್ಷದಲ್ಲಿ,

ಯಮಃ॥ [illegible]।
ಪ್ರತಿಗ್ರಹೀತ್ವಾ [illegible]।

ತಾತ್ಪರ್ಯ॥ [illegible]

ರೋ, ಹಾಗೆಯೇ ಹೇಳಿ. ಯಾರು ದಾನ ತೆಗೆದುಕೊಳ್ಳುವರೋ, ಅವರುಗಳಿಗೆ ಯಮಲೋಕವಿಲ್ಲವು.

ಇದರಂತೆ ಮನಸ್ಸಮಾಧಾನಾದಿಗಳು ಅಂತರಂಗದಾನವೆನಿಸಿಕೊಳ್ಳುವವು.

ಭಗವನೇವಸ್ವನಿಯಾಮ್ಯಸ್ವರೂಪಾದಿಕೇನಮಯಾ, ಸ್ವಾರಾಧನೈಕಪ್ರಯೋಜನಾಯ ಉಪಾದಾನಾಭ್ಯಾಂ ಕರ್ಮಕಾರಿತವಾನ್ ಅನೇನಪ್ರಿಯತಾಂವಾಸುದೇವಃ ಇತ್ಯುಪಾದಾನಂ ॥

## ಇಜ್ಯಾ.

## ಅಥ ಮಾಧ್ಯಾಹ್ನಿಕ ಸ್ನಾನವಿಧಿಃ.

ಭರದ್ವಾಜಃ॥ ಸ್ನಾನಮುಕ್ತಂತ್ರಿಸಂಧ್ಯಾಸುಯತೀನಾಂಬ್ರಹ್ಮಚಾರಿಣಾಂ। ಪ್ರಾತಃಮಧ್ಯಾಹ್ನಯೋಃಸ್ನಾನಂ ವಾನಪ್ರಸ್ಥಗೃಹಸ್ಥಯೋಃ ॥

ತಾತ್ಪರ್ಯ॥ ಸನ್ಯಾಸಿಗಳಿಗೂ, ಬ್ರಹ್ಮಚಾರಿಗಳಿಗೂ, ತ್ರಿಸಂಧ್ಯೆಗಳಲ್ಲಿಯೂ ಸ್ನಾನವು ಹೇಳಲ್ಪಟ್ಟಿರುವದು.

ವಾನಪ್ರಸ್ಥ ಗೃಹಸ್ಥರುಗಳಿಗೆ ಪ್ರಾತಃ ಮಧ್ಯಾಹ್ನಗಳಲ್ಲಿ ಮಾತ್ರ ಸ್ನಾನವು ಹೇಳಲ್ಪಟ್ಟಿರುವದು.

ವ್ಯಾಸಃ॥ ಮಂತ್ರಪೂತೈರ್ಜಲೈಃಸ್ನಾನಂ ಪ್ರಾಹುಃಸ್ನಾನಂಮಹರ್ಷಯಃ। ನವೃಥಾವಾರಿಮಗ್ನಾನಾಂಯಾದಸಾಮಿವತತ್ಫಲಂ॥

ತಾತ್ಪರ್ಯ॥ ಮಂತ್ರಗಳಿಂದ ಶುದ್ಧಿಹೊಂದಿದ ಉದಕದಲ್ಲಿ ಶಾಸ್ತ್ರೋಕ್ತ ನಿಯಮದೊಡನೆ ಮಾಡಲ್ಪಡುವ ಸ್ನಾನವೇ ಸ್ನಾನವು.

ಹಾಗಲ್ಲದೇ ಸುಮ್ಮನೇ ನೀರಿನಲ್ಲಿ ಮುಳಗಿದ್ದಾದರೆ, ನೀರಿನಲ್ಲಿ ಸರ್ವದಾ ಇರುವ ಮತ್ಸ್ಯಾದಿಗಳಿಗೆ ಹೇಗೋ ಹಾಗೆ ಫಲವಿಲ್ಲವು.

ವಿಷ್ಣುಃ॥ ಬ್ರಹ್ಮಕ್ಷತ್ರವಿಶಾಂಚೈವ ಮಂತ್ರವತ್ಸ್ನಾನಮಿಷ್ಯತೇ। ತೂಷ್ಣೀಮೇವಹಿಶೂದ್ರಾಣಾಂ ಸ್ತ್ರೀಣಾಂಚಕುರುನಂದನ॥

ತಾತ್ಪರ್ಯ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರುಗಳಿಗೆ ಮಂತ್ರಪುರಸ್ಸರವಾದ ಸ್ನಾನವೇ ಚೋದಿತವಾಗಿರುವದು.

ಸ್ತ್ರೀಯರುಗಳಿಗೂ, ಶೂದ್ರರಿಗೂ, ತೂಷ್ಣೀಂ (ಸುಮ್ಮನೆ) ಸ್ನಾನವು ಹೇಳಲ್ಪಟ್ಟಿದೆ.

ಹಾರೀತಃ॥ ಪ್ರಾತಃಸ್ನಾತೋಽಪಿಮಧ್ಯಾಹ್ನೇಪುನಃಸ್ನಾನಂಸಮಾಚರೇತ್ ॥

ತಾತ್ಪರ್ಯ॥ ಪ್ರಾತಃಸ್ನಾನ ಮಾಡಿದ್ದಾಗ್ಯೂ ಮಧ್ಯಾಹ್ನ ಪುನಃ ಸ್ನಾನವನ್ನ ಆಚರಿಸಬೇಕು.

ಕೃತಂಚ, ಕರಿಷ್ಯಾಮಿ, ಭಗವನ್ನಿತ್ಯೇನ, ಭಗವತ್ಪ್ರೀತ್ಯರ್ಥೇನ ಮಹಾವಿಭೂತಿಚಾತುರಾತ್ಮ್ಯಭಗವದ್ವಾಸುದೇವಪಾದಾರವಿಂದಾರ್ಚನೇನಇಜ್ಯಯಾಭಗವತಃಕರ್ಮಣಾಭಗವಂತಂವಾಸುದೇವಮರ್ಚಯಿಷ್ಯಾಮಿ, ಇತಿಸಂಕಲ್ಪ್ಯ, ಭಗವತೋಬಲೇನ ಭಗವತೋವೀರ್ಯೇಣ, ಭಗವತಸ್ತೇಜಸಾ, ಭಗವತಃಕರ್ಮಣಾ, ಭಗವತಃಕರ್ಮಕರಿಷ್ಯಾಮಿ, ಇತಿಬಲಮಂತ್ರಮನುಸಂಧಾಯ ॥

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರಸೇನಾನೇನಾತ್ಮನಾಮಯಾ, ಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರಯೋಜನಾಯಪರಮಪುರುಷಸ್ಸರ್ವಶೇಷೀ ಸ್ವಶೇಷಭೂತಮಿದಂ, ಇಜ್ಯಾಖ್ಯಂಕರ್ಮಸ್ವಸ್ಮೈಸ್ವಪ್ರೀತಯೇಸ್ವಯಮೇವಕಾರಯತಿ,— ಇತ್ಯನುಸಂಧಾಯ.

## ಮಧ್ಯಾಹ್ನಿಕ ಸ್ನಾನಪ್ರಯೋಗಃ.

ತೀರ್ಥಂಗತ್ವಾ, ತೀರಂ, ಸಂಶೋಧ್ಯ, ಸುಪ್ರಕ್ಷಾಳಿತಪಾಣಿಪಾದಃ ಸಮಾಚಮ್ಯ, ಪ್ರಾಙ್ಮುಖಉದಙ್ಮುಖೋವಾಆಸೀನಃಪವಿತ್ರಪಾಣಿ (೧) ಪ್ರಾಣಾನಾಯಮ್ಯ, ಅಂಜಲಿಂಬಧ್ವಾ, ಗುರುಪರಂಪರಾಸ್ಮರಣಪೂರ್ವಕಂ. ಶ್ರೀವಾನ್ವೆಂಕಟೇಶಾಚಾರ್ಯೈಃ, ಇ

(೧) ಪ್ರಾತಃಸ್ನಾನ ಪ್ರಯೋಗದಲ್ಲಿ ಸಂಕಲ್ಪಾದಿ ಕ್ರಮಗಳನ್ನೇ ಪವಸ್ಥಾನ್ನಾಗಿ ನೋಡತಕ್ಕದ್ದು.

ತ್ಯಾರ್ಥೇ, ಅಸ್ಯಾಂಶುಭತಿಥೌಶ್ರೀಭಗವದಾಜ್ಞಯಾಭಗವತ್ಪ್ರೀತ್ಯರ್ಥಂ, ಕರ್ಮಣ್ಯತಾಸಿದ್ಧ್ಯರ್ಥಂ, ಅಸ್ಮಿಂತೀರ್ಥೇ ಸದ್ಯಾಂವಾ, ಮಾಧ್ಯಾಹ್ನಿಕಸ್ನಾನಮಹಂಕರಿಷ್ಯೇ, ಇತಿಸಂಕಲ್ಪಃ.

ಸಮಸ್ತಜಗದಾಧಾರಶಂಖಚಕ್ರಗದಾಧರ । ದೇಹಿದೇವಮಮಾನುಜ್ಞಾಂಯುಷ್ಮತ್ತೀರ್ಥನಿಷೇವಣೇ,—ಇತ್ಯುಕ್ತ್ವಾ ॥

ವೀರ್ಯಾಯಾಸ್ತ್ರಾಯಫಟ್, ಎಂದು ಅಸ್ತ್ರಮಂತ್ರದಿಂದ ಮೂಲಮಂತ್ರದೊಡನೆ ಶುದ್ಧವಾದ ಪ್ರದೇಶದಲ್ಲಿ, ಮೃತ್ತನ್ನ ಸಂಗ್ರಹಿಸಿ, ನ್ಯೂನಾ (ಕಮ್ಮಿ) ಧಿಕ ಭಾಗದಿಂದ ಎರಡು ಭಾಗಮಾಡಿ, ಶುದ್ಧವಾದ ತೀರ (ದಡ) ದಲ್ಲಿಟ್ಟು, ಪ್ರೋಕ್ಷಿಸಿ, ಅಧಿಕವಾದ ಭಾಗದಿಂದ ತನ್ನ ದೇಹವನ್ನ ಚನ್ನಾಗಿ ತೊಳೆದು, ತ್ರಿರಾವೃತ್ತಿ ಮುಳಗಿ, ಎದ್ದು ಕುಳಿತು ಆಚಮನಂಗೈದು, ಭಗವಂತನನ್ನ ಧ್ಯಾನಿಸುವನಾಗಿ ಇಪ್ಪತ್ತಯಿದಾವೃತ್ತಿ ಆವರ್ತಿತವಾದ ಮೂಲಮಂತ್ರ (ಅಷ್ಟಾಕ್ಷರಿ) ದಿಂದ ಪ್ರಾಣಾಯಾಮತ್ರಯವಂ ಮಾಡಿ, ಇನ್ನೊಂದು ಮೃದ್ಭಾಗವಂ ತೆಗೆದುಕೊಂಡು ಬಲಗೈಯಿಂದ ಎಡಹಸ್ತತಲದಲ್ಲಿ, ಆದಿ, ಮಧ್ಯ, ಅಂತಗಳಲ್ಲಿ, ಮೂರುಭಾಗವಾಗಿ ಇಟ್ಟು, ಬೇರೆ, ಬೇರೆ, ಪ್ರೋಕ್ಷಿಸಿ, ಮೂಲಮಂತ್ರದಿಂದ ಮಂತ್ರಿಸಿ, ಮೊದಲುಭಾಗವನ್ನ, ವೀರ್ಯಾಯಾಸ್ತ್ರಾಯಫಟ್, ಎಂದು ಅಭಿಮಂತ್ರಿಸಿ, ದಿಕ್ಕುಗಳಲ್ಲಿಯೂ, ವಿದಿಕ್ಕುಗಳಲ್ಲಿಯೂ, ಮೇಲೆ, ಕೆಳಗೆ, ಎಸೆಯುವದು, (೮ ದಿಕ್ಕುಗಳಲ್ಲಿಯೂ ಮೇಲೆ ಕೆಳಗೆ ಸಹಾ ಎಸೆಯುವದು) ಅನಂತರ ಮಧ್ಯಮಭಾಗವನ್ನ ತೆಗೆದುಕೊಂಡು ಮೂಲಮಂತ್ರದಿಂದ ಉದಕಮಧ್ಯದಲ್ಲಿ, ಆವಾಹಿಸಲ್ಪಡುವ ಗಂಗೆಗೆ ಪೀಠವನ್ನ ಕಲ್ಪಿಸುವದು.

ಕೊನೆಯ ಭಾಗವನ್ನ ತೆಗೆದುಕೊಂಡು ಹಸ್ತಗಳಿಂದ ಮೂಲ ಮಂತ್ರದೊಡನೆ ಸ್ವಶರೀರವನ್ನ ಅನುಲೇಪನ ಮಾಡಿಕೊಂಡು, ಜಲವನ್ನ ಪ್ರವೇಶಿಸಿ, ಸಂಕಲ್ಪಿತವಾದ ಪೀಠದಲ್ಲಿ,

ಆವಾಹಯಾಮಿತ್ವಾಂದೇವಿಸ್ನಾನಾರ್ಥಮಿಹಸುಂದರಿ ।
ಏಹಿಗಂಗೇನಮಸ್ತುಭ್ಯಂಸರ್ವತೀರ್ಥಸಮನ್ವಿತೇ ॥

ಎಂದು ಉದಕಾಂಜಲಿಯಿಂದ ಗಂಗೆಯನ್ನ ಆವಾಹನಮಾಡಿ, ಉದಕಾಂಜಲಿಯಂ ಗೃಹಿಸಿ.

ವಿಷ್ಣುಪಾದಾಂಗುಷ್ಠನಖಸ್ರೋತೋವಿನಿಸ್ಸೃತೇ ।
ತದ್ಭಕ್ತಿವಿಘ್ನರೂಪಾತ್ವಂಗಂಗೇಮಾಂಮೋಚಯೈನಸಃ ॥

ಎಂದು ಅರ್ಘ್ಯವನ್ನ ಸಮರ್ಪಿಸಿ.

ಉದಕಾಂಜಲಿಯನ್ನ ತೆಗೆದುಕೊಂಡು, ಮೂಲಮಂತ್ರದಿಂದ ಜಪಾವರ್ತಿ ಅಭಿಮಂತ್ರಣಮಾಡಿ, ಶಿರಸ್ಸಿಗೆ, ಸೇಚನೆಮಾಡುವದು (ಎರಚಿಕೊಳ್ಳುವದು) ಹೀಗೆ ತ್ರಿರಾವೃತ್ತಿ ಮಾಡಿ, ದಕ್ಷಿಣಹಸ್ತದಿಂದ ಜಲವನ್ನ ಗ್ರಹಿಸಿ ಮೂರಾವೃತ್ತಿ ಮೂಲಮಂತ್ರದಿಂದ ಅಭಿಮಂತ್ರಣಮಾಡಿ ಪಾನಮಾಡುವದು. ನಂತರ ಆಚಮನಮಾಡಿ, ಮೂಲಮಂತ್ರದಿಂದ ಸ್ನಾನಪ್ರೋಕ್ಷಿಸಿಕೊಂಡು ತೀರ್ಥದಲ್ಲಿ ಮುಳಗಿ ಭಗವತ್ಪಾದಾರವಿಂದದಲ್ಲಿ ಶಿರಸ್ಸನ್ನ ಇಟ್ಟಂತೆ ಭಾವಿಸಿಕೊಂಡು ಯಾವತ್‌ಶಕ್ತಿ ಮೂಲಮಂತ್ರವನ್ನ ಜಪಿಸಿ, ಸೂರ್ಯಮಂಡಲಾಂತರ್ವರ್ತಿಯಾದ ಭಗವಂತನನ್ನ ಧ್ಯಾನಿಸಿ ನೋಡಿ ಮೇಲಕ್ಕೆ ಏಳುವದು.

ಅನಂತರ, ಆಚಮನ, ಭಗವತ್ಸ್ತೋತ್ರ, ವಸ್ತ್ರಧಾರಣ, * ಮಂತ್ರಸ್ನಾನ, ಮಾನಸಿಕ ಸ್ನಾನಾದಿಗಳನ್ನ ಪ್ರಾತಃಸ್ನಾನಪ್ರಕರಣದಲ್ಲಿ ಹೇಳಿರುವಂತೆಯೇ ಅನುಷ್ಠಿಸತಕ್ಕದ್ದು.

## ಅಥ ಮಾಧ್ಯಾಹ್ನಿಕ ಸಂಧ್ಯಾಪ್ರಯೋಗಃ.

ದ್ವಿರಾಚಮ್ಯ, ಪ್ರಾಣಾನಾಯಮ್ಯ, ಶ್ರೀ ಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಮಾಧ್ಯಾಹ್ನಿಕ ಸಂಧ್ಯಾಮುಪಾಸಿಷ್ಯೇ, ಇತಿಸಂಕಲ್ಪ್ಯ,

೧ ಆಪೋಹಿಷ್ಠೇತಿಮಂತ್ರಸ್ಯ, ಇತ್ಯಾರಭ್ಯ, ಆತ್ಮಾ ಸಂ... ಇತಿಪರ್ಯಂತಂ, ಪ್ರಾತಸ್ಸಂಧ್ಯಾವಂದನವತ್ಕಾರ್ಯಂ

---

* ಸ್ನಾನಪ್ರಕರಣದಲ್ಲಿ ಬರೆಯಲ್ಪಡುವ ಶ್ಲೋಕ, ಶ್ಲೋಕಾರ್ಥ... ನಾರಾಯಣಾದಿ ಪ್ರಯೋಗಗಳೂ, ಊರ್ಧ್ವಪುಂಡ್ರಧಾರಣ ಕ್ರಮವೂ, ಪ್ರಾತಃಸ್ನಾನ ಪ್ರಕರಣದಲ್ಲಿ ವಿವರಿಸಿರುತ್ತಾಗಿ ಇಲ್ಲಿ ಸಂಗ್ರಹಿಸಿ ಬರೆದಿರುತ್ತೆ.

೧ ಪ್ರಾತಸ್ಸಂಧ್ಯಾ ಪ್ರಕರಣದಲ್ಲಿ, ಇಲ್ಲಿ ಬರೆಯಲ್ಪಡದಿರುವ ಸ್ನಾನ ಪ್ರಮಾಣಗಳು ನೋಡಲ್ಪಡತಕ್ಕದ್ದು.

ಆಪಃಪುನಂತ್ವಿತ್ಯನುವಾಕಸ್ಯ, ಆಪಋಷಿಃ, ಅನುಷ್ಟುಪ್ ಛಂದಃ, ಬ್ರಹ್ಮಣಸ್ಪತಿರ್ದೇವತಾ, ಅಪಾಂಪ್ರಾಶನೇವಿನಿಯೋಗಃ, ಇತ್ಯುಕ್ತ್ವಾ, ಹಸ್ತೇ ಆಚಮನವಜ್ಜಲಂಗೃಹೀತ್ವಾ,

ಆಪಃಪುನಂತುಪೃಥಿವೀಂ ಪೃಥಿವೀಪೂತಾಪುನಾತುಮಾಂ । ಪುನಂತುಬ್ರಹ್ಮಣಸ್ಪತಿರ್ಬ್ರಹ್ಮ ಪೂತಾಪುನಾತುಮಾಂ । ಯದುಚ್ಛಿಷ್ಟಮಭೋಜ್ಯಂ ಯದ್ವಾದುಶ್ಚರಿತಂಮಮ । ಸರ್ವಂಪುನಂತುಮಾಮಾಪೋ । ಸತಾಂಚಪ್ರತಿಗ್ರಹಗ್ಂ ಸ್ವಾಹಾ ॥

ಇತ್ಯನುವಾಕೇನ ಅಪಶ್ಚುಳಕೇನ ಪ್ರಾಶ್ಯ ಆಚಮ್ಯ॥

ಪದಂ॥ ಆಪಃ, ಪುನಂತು, ಪೃಥಿವೀಂ, ಪೃಥಿವೀ, ಪೂತಾ, ಪುನಾತು, ಮಾಂ, ಪುನಂತು, ಬ್ರಹ್ಮಣಸ್ಪತಿಃ, ಬ್ರಹ್ಮಪೂತಾ, ಪುನಾತು, ಮಾಂ, ಯತ್, ಉಚ್ಛಿಷ್ಟಂ, ಅಭೋಜ್ಯಂ, ಯದ್ವಾ, ದುಶ್ಚರಿತಂ, ಮಮ, ಸರ್ವಂ, ಪುನಂತು, ಮಾಂ, ಆಪಃ, ಅಸತಾಂ, ಚ, ಪ್ರತಿಗ್ರಹಂ, ಸ್ವಾಹಾ.

ಅರ್ಥ ॥ ಆಪಃ-ವರ್ಷೋದಕಗಳು, ಪೃಥಿವೀಂ-ಭೂಮಿಯನ್ನು, ಪುನಂತು-ಶುದ್ಧಮಾಡ ನವು, ಪೂತಾ-ಪೃಥಿವೀ, ಹೀಗೆ ಶುದ್ಧವಾದ ಭೂಮಿಯು, ಮಾಂ-ನನ್ನನ್ನ, ಪುನಾತು-ಶುದ್ಧನನ್ನಾಗಿಮಾಡಲಿ, ಬ್ರಹ್ಮಣಸ್ಪತಿಃ-ಪ್ರಣವ ಪ್ರತಿಪಾದ್ಯನಾದ ಪರಮಾತ್ಮನು, ಮಾಂ-ನನ್ನನ್ನು, ಪುನಂತು-ಶುದ್ಧಿಮಾಡಲಿ, (ಶುದ್ಧಿಮಾಡುವನೆಂದು ಭಾವ ಎಲ್ಲಿಯೂ ಹೀಗೆಯೇ ತಿಳಿಯುವದು) ಅಥವಾ, ಬ್ರಹ್ಮಣಸ್ಪತಿಃ-ಬ್ರಹ್ಮನಿಗೆ ಪ್ರಭುವಾದ ಪರಮಾತ್ಮನು, ನನ್ನನ್ನು ಶುದ್ಧಿಮಾಡಲಿ, ಬ್ರಹ್ಮಪೂತಾ-ಪರಮಾತ್ಮನಿಂದ ಪರಿಶುದ್ಧವಾದ ಭೂಮಿಯು, ಅಥವಾ ವರ್ಷೋದಕಂಗಳು, ಮಾಂ-ನನ್ನನ್ನ, ಪುನಾತು-ಪರಿಶುದ್ಧಮಾಡಲಿ, ಉಚ್ಛಿಷ್ಟಂ-ಪುರುಷಾಂತರ ಭುಕ್ತಶೇಷವಾದ, ಯತ್-ಯಾವ, ಅನ್ನವು (ಭುಕ್ತಂ-ನನ್ನಿಂದ ಭೋಜನ ಮಾಡಲ್ಪಟ್ಟಿರುವದೋ) ಅಭೋಜ್ಯಂ-ಭೋಜನ ಮಾಡಬಾರದ ಅನ್ನಾದಿಪದಾರ್ಥವು, (ಭುಕ್ತಂ-ತಿನ್ನಲ್ಪಟ್ಟಿರುವದೋ) ಮಮ-ನನ್ನ

ಯದ್ವಾದುಶ್ಚರಿತಂ-ಇನ್ನೂ ಇತರವಾದ ಪಾಪವೋ, ಅಸತಾಂ-ಅಸತ್ಪು ರುಷರುಗಳ, ಪ್ರತಿಗ್ರಹಂಚ-ದಾನವೋ, ಸರ್ವಂ-ಇದೆಲ್ಲವಂ, ಆಪಃ-ಉದ ಕಂಗಳು, ಪುನಂತು-ಶುದ್ಧವಮಾಡಲಿ, ಮಾಂ-ನನ್ನನ್ನೂ, ಪುನಂತು-ಶು ದ್ಧನನ್ನಾಗಿಮಾಡಲಿ, ಸ್ವಾಹಾ-ಸ್ವಾಹಾ ಎಂದು ಆತ್ಮಸಮರ್ಪಣೆಯು.

ತಾತ್ಪರ್ಯ॥ ಪರಿಶುದ್ಧಸ್ವರೂಪವುಳ್ಳವುಗಳಾದ ಪ್ರಯುಕ್ತ, ವಶೋದ ಕಗಳು ಭೂಮಿಯಂ ಶುದ್ಧಿಮಾಡುವವು. ಇಂತಹ ಪೃಥ್ವೀಗತವಾದ ಜಲಪ್ರಾಶನ ಮಾಡುವದರಿಂದ ಭೂಮಿಯು ನನ್ನನ್ನ ಶುದ್ಧನನ್ನಾಗಿ ಮಾ ಡುವದು. (ಪರಮಾತ್ಮನಿಗೆ ಉದಕಗಳು ವಿಶೇಷವಾಗಿ ವಾಸಸ್ಥಾನವಾದ್ದ ರಿಂದಲೂ, ಭೂದೇವಿಯು ಪ್ರಾಣಕಾಂತೆಯಾದ ಪ್ರಯುಕ್ತವೂ ಪಾವನ ಕರತ್ವವು ಎರಡಕ್ಕೂ ಹೇಳಲ್ಪಟ್ಟಿರುವದೆಂದು ತಿಳಿಯತಕ್ಕದ್ದು.)

ಓಂಕಾರ ಪ್ರತಿಪಾದ್ಯನಾದ ಪರಮಾತ್ಮನೂ, ಆ ಪರಮಾತ್ಮನಿಂದ ಶುದ್ಧವಾದ ಭೂಮಿಯೂ, ಉದಕಗಳೂ, ನನ್ನನ್ನ ಶುದ್ಧನನ್ನಾಗಿ ಮಾಡ ಲಿ. ನನ್ನಿಂದ ಉಚ್ಛಿಷ್ಟ (ಎಂಜಲು) ಭೋಜನ, ಅಭೋಜ್ಯಾನ್ನ (ಜಾ ತಿ, ಆಶ್ರಯ, ನಿಮಿತ್ತಗಳಿಂ ದುಷ್ಟವಾದ ಅನ್ನವು. ಇದರ ಸ್ವರೂಪವು ಭೋಜನಪ್ರಕರಣದಲ್ಲಿ ಬರಿಯಲ್ಪಡುವದು) ಭೋಜನ ಮಾಡಲ್ಪಟ್ಟಿರು ವದೋ, ಅಲ್ಲದೇ, ಮನೋವಾಕ್ಕಾಯವೆಂಬ ತ್ರಿವಿಧಕರಣಂಗಳಿಂದ ಯಾವಯಾವ ದುಷ್ಕಾರ್ಯವು ಮಾಡಲ್ಪಟ್ಟಿರುವದೋ (ಪ್ರತಿಗ್ರಹ-ದಾನ ತೆಗೆದುಕೊಳ್ಳುವದು) ನರ್ಹರಾದ ದುರಾತ್ಮರಿಂದ, ಯಾವ ಪ್ರತಿಗ್ರಹವ ನ್ನ ಮಾಡಿರುವೆನೋ, ಈ ಸಕಲ ಕಾರಣಗಳಿಂದಲೂ ಪ್ರಾಪ್ತವಾದ ಸರ್ವ ದೋಷವನ್ನೂ ಉದಕಗಳು ಶುದ್ಧಿಮಾಡುವವು, (ಹೋಗಲಾಡಿಸುವವು.)

ಈ ಸರ್ವವಿಧ ಪಾಪಗಳ ನಿವೃತ್ತಿದ್ವಾರಾ ನನ್ನನ್ನೂ ಶುದ್ಧಿಮಾಡಲಿ (ಮಾಡುವವೆಂದು ಭಾವ.) ಇಲ್ಲಿ ಅಪ್, ಪೃಥಿವೀ, ಶಬ್ದಗಳಿಗೆ ಭಗವ ತ್ಪರತ್ವವನ್ನ ತಿಳಿಯತಕ್ಕದ್ದು.

೧ ಸ್ವಾಹಾ, ಹೀಗೆ ಸಕಲಪಾಪಗಳಿಂದಲೂ ಬಿಡಲ್ಪಟ್ಟ ನನ್ನನ್ನ, ಭಗ ವದಾರಾಧನಾಪೇಕ್ಷೆಯುಳ್ಳ ನಾನು, ಮೋಕ್ಷಪ್ರದನಾದ ಪರಮಾತ್ಮನಲ್ಲಿ ಸಮರ್ಪಿಸುವೆನು.

---

೧ ಇಲ್ಲಿ ಬರಿಯಬೇಕಾದ ವಿಶೇಷ ವಿಷಯಗಳು ಸೂರ್ಯಶ್ಚ ಎಂಬ ಅನುವಾ ಕಾರ್ಯದಲ್ಲಿ ವಿವರಿಸಲ್ಪಟ್ಟಿವೆ.

ದಧಿಕ್ರಾವಣ್ಣ ಇತಿಮಂತ್ರಸ್ಯ, ಇತ್ಯಾರಭ್ಯ ಪ್ರಾತಸ್ಸಂಧ್ಯಾವಂದನವತ್॥ ಏಕಮರ್ಘ್ಯಂ, ಅರ್ಘ್ಯದ್ವಯಂವಾಸಂಪ್ರದಾಯಾನುಗುಣಂದತ್ವಾ ಅರ್ಘ್ಯಾರ್ತ್ಪೂರ್ವಂ ಮಧ್ಯಾಹ್ನಾತಿಕ್ರಮೇ, ಪ್ರಾಣಾನಾಯಮ್ಯ॥ ಮಾಧ್ಯಾಹ್ನಿಕಸಂಧ್ಯಾಕಾಲಾತಿಕ್ರಮ ಪ್ರಾಯಶ್ಚಿತ್ತಾರ್ಥಂ, ಅರ್ಘ್ಯಪ್ರದಾನಂಕರಿಷ್ಯೇ, ಇತಿಸಂಕಲ್ಪ್ಯ, ಅರ್ಘ್ಯಂದತ್ವಾ, ಅನ್ಯತ್, ಪ್ರಾತಸ್ಸಂಧ್ಯಾವಂದನವತ್ ॥ ಶಕ್ತಶ್ಚೇತ್, ಸೂರ್ಯಾಭಿಮುಖಸ್ತಿಷ್ಠನ್ನೇವ, ಅಶಕ್ತಶ್ಚೇತ್ಪ್ರಾಙ್ಮುಖಆಸೀನಃಜಪೇತ್, ಆಸನಮಂತ್ರಸ್ಯ, ಇತ್ಯಾರಭ್ಯ, ಪ್ರಾತಸ್ಸಂಧ್ಯಾವಂದನವತ್ ॥

ಮಾಧ್ಯಾಹ್ನಿಕ ಸಂಧ್ಯಾಗಾಯತ್ರೀಮಂತ್ರಜಪಂಕರಿಷ್ಯೇ, ಇತಿ ಸಂಕಲ್ಪೇವಿಶೇಷಃ, ಆಯಾತ್ವಿತ್ಯನುವಾಕಸ್ಯ, ಇತ್ಯಾರಭ್ಯ ಪ್ರಾತಸ್ಸಂಧ್ಯಾವಂದನವತ್, ವಿಶೇಷಸ್ತು.

ಮಧ್ಯಂದಿನೇತುಸಾವಿತ್ರೀಂ ರವಿಮಂಡಲಮಧ್ಯಗಾಂ । ಯಜುರ್ವೇದಂವ್ಯಾಹರಂತೀಂ ಶ್ವೇತಾಂಶೂಲಕರಾಂಶಿವಾಂ ॥ ಯುವತೀಂರುದ್ರದೈವತ್ಯಾಂ ಧ್ಯಾಯಾಮಿವೃಷವಾಹನಾಂ॥ ಇತಿಧ್ಯಾತ್ವಾ. ಅನ್ಯತ್ಸರ್ವಂ (ಉಪಸ್ಥಾನಮಂತ್ರಪರ್ಯಂತ) ಪ್ರಾತಸ್ಸಂಧ್ಯಾವಂದನವತ್ ॥

೧ ಗಾಯತ್ರೀಧ್ಯಾನಂ ॥

ಮುಕ್ತಾವಿದ್ರುಮ ಹೇಮನೀಲಧವಳ ಚ್ಛಾಯೈರ್ಮುಖೈಸ್ತ್ರೀಕ್ಷಣೈರ್ಯುಕ್ತಾಮಿಂದುಕಲಾನಿಬದ್ಧಮಕುಟಾಂ ತತ್ವಾರ್ಥವರ್ಣಾತ್ಮಿಕಾಂ । ಗಾಯತ್ರೀಂವರದಾಭಯಾಂಕುಶಕಶಾ ಶ್ಶುಭ್ರಂಕಪಾಲಂಗುಣಂ ಶಂಖಂಚಕ್ರಮಥಾರವಿಂದಯುಗಳಂ ಹಸ್ತೈರ್ವಹಂತೀಂಭಜೇ ॥

---

೧ ಈ ಶ್ಲೋಕಾರ್ಥವು ಪ್ರಾತಸ್ಸಂಧ್ಯೆಯಲ್ಲಿ ವಿವರಿಸಲ್ಪಡಲಿಲ್ಲವಾಗಿ ಇಲ್ಲಿ ವಿವರಿಸಲ್ಪಡುವದು.

ಸ್ಮೃತಿರತ್ನಾಕರೇ ಗಾಯತ್ರೀಸ್ವರೂಪಮುಕ್ತಂ.

ಪಂಚವಕ್ತ್ರಾ ದಶಭುಜಾ ಷಡ್ಗರ್ಭಾ ಚರಣತ್ರಯೀ ।
ತ್ರಿಪಂಚದೃಷ್ಟಿರ್ಯಾ ಸಾ ಸ್ಯಾದ್ಗಾಯತ್ರೀ ಪರಮೇಶ್ವರೀ ॥

ತಾತ್ಪರ್ಯ॥ ಗಾಯತ್ರಿಯು, ಐದು ಮುಖದಿಂದಲೂ, ಮುಖಕ್ಕೆ ಮೂರು ನೇತ್ರಪ್ರಕಾರ ಹದಿನೈದು ಕಣ್ಣುಗಳಿಂದಲೂ, ಹತ್ತು ತೋಳು ಗಳಿಂದಲೂ, ಆರು ಉದರದಿಂದಲೂ, ಮೂರು ಪಾದಗಳಿಂದಲೂ, ಕೂಡಿ ರುವಳು.

ಈ ಗಾಯತ್ರಿಸ್ವರೂಪವೂ, ನ್ಯಾಸಾದಿ ಕ್ರಮವಿಶೇಷವೂ ಅನೇಕ ಗ್ರಂಥಗಳಲ್ಲಿ ಬಹುವಿಧವಾಗಿ ಹೇಳಲ್ಪಟ್ಟಿರುವದು, ಇಲ್ಲಿ ಸಂಗ್ರಹವಾಗಿ ಶ್ಲೋಕಾರ್ಥಮಾತ್ರ ವಿವರಿಸಲ್ಪಡುವದು.

ಶ್ಲೋಕತಾತ್ಪರ್ಯ॥ ಮುಕ್ತಾ, (ಮುತ್ತು) ವಿದ್ರುಮ (ಹವಳ) ಹೇ ಮ (ಸ್ವರ್ಣ) ನೀಲ, ಧವಳ (ಶುಭ್ರವರ್ಣ) ಛಾಯ (ಕಾಂತಿ) ವುಳ್ಳ ಮುಖಗಳಿಂದಲೂ ಮೂರು ನೇತ್ರಗಳಿಂ (ಒಂದೊಂದು ಮುಖಕ್ಕೆ ಮೂ ರು ಮೂರು ಕಣ್ಣುಗಳು) ದಲೂ, ಕೂಡಿರುವಳಾಗಿಯೂ, ಚಂದ್ರಕಲಾ ಲಂಕೃತ ಶಿರಸ್ಕಳಾಗಿಯೂ, ಚತುರ್ವಿಂಶತಿ (೨೪) ತತ್ವಪ್ರತಿಪಾದಕಗ ಳಾದ ಚತುರ್ವಿಂಶತ್ಯಕ್ಷರಸ್ವರೂಪ (ತತ್ಸವಿತುರ್ವರೇಣ್ಯಂ ಇತ್ಯಾದಿ ೨೪ ಅಕ್ಷರಗಳು) ವುಳ್ಳವಳಾಗಿಯೂ, ವರದ (ವರವಂ ಕೊಡುವ) ಅಭ ಯ, ಅಂಕುಶ, ಕಶೆ (ಕೊರಡಾ) ಗಳನ್ನೂ, ಶುಭ್ರವಾದ ಕಪಾಲವನ್ನೂ, ಜಪಮಾಲಿಕೆಯನ್ನೂ, ಶಂಖ, ಚಕ್ರಗಳನ್ನೂ ಕಮಲದ್ವಯವನ್ನೂ ಕ್ರ ಮವಾಗಿ ಹತ್ತು ಹಸ್ತಗಳಲ್ಲಿ ಧರಿಸಿಕೊಂಡಿರುವ ಗಾಯತ್ರಿಯನ್ನು ಧ್ಯಾನಿ ಸುವೆನು.

---

೧ ಪೃಥಿವೀ, ಆಪಃ, ತೇಜಃ, ವಾಯುಃ, ಆಕಾಶಂ, ಗಂಧಃ, ರಸಃ, ರೂ ಪಂ, ಸ್ಪರ್ಶಃ, ಶಬ್ದಃ, ಉಪಸ್ಥಂ, ಪಾಯುಃ, ಪಾದಃ ಪಾಣಿಃ, ವಾಕ್, ಘ್ರಾಣಂ ಜಿಹ್ವಾ, ಚಕ್ಷುಃ, ತ್ವಕ್, ಶ್ರೋತ್ರಂ, ಮನಃ, ಬುದ್ಧಿಃ, ಅಹಂಕಾರಃ, ಅವ್ಯಕ್ತಂ ಇತಿ ತತ್ವಾನಿ.

(ಈ ಗಾಯತ್ರೀನ್ಯಾಸಾದಿ ಕ್ರಮಗಳು ಸ್ಮೃತಿರತ್ನಾಕರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವದು. ವಿಸ್ತರ ಭೀತಿಯಿಂದ ಇಲ್ಲಿ ಸಂಗ್ರಹವಾಗಿ ಬರೆಯಲ್ಪಟ್ಟಿದೆ)

ಯೋದೇವಸ್ಸವಿತಾಸ್ಮಾಕಂಧಿಯೋಧರ್ಮಾದಿಗೋಚರಾಃ।
ಪ್ರೇರಯೇತ್ತಸ್ಯತದ್ಭರ್ಗಃತದ್ವರೇಣ್ಯಮುಪಾಸ್ಮಹೇ॥

ತಾತ್ಪರ್ಯ॥ ಯಾವ ಪರಮಾತ್ಮನು ನಮಗೆ ಧರ್ಮಾದಿ ವಿಷಯಕ ಬುದ್ಧಿಗಳನ್ನು ಉಂಟುಮಾಡುವನೋ, ಅಂತಹ ಜಗತ್ಕಾರಣ ಭೂತಪರಮಾತ್ಮನ ತೇಜಸ್ಸನ್ನು, ಧ್ಯಾನಿಸುವೆವು. (ಇಲ್ಲಿವಿಸ್ತಾರವಾಗಿ ತಿಳಿಯತಕ್ಕ ಅರ್ಥಗಳನ್ನು, ಗಾಯತ್ರೀತಾತ್ಪರ್ಯ ಪ್ರಕರಣದಲ್ಲಿ ತಿಳಿಯತಕ್ಕದ್ದು.)

ಆಸತ್ಯೇನೇತಿಷಡೃಚಾಂಹಿರಣ್ಯಸ್ತೂಪಋಷಿಃಆದ್ಯಯೋಸ್ತ್ರಿಷ್ಟುಪ್, ಚತಸೃಣಾಂ, ಗಾಯತ್ರೀ, ಜಗತ್ಯುಷ್ಣಿಕ್ತ್ರಿಷ್ಟುಭಃಛಂದಾಂಸಿ, ಸವಿತಾ, ದೇವತಾ, ಇತಿನ್ಯಸ್ಯ, ಮಾಧ್ಯಾಹ್ನಿಕಸಂಧ್ಯೋಪಸ್ಥಾನೇವಿನಿಯೋಗಃ, ಇತ್ಯುಕ್ತ್ವಾ,

ಆಸತ್ಯೇನರಜಸಾವರ್ತಮಾನೋನಿವೇಶಯನ್ನಮೃತಂಮರ್ತ್ಯಂ
ಚಹಿರಣ್ಯಯೇನಸವಿತಾರಥೇನಾದೇವೋಯಾತಿಭುವನಾವಿಪ
ಶ್ಯನ್, ಉದ್ವಯಂತಮಸಸ್ಪರಿಪಶ್ಯಂತೋಜ್ಯೋತಿರುತ್ತರಂ,
ದೇವಂದೇವತ್ರಾಸೂರ್ಯಮಗನ್ಮಜ್ಯೋತಿರುತ್ತಮಂ, ಉದು
ತ್ಯಂಜಾತವೇದಸಂದೇವಂವಹಂತಿಕೇತವಃ, ದೃಶೇವಿಶ್ವಾಯ

೧ ಈ ಶ್ಲೋಕಾರ್ಥವು ಪ್ರಾತಸ್ಸಂಧ್ಯಾ ಪ್ರಕರಣದಲ್ಲಿ ಬರೆಯಲಿಲ್ಲವಾಗ ಇಲ್ಲಿ ಬರೆಯಲ್ಪಟ್ಟಿರುತ್ತೆ.

ಸೂರ್ಯಂ ಚಿತ್ರಂದೇವಾನಾಮುದಗಾದನೀಕಂಚಕ್ಷುರ್ಮಿತ್ರಸ್ಯವ
ರುಣಸ್ಯಾಗ್ನೇಃ, ಆಪ್ರಾದ್ಯಾವಾಪೃಥಿವೀಅಂತರಿಕ್ಷಗ್ಂಸೂರ್ಯ
ಆತ್ಮಾಜಗತಸ್ತಸ್ಥುಷಶ್ಚ, ತಚ್ಚಕ್ಷುರ್ದೇವಹಿತಂಪುರಸ್ತಾ
ಚ್ಛುಕ್ರಮುಚ್ಚರತ್, ಪಶ್ಯೇಮಶರದಶ್ಶತಂಜೀವೇಮಶರದಶ್ಶ
ತಂನಂದಾಮಶರದಶ್ಶತಂಮೋದಾಮಶರದಶ್ಶತಂಭವಾಮಶರದ
ಶ್ಶತಂಶೃಣವಾಮಶರದಶ್ಶತಂಪ್ರಬ್ರವಾಮಶರದಶ್ಶತಂಅಜೀತಾ
ಸ್ಯಾಮಶರದಶ್ಶತಂಜೋಕ್ಚಸೂರ್ಯಂದೃಶೇ, ಯಉದಗಾನ್ಮ
ಹತೋಽರ್ಣವಾದ್ವಿಭ್ರಾಜಮಾನಸ್ಸರಿರಸ್ಯ ಮಧ್ಯಾತ್ಸಮಾವೃಷ
ಭೋಲೋಹಿತಾಕ್ಷಸ್ಸೂರ್ಯೋವಿಪಶ್ಚಿನ್ಮನಸಾಪುನಾತು ॥

ಇತೀಆದಿತ್ಯಮುಪಸ್ಥಾಯ, ಶೇಷಂಪ್ರಾತಸ್ಸಂಧ್ಯಾವಂದನ
ವತ್ಕುರ್ಯಾತ್,

ಯಥಾಶಕ್ತಿಗಾಯತ್ರೀಸಂಖ್ಯಾಽನ್ಯೂನಸಂಖ್ಯಾಕಂಮೂ
ಲಮಂತ್ರಂಜಪೇತ್,

ಪದಂ॥ ಆ, ಸತ್ಯೇನ, ರಜಸಾ, ವರ್ತಮಾನಃ, ನಿವೇಶಯನ್,
ಮೃತಂ, ಮರ್ತ್ಯಂ, ಚ, ಹಿರಣ್ಯಯೇನ, ಸವಿತಾ, ರಥೇನ, ಆ, ದೇವಃ,
ಯಾತಿ, ಭುವನಾ, ವಿಪಶ್ಯನ್, ಉತ್, ವಯಂ, ತಮಸಃ, ಪರಿ, ಪಶ್ಯಂತಃ,
ಜ್ಯೋತಿಃ, ಉತ್ತರಂ, ದೇವಂ, ದೇವತ್ರಾ, ಸೂರ್ಯಂ, ಅಗನ್ಮ, ಜ್ಯೋತಿಃ,

ಉತ್ತಮಂ, ಉತ್, ಉ, ತ್ಯಂ, ಜಾತವೇದಸಂ, ದೇವಂ, ವಹಂತಿ, ಕೇತವಃ, ದೃಶೇ, ವಿಶ್ವಾಯ, ಸೂರ್ಯಂ, ಚಿತ್ರಂ, ದೇವಾನಾಂ, ಉದಗಾತ್, ಅನೀಕಂ, ಚಕ್ಷುಃ, ಮಿತ್ರಸ್ಯ, ವರುಣಸ್ಯ, ಅಗ್ನೇಃ, ಆ, ಅಪ್ರಾಃ, ದ್ಯಾವಾಪೃಥಿವೀ, ಅಂತರಿಕ್ಷಂ, ಸ ೂರ್ಯಃ, ಆತ್ಮಾ, ಜಗತಃ, ತಸ್ಥುಷಃ, ಚ, ತತ್, ಚಕ್ಷುಃ, ದೇವಹಿತಂ, ಪುರಸ್ತಾತ್, ಶುಕ್ರಂ, ಉಚ್ಚರತ್, ಪಶ್ಯೇಮ, ಶರದಃ, ಶತಂ, ಜೀವೇಮ, ಶರದಃ, ಶತಂ, ನಂದಾಮ, ಶರದಃ, ಶತಂ, ಮೋದಾಮ, ಶರದಃ, ಶತಂ, ಭವಾಮ, ಶರದಃ, ಶತಂ, ಶೃಣವಾಮ, ಶರದಃ, ಶತಂ, ಪ್ರಬ್ರವಾಮ, ಶರದಃ, ಶತಂ, ಅಜೀತಾಃ, ಸ್ಯಾಮ, ಶರದಃ, ಶತಂ, ಜ್ಯೋಕ್, ಚ, ಸೂರ್ಯಂ, ದೃಶೇ, ಯಃ, ಉದಗಾತ್, ಮಹತಃ, ಅರ್ಣವಾತ್, ವಿಭ್ರಾಜಮಾನಃ, ಸರಿರಸ್ಯ, ಮಧ್ಯಾತ್, ಸಃ, ಮಾ, ವೃಷಭಃ, ಲೋಹಿತಾಕ್ಷಃ, ಸೂರ್ಯಃ, ವಿಪಶ್ಚಿತ್, ಮನಸಾ, ಪುನಾತು.

ಅರ್ಥ || ಸತ್ಯೇನ-ವಿಕಾರರಹಿತವಾದ ಲೋಕದಿಂದಲೂ (ಲೋಕದಲ್ಲಿಯೂ) ರಜಸಾ-ಸತ್ವ, ರಜಸ್ತಮೋಗುಣ ಪ್ರಕೃತಿ ಕಾರ್ಯವಾದ ಬ್ರಹ್ಮಾಂಡ ಸಹಸ್ರದಲ್ಲಿಯೂ, ಆವರ್ತಮಾನಃ-ಅಂತರ್ಬಹಿಸ್ಥಿತನಾಗಿಯೂ, ದೇವಃ-ಕ್ರೀಡಾಶೀಲನೂ ಆದ, ಸವಿತಾ-ಸಕಲ ಜಗತ್ಸೃಷ್ಟಿಕರ್ತನಾದ ಪರಮಾತ್ಮನು, ಅಮೃತಂ-ಬ್ರಹ್ಮಾನುಭವವನ್ನೂ, ಮರ್ತ್ಯಂಚ-ನಶ್ವರವಾದ ಐಶ್ವರ್ಯ ಕೈವಲ್ಯಾದಿ ಫಲವನ್ನೂ, ನಿವೇಶಯನ್-ಕೊಡುವನಾಗಿ, ಹಿರಣ್ಯಯೇನ-ಮನೋಹರವಾದ, ರಥೇನ-ಗರುಡರಥದಿಂದ, ಅಥವಾ ಪ್ರಣವರಥದಿಂದ ಆ-ಎಲ್ಲಾಕಡೆಯಲ್ಲಿಯೂ, ಯಾತಿ-ಸಂಚರಿಸುವನು, ಭುವನಾ-ಸಕಲ ಪ್ರಾಣಿವರ್ಗಗಳನ್ನೂ, ವಿಪಶ್ಯನ್-ವಿಶೇಷವಾಗಿ ನೋಡುವನಾಗಿ, (ಇಂತಹ ಪರಮಾತ್ಮನನ್ನ ಉಪಾಸನೆ ಮಾಡೆಂದು ಅಧ್ಯಾಹಾರ).

ತಮಸಃ-ಪ್ರಕೃತಿಯದೆಸೆಯಿಂದ, ಪರಿ-ಮೇಲ್ಭಾಗದಲ್ಲಿರುವ, ಉತ್ತರಂ-ಉತ್ಕೃಷ್ಟತರವಾದ, ಜ್ಯೋತಿಃ-ಪರಮಾತ್ಮನನ್ನ, ಉತ್ಪಶ್ಯಂತಃ-ಊರ್ಧ್ವಮುಖರಾಗಿ ಧ್ಯಾನಮಾಡುವ, ವಯಂ-ನಾವುಗಳು, ದೇವತ್ರಾ-ದೇವತೆಗಳಲ್ಲಿ (ಇದು ಎಲ್ಲಾ ವಸ್ತುಗಳಿಗೂ ಉಪಲಕ್ಷಣವು) ಯೂ

ಇರುವ, ಉತ್ತಮಂದೇವಂ-ದೇವತೆಗಳಲ್ಲಿ ಉತ್ಕೃಷ್ಟತಮವಾದ, ಜ್ಯೋತಿಃ-ತೇಜೋರೂಪವಾದ, ಸೂರ್ಯಂ-ಪರಮಾತ್ಮನನ್ನು, ಅಗನ್ಮ-ಹೊಂದುವ,

ಉದುತ್ಯಂ-ಉತ್ಕೃಷ್ಟನಾಗಿ ಅವತರಿಸಿದ, ಜಾತವೇದಸಂ-ಜಾತವೇದಾಃ, ಎಂಬದಾಗಿ ನಾಮಧೇಯವುಳ್ಳ, ದೇವಂ-ಸೂರ್ಯಂ, ಪರಮಾತ್ಮನನ್ನು, ಕೇತವಃ-ದಿವ್ಯಾತ್ಮಗುಣಗಳು, ವಿಶ್ವಾಯ-ಎಲ್ಲರ, ದೃಶೇ-ದರ್ಶನಕ್ಕೋಸ್ಕರ, ವಹಂತಿ-ಅವತಾರಮಾಡಿಸುವವು.

ದೇವಾನಾಂ-ದೇವತೆಗಳಿಗೆ, ಚಿತ್ರಂ-ನಾನಾಪ್ರಕಾರವಾದ, ಅನೀಕಂ-ಬಲವು, ಉದಗಾತ್-ಮಹಾಪರಮೇಶ್ವರನಿಂದ ಉಂಟಾದುದೋ, ಮಿತ್ರಸ್ಯ-ಸೂರ್ಯನಿಗೂ, ವರುಣಸ್ಯ-ವರುಣನಿಗೂ, ಅಗ್ನೇಃ-ಅಗ್ನಿಗೂ, (ಇನ್ನೂ ಇತರ ದೇವತೆಗಳಿಗೂ, ಇದು ಉಪಲಕ್ಷಣವು) ಚಕ್ಷುಃ-ನೇತ್ರದೋಪಾದಿಯಲ್ಲಿ ಜ್ಞಾನಪ್ರದನಾದ, ಸೂರ್ಯ-ಪರಮಾತ್ಮನು, ದ್ಯಾವಾಪೃಥಿವೀ-ಸ್ವರ್ಗ ಭೂಮಿಗಳನ್ನೂ, ಅಂತರಿಕ್ಷಂ-ಆಕಾಶವನ್ನೂ, (ಇದು ಸಮಸ್ತ ವಸ್ತುವಿಗೂ ಉಪಲಕ್ಷಣವು.)

ಆ-ನಾಲ್ಕು ಕಡೆಯಲ್ಲಿಯೂ, ಅಪ್ರಾಃ-ತನ್ನಿಂದಲೇ ತುಂಬಿಸುವನು ಆದ್ದರಿಂದಲೇ, ಜಗತಃತಸ್ಥುಷಶ್ಚ-ಸ್ಥಾವರ ಜಂಗಮಾದಿ ಸಕಲ ಜಗತ್ತಿಗೂ, ಆತ್ಮಾ-ಆತ್ಮನಾಗಿರುವನು. (ಇಂತಹ ಪರಮಾತ್ಮನ ಉಪಾಸ್ಯನೆಂದು ಭಾವ)

ತತ್-ಶ್ರುತಿ ಪ್ರಸಿದ್ಧನಾಗಿಯೂ, ಚಕ್ಷುಃ-ಜ್ಞಾನಪ್ರದನಾಗಿಯೂ, ದೇವಹಿತಂ-ದೇವತೆಗಳಿಗೆ ಹಿತನಾಗಿಯೂ, ಶುಕ್ರಂ-ಶುದ್ಧಸ್ವರೂಪನಾಗಿಯೂ, ಉಚ್ಚರತ್-ಉದ್ಯದ್ರೂಪನಾಗಿಯೂ, (ನಾಶರಹಿತನಾಗಿಯೂ) ಇರುವ ಪರಮಾತ್ಮನನ್ನ, ಪುರಸ್ತಾತ್-ಮುಂದುಗಡೆಯಲ್ಲಿ, ಶರದಃಶತಂ-ನೂರುವರುಷಗಳು (ಬಹುಕಾಲಪರ್ಯಂತ) ಪಶ್ಯೇಮ-ನೋಡುವ, ಶರದಃಶತಂ-ಅನೇಕ ವರ್ಷಕಾಲ, ಜೀವೇಮ-ಜೀವಿಸುವ, ಶರದಶ್ಶತಂ-ಬಹುಕಾಲಪರ್ಯಂತ, ನಂದಾಮ-ಸಂತೋಷಿಸುವ, ಶರದಶ್ಶತಂ-ಬಹುಕಾಲ, ಮೋದಾಮ-ಆನಂದಪಡೋಣ, ಶರದಶ್ಶತಂ-ಬಹುಕಾಲ, ಭವಾಮ-ಅಭಿ

ವೃದ್ಧಿಯಂ ಹೊಂದುವ, ಶರದಶ್ಶತಂ-ಬಹುಕಾಲ, ಶೃಣವಾಮ-ಭಗವತ್ಕ ಥಾಶ್ರವಣ ಮಾಡುವ, ಶರದಶ್ಶತಂ-ಬಹುಕಾಲ, ಪ್ರಬ್ರವಾಮ-ವಾದಿಸುವ, ಶರದಶ್ಶತಂ-ಬಹುಕಾಲ, ಅಜೀತಾಸ್ಯಾಮ-ಪರಾಜಯವನ್ನ ಹೊಂದದೇ ಇರುವರಾಗೋಣ, ಜ್ಯೋಕ್-ಬಹುಕಾಲ, ಸೂರ್ಯಂ-ಪರಮಾತ್ಮನನ್ನ, ದೃಶೇ-ನೋಡಲು, (ಅಪೇಕ್ಷಿಸುವ) ಯಃ-ಯಾವ ಪರಮಾತ್ಮನು, ಮಹತಃ-ಮಹತ್ತಾದ, ಅರ್ಣವಾತ್-ಸಮುದ್ರದ್ದೆಸೆಯಿಂದ, (ಸಕಲ ತತ್ವಗಳ ಅಂತಃಬಹಿಃ) ಉದಗಾತ್-ಚೆನ್ನಾಗಿ ತಿಳಿಯಲ್ಪಡುವನೋ (ಶ್ರುತಿಗಳಿಂದ ಎಂದು ಭಾವ)

ಸರಿರಸ್ಯ-ಸಮುದ್ರೋದಕದ, ಮಧ್ಯಾತ್-ಮಧ್ಯದಲ್ಲಿ, ವಿಭ್ರಾಜಮಾನಃ-ವಿಶೇಷವಾಗಿ ಪ್ರಕಾಶಿಸುವ, ಸಃ-ಆ, ವೃಷಭಃ-ಸರ್ವಶ್ರೇಷ್ಠನಾಗಿಯೂ, ಧರ್ಮಪ್ರವರ್ತಕನಾಗಿಯೂ, ಲೋಹಿತಾಕ್ಷ-ಕೆಂದಾವರೆಯೋಪಾದಿಯಲ್ಲಿ ಕೆಂಪಾದ ಕಣ್ಣುಗಳುಳ್ಳವನಾಗಿಯೂ, ವಿಪಶ್ಚಿತ್-ಸರ್ವಜ್ಞನೂ ಆದ, ಸೂರ್ಯ-ಪರಮಾತ್ಮನು, ಮಾ-ನನ್ನನ್ನ, ಮನಸಾ-ಸತ್ಯಸಂಕಲ್ಪದಿಂದ, ಪುನಾತು-ಪರಿಶುದ್ಧನನ್ನಾಗಿ ಮಾಡುವನು.

ತಾತ್ಪರ್ಯ॥ ಕಾಲಕೃತಪರಿಣಾಮ ರಹಿತವಾದ ವೈಕುಂಠದಲ್ಲಿಯೂ (ನಿತ್ಯ ವಿಭೂತಿಯಲ್ಲಿಯೂ) ಪ್ರಕೃತಿಕಾರ್ಯವಾದ ಬ್ರಹ್ಮಾಂಡ ಸಹಸ್ರದಲ್ಲಿಯೂ (ಲೀಲಾವಿಭೂತಿಯಲ್ಲಿಯೂ) ಅಂತರ್ಬಹಿಸ್ಥಿತನಾಗಿಯೂ ಕ್ರೀಡಾಶೀಲನಾಗಿಯೂ ಇರುವ ಪರಮಾತ್ಮನು, ಮೋಕ್ಷ ಸಾಮ್ರಾಜ್ಯವನ್ನೂ ನಿತ್ಯವಾದ ಪರಬ್ರಹ್ಮಾನುಭವವನ್ನೂ, ನಶ್ವರವಾದ ಐಶ್ವರ್ಯ ಕೈವಲ್ಯ ಪುತ್ರಾದಿ ಫಲಗಳನ್ನೂ ಸಕಲಪ್ರಾಣಿ ಸಮೂಹಕ್ಕೂ ಅವರವರ ಕರ್ಮಾನುಗುಣವಾಗಿ ಕೊಡುವದಕ್ಕೋಸ್ಕರವೇ ಮನೋಹರವಾದ ಗರುಡರಥದಿಂದ, ಅಥವಾ,

"ಓಂಕಾರರಥಮಾಸ್ಥಾಯ ಸ್ಥಿತಃ ಪುರುಷಸತ್ತಮಃ" ಎಂಬಂತೆ,

ಓಂಕಾರರಥಾರೋಹಣವಂ ಮಾಡಿ ಎಲ್ಲಾಕಡೆಯಲ್ಲಿಯೂ ಸಂಚರಿಸುವನು, (ಇಂತಹವನನ್ನ ಧ್ಯಾನಿಸೆಂದು ಭಾವ)

ಶ್ರು॥ ಆದಿತ್ಯವರ್ಣಂತಮಸಃಪರಸ್ತಾತ್,
ಕ್ಷಯಂತಮಸ್ಯರಜಸಃಪರಾಕೆ,

ಇತ್ಯಾದಿ ಶ್ರುತಿಗಳಪ್ರಕಾರ ಪ್ರಕೃತಿಗಿಂತಲೂ ಮೇಲೆ ಇರುವ ಉತ್ಕೃಷ್ಟಕರವಾದ ಪರಬ್ರಹ್ಮನನ್ನ ಧ್ಯಾನಿಸುವ ನಾವು, ಸಕಲ ವಸ್ತುಗಳಲ್ಲಿಯೂ, ಪರಿಪೂರ್ಣನಾದ ಸಕಲದೇವಶ್ರೇಷ್ಠನಾದ ಪರಮಾತ್ಮನನ್ನ ಹೊಂದುವ, (ಸಂಸಾರ ಸಾಗರಪ್ಪದಿಸೆಯಿಂದ ಮುಕ್ತರಾಗುವ ಎಂದು ತಾತ್ಪರ್ಯ.)

ಸಮಸ್ತ ಕಾರ್ಯ ಕಾರಣ ಸಮೂಹವನ್ನೂ ಅತಿಕ್ರಮಿಸಿರುವದರಿಂದ ಸಂಸಾರಸಾಗರ ಗಂಧವನ್ನೇ ಅರಿಯದವನಾಗಿಯೂ, ನಿರತಿಶಯ ತೇಜೋಯುಕ್ತವಾದ ಶರೀರವುಳ್ಳವನಾಗಿಯೂ ಇರುವ ಪರಮಾತ್ಮನನ್ನ ಧ್ಯಾನಿಸುವ ಜೀವಾತ್ಮನು, ಸರ್ವವ್ಯಾಪ್ತನಾದ ಪರಮಾತ್ಮನನ್ನೇ ಹೊಂದುವನೆಂದು ತಾತ್ಪರ್ಯ)

ಪ್ರಾಣಗಳನ್ನ ತಿಳಿಯುವದರಿಂದ, ಜಾತವೇದಾಃ ಎಂದು ನಾಮಧೇಯವುಳ್ಳ ಪರಮಾತ್ಮನನ್ನ, ಪ್ರಭಾವ ಪ್ರಕಾಶಕಂಗಳಾದ ಜ್ಞಾನಶಕ್ತಿ ವಾತ್ಸಲ್ಯಾದಿ ದಿವ್ಯಾತ್ಮ ಗುಣಂಗಳು ಎಲ್ಲರುಗಳ ದರ್ಶನಕ್ಕಾಗಿ ಅವತಾರ ಮಾಡಿಸುವವು.

ವೈಕುಂಠದಲ್ಲಿ, ನಿತ್ಯಮುಕ್ತರೊಡನೆ ನಿರತಿಶಯಾನಂದಾನುಭವವಂ ಹೊಂದುತ್ತಲಿರುವ ಪರಮಾತ್ಮನು, ಲೀಲಾವಿಭೂತಿಯಲ್ಲಿ ತಾಪತ್ರಯ ಮಹಾಜ್ವಾಲೆಯಲ್ಲಿ ದಂಹ್ಯಮಾನರಾಗಿ ಅತಿಕ್ಷುದ್ರ ವಿಷಯಭೋಗಗಳಲ್ಲಿ ಆಸಕ್ತರಾಗಿ ಸಂಕಟಪಡುತ್ತಲಿರುವ ಜೀವರುಗಳನ್ನು ನೋಡಿ, ನಿರವಧಿಕ ವಾತ್ಸಲ್ಯ ಕಾರುಣ್ಯಾದಿಗಳಿಂದ, ರಾಮ ಕೃಷ್ಣಾದ್ಯವತಾರಗಳನ್ನ ಮಾಡಿದನು. ಅಂತಹ ಭಗವಂತನನ್ನ ಭಜಿಸಬೇಕೆಂದು ತಾತ್ಪರ್ಯ.

ಮತ್ಸ್ಯ ಕೂರ್ಮಾದಿ ಸ್ವಮೂರ್ತಿ ಭೇದಗಳಿಂದಲೂ, ಭರತ ಶತ್ರುಘ್ನ ಸಾತ್ಯಕಿ ಬಲಭದ್ರಾದಿ ಪರಿವಾರಗಳಿಂದಲೂ ಯಾವ ಭಗವಂತನು ದೇವತೆಗಳಿಗೆ ಸಹಾಯಮಾಡಿದನೋ, ಸೂರ್ಯಾದಿ ಸಕಲದೇವತೆಗಳಿಗೂ, ಜ್ಞಾನ ದಾತೃವಾದ ಪರಮಾತ್ಮನು ಸ್ವರ್ಗಭೂಮಿಯೇ ಮೊದಲಾಗಿ ಸಕಲ ವಸ್ತುಸಮೂಹದಲ್ಲಿಯೂ ಜಂಗಮ ಸ್ಥಾವರಾದಿಗಳಲ್ಲಿಯೂ ಪರಿಪೂರ್ಣನಾಗಿರುವನು.

ಇಂತಹ ಪರಮಾತ್ಮನನ್ನ ಬಲಾರೋಗ್ಯೈಶ್ವರ್ಯ ಯುಕ್ತರಾಗಿ ಬಹುಕಾಲ ನೋಡಿಕೊಂಡಿರುವ, ಅಂತಹ ಸಾಕ್ಷಾತ್ಕಾರ ಸಿದ್ಧ್ಯರ್ಥವಾಗಿ ಬಹುಕಾಲ ಜೀವಿಸುವ, ಸನ್ಮಿತ್ರ ಪುತ್ರ ಶಿಷ್ಯಾದಿಗಳೊಡನೆ ಭಗವದ್ಗುಣ ವಿಭೂತಿಗಳನ್ನ ನೋಡಿ ಸಂತೋಷಿಸುವ, ಪೂರ್ವೋಕ್ತಾನಂದದ ಅವಸಾನಾವಸ್ಥೆಯನ್ನ ಹೊಂದುವ, ಉತ್ತರೋತ್ತರಾಭಿವೃದ್ಧಿಯನ್ನ ಹೊಂದುವ, ಅನೇಕಕಾಲ ಭಗವತ್ಕಥಾ ಶ್ರವಣಮಾಡುವ, ಅನೇಕಕಾಲ ಬಾಹ್ಯಕುದೃಷ್ಟಿಗಳೊಡನೆ ವಾದಮಾಡುವ ಅನೇಕಕಾಲ, ಪರವಾದಿಗಳಿಂದ ಪರಾಜಯವನ್ನು ಹೊಂದದೇ ಇರುವ, ಅನೇಕಕಾಲ ಪರಮಾತ್ಮನನ್ನ ನೋಡಲಪೇಕ್ಷಿಸುವೆವು.

ಯಾವ ಪರಮಾತ್ಮನು ಸಕಲತತ್ವಗಳಲ್ಲಿಯೂ ಅಂತರ್ಬಹಿಃವ್ಯಾಪಿಸಿರುವನೆಂದು ಶ್ರುತಿಗಳಿಂದ ತಿಳಿಯಲ್ಪಡುವನೋ, ಸಮುದ್ರಜಲಮಧ್ಯದಲ್ಲಿ ಪ್ರಕಾಶಿಸುವನೋ, (ಸರ್ವಾಂತರ್ಯಾಮಿಯಾಗಿದ್ದಾಗ್ಯು ಆಯಾಯಾ ಹೇಯಗುಣ (ದುರ್ಗುಣ) ರಹಿತನಾಗಿ ಪ್ರಕಾಶಿಸುವನೋ) ಅಂತಹ ಸರ್ವಶ್ರೇಷ್ಠನಾಗಿಯೂ, ಧರ್ಮಪ್ರವರ್ತಕನಾಗಿಯೂ, ಆಗತಾನೇ ಅರಳಿದ ಕೆಂದಾವರೆಯೋಪಾದಿಯಲ್ಲಿ ಕೆಂಪಾದ ಕಣ್ಣುಗಳುಳ್ಳವನಾಗಿಯೂ, ಇರುವ ಸರ್ವಜ್ಞನಾದ ಪರಮಾತ್ಮನು ನನನ್ನ ತನ್ನಸತ್ಯಸಂಕಲ್ಪದಿಂದ ಪರಿಶುದ್ಧನನ್ನಾಗಿ ಮಾಡುವನು.

(ನನನ್ನು ಸರ್ವ ಪ್ರತಿಬಂಧಕನಿವೃತ್ತಿ ಪೂರ್ವಕವಾಗಿ ಪರಬ್ರಹ್ಮಾನುಭವ ಯೋಗ್ಯನನ್ನಾಗಿ ಮಾಡುವನೆಂದು ಪರಮ ತಾತ್ಪರ್ಯ)

ಆಪಃಪುನಂತು+ಸ್ವಾಹಾ, ಇತ್ಯನುವಾಕಮಂತ್ರಸ್ಯ, ಶ್ರುತಪ್ರಕಾಶಿಕಾಚಾರ್ಯಕೃತ ಭಾಷ್ಯಾನುಸಾರೇಣ, ಯೋಜನಾಂತರಂ॥

ಅರ್ಥ॥ ಆಪಃ, ಭಗವಂತನಿಗೆ ವಿಶೇಷವಾಗಿ ಆವಾಸಸ್ಥಾನವಾದ ಪ್ರಯುಕ್ತ ಭಗವತ್ಪ್ರೇಮ ವಿಷಯಗಳಾದ ಉದಕಗಳು, ಪೃಥಿವೀಂ, (ಈ ಶಬ್ದವು ಪೃಥಿವ್ಯಾದಿ ಮಹಾ ಭೂತೋಪಲಕ್ಷಣವು) ಪಂಚಮಹಾಭೂತ ಸಂಘಾತವುಳ್ಳ ದೇಹವನ್ನು, ಪುನಂತು, ಶುದ್ಧಿಮಾಡಲಿ, ಪೂತಾ, ಉದಕಗಳಿಂದ ಪರಿಶುದ್ಧಮಾಡಲ್ಪಟ್ಟ, ಪೃಥಿವೀ, ಕ್ಷೇತ್ರಭೂತವಾದ ದೇಹ

ಪ್ರ, ಮಾಂ, ಕ್ಷೇತ್ರಜ್ಞನಾದ ನನ್ನನ್ನ (ಜೀವಾತ್ಮನನ್ನ) ಪುನಾತು, ಶು ದ್ಧನನ್ನಾಗಿ ಮಾಡಲಿ, ಬ್ರಹ್ಮಣಸ್ಪತಿಃ, ಸಃ, ಪುನಂತು, ಬ್ರಹ್ಮಣಃ, ವೇದ ಕ್ಕೆ ಪತಿಃ, ಅಧಿಪತಿಯಾದ ಪರಮಾತ್ಮನೂ ನನ್ನನ್ನ ರಕ್ಷಿಸಲಿ, (ಪ್ರಳ, ಯದಲ್ಲಿ ವೇದರಕ್ಷಕರಾದ ಬ್ರಹ್ಮಾದಿಗಳೆಲ್ಲರೂ ಲೀನರಾದ ಕಾಲದಲ್ಲಿ ಭಗವಂತನೊಬ್ಬನೇ ವೇದಕ್ಕೆ ಕಾರಣಭೂತನಾದ ಪ್ರಯುಕ್ತ, ಬ್ರಹ್ಮ ಣಸ್ಪತಿಃ ಎಂದು ಹೇಳಿರುವನು ಎಂದು ಭಾವವು) ಆ ಭಗವಂತನು ಮ ತ್ತು ಎಂತಹವನೆಂದರೆ, ಬ್ರಹ್ಮಪೂತಾ, ವೇದ (ಶಬ್ದಬ್ರಹ್ಮ) ವನ್ನು ಶುದ್ಧವನ್ನಾಗಿ ಮಾಡುವನು.

ಕಪಾಲಸ್ಥಂಯಥಾತೋಯಂಶ್ವದೃತೌಚಯಥಾಪಯಃ।
ದುಷ್ಟಂಸ್ಯಾತ್‌ಸ್ಥಾನದೋಷೇಣವೃತ್ತಹೀನೇತಥಾಶ್ರುತಂ ॥

ಕಪಾಲಸ್ಥ (ತಲೇ ಬುರುಡೆಯಲ್ಲಿರುವ) ವಾದ ಉದಕವೂ, ಶ್ವದೃ ತಿ (ನಾಯಿಚರ್ಮದಿಂ ಮಾಡಲ್ಪಟ್ಟ ಚೀಲ) ಯಲ್ಲಿ ಹಾಕಲ್ಪಟ್ಟ ಕ್ಷೀರ ವೂ ಸಹ, ಸ್ವತಃ ಉತ್ಕೃಷ್ಟವಾದ ಪದಾರ್ಥಗಳಾಗಿದ್ದಾಗ್ಯೂ ಸ್ಥಾನ ದೋಷದಿಂದ ಹೇಗೆ ದುಷ್ಟವಾಗುವುಗಳೋ, ಹಾಗೆ ಆಚಾರಹೀನನಲ್ಲಿ ವೇದವು, ದುಷ್ಟ (ದೋಷವಿಶಿಷ್ಟ) ವಾದುದು, ಎಂಬಂತೆ ಜಾತಿಮಾತ್ರೋ ಪಜೀವಿ (ಬ್ರಾಹ್ಮಣಾದಿ ಸತ್ಕುಲದಲ್ಲಿ ಜನ್ಮಮಾತ್ರವಲ್ಲದೆ ಇತರ ಆಚಾರ ದಿಂದ ಬಿಡಲ್ಪಟ್ಟವನು)ಗಳಾದ ಬ್ರಾಹ್ಮರುಗಳ ಸಂಪರ್ಕದಿಂದ ಅಶುದ್ಧಗ ಳಾದ ವೇದಗಳನ್ನ ಪ್ರಳಯಕಾಲದಲ್ಲಿ ತನ್ನಲ್ಲಿಯೇ ಧರಿಸುವ ಪ್ರಯುಕ್ತ, ಶೋಧಕ (ಶುದ್ಧಿ ಮಾಡುವವನು) ನೆಂದುಭಾವ)

ಪುನಾತುಮಾಂ, ನನ್ನನ್ನ ಶುದ್ಧನನ್ನಾಗಿ ಮಾಡಲಿ, ಯದುಚ್ಛಿಷ್ಟಂ ಆಚಾರ್ಯೋಚ್ಛಿಷ್ಟವನ್ನ ವಿನಾ ಚಿಹ್ವಾ ಚಾಪಲ್ಯದಿಂದ ಯಾವ ಉ ಚ್ಛಿಷ್ಟವು ಭೋಜನಮಾಡಲ್ಪಟ್ಟಿರುವದೋ, ಅಭೋಜ್ಯಂ, ಅನಾಪ ತ್ಕಾಲದಲ್ಲಿಯೂ, ಅಗ್ನಿಹೀನರಾದ (ಔಪಾಸನ ಮಾಡದಿರುವರ) ವರ ಅನ್ನ ವು. ಮತ್ತು ಕೇಶ ಕೀಟಾದಿಗಳಿಂದ ದುಷ್ಟವಾದ ಅನ್ನವೂ ಭೋಜನ ಮಾಡಲ್ಪಟ್ಟಿರುವದೋ, ಯದ್ವಾ, ಮತ್ತೂ, ಇತರ ವಿಧವಾದ, ಮಮ, ದುಶ್ಚರಿತಂ, ದುರಾಚಾರವು, ವಾಕ್ ಪಾಣಿ, ಪಾದ, ಶಿಶ್ನೋದರ, ಚಾಪ

ಲ್ಯಾದಿ ದುಷ್ಕೃತ್ಯವೋ) ಅಸ್ತಿ (ಎಂದು ವಾಕ್ಯಶೇಷವು) ಇರುವದೋ ಯುಕ್ತ ಅಸತಾಂ ಪ್ರತಿಗ್ರಹಂ, ಪತಿತ ಚಂಡಾಲಾದಿಗಳಿಂದ ಏನುಸ್ವೀಕರಿಸಲ್ಪಟ್ಟಿರುವದೋ, ಅಥವಾ, ಶ್ವ, ಗರ್ದಭಾದಿ ಅಸದ್ರವ್ಯ ಸ್ವೀಕಾರ ಮಾಡಲ್ಪಟ್ಟಿರುವದೋ.

ಇಲ್ಲಿ ಅಸತ್ಪ್ರತಿಗ್ರಹವನ್ನ ಬೇರೆಹೇಳಿರುವದು, ದಾತೃ, ಪ್ರತಿಗೃಹೀತೃ, ಇಬ್ಬರುಗಳಿಗೂ ಅನರ್ಥ ಹೇತುವಾದಪ್ರಯುಕ್ತ.

ತದುಕ್ತಂ॥ ವಿದ್ಯಾತಪೋವಿಹೀನೇನನತುಗ್ರಾಹ್ಯ ! ಪ್ರತಿಗ್ರಹಃ ।
ಗೃಹ್ಣನ್ಪ್ರದಾತಾರಮಧೋನಯತ್ಯಾತ್ಮಾನಮೇವಚ.

ತಾತ್ಪರ್ಯ॥ ವಿದ್ಯಾ, ತಪೋಹೀನನಾದ ಬ್ರಾಹ್ಮಣನು (ನಿಂದ) ದಾನ, (ವು) ಸ್ವೀಕರಿಸಬಾರದು, ಸ್ವೀಕರಿಸಿದ್ದಾದರೆ, ದಾತೃವನ್ನ ನರಕಕ್ಕೆ ತಳ್ಳಿ ತಾನೂ ನರಕವಂ ಪೊಂದುವನು.

ಅದುಕಾರಣ ಇವೇಮೊದಲಾದ ಮತ್ಕರ್ಮ ನಿಬಂಧನವಾದ ಸಕಲ ಪಾಪಗಳನ್ನೂ ಹೋಗಲಾಡಿಸಿ ನನ್ನನ್ನ ಶುದ್ಧನನ್ನಾಗಿ ಉದಕಗಳು ಮಾಡುವವೆಂದು ಭಾವ.

ತಾತ್ಪರ್ಯ॥ ಅರ್ಥದಲ್ಲಿಯೇ ತಾತ್ಪರ್ಯವೂ ಬರಿಯಲ್ಪಟ್ಟಿರುತ್ತೆ.

ಅಥ ಗಾಯತ್ರ್ಯಾಃಯೋಜನಾಂತರಂ ।

ಗಾಯತ್ರೀ॥ ತತ್ಸವಿತುವರೇಣ್ಯಂ, ಭರ್ಗೋದೇವಸ್ಯಧೀಮಹಿ,
ಧಿಯೋಯೋನಃ ಪ್ರಚೋದಯಾತ್.

ಅರ್ಥ॥ ಭರ್ಗಃ, ಸಂಸಾರದುಃಖ ದಾಹಕ (ನಾಶಮಾಡುವನು) ನಾದ, ಯಃ, ಯಾವದೇವ (ಸ್ವಾಮಿ) ನು, ನಃ, ನಮಗಳಿಗೆ, ಧಿಯಃ, ಪ್ರಜ್ಞೆಗಳನ್ನು ಅಥವಾ ಕರ್ಮಗಳನ್ನು, ಪ್ರಚೋದಯಾತ್, ಪ್ರೇರಿಸುವನೋ ಸವಿತುಃ (ಈ ಪದವು ಪಾಲನ ಸಂಹಾರಗಳಿಗೂ ಉಪಲಕ್ಷಣವು) ಜಗತ್ಸೃಷ್ಟಿ, ಸ್ಥಿತಿ, ಸಂಹಾರಾದಿ ವ್ಯಾಪಾರಗಳಂ ಮಾಡುವ, ದೇವಸ್ಯ, ಏಕೋ ದೇವ ಏಕೋನಾರಾಯಣಃ, ಎಂದು, ಶ್ರುತಿ ಪ್ರಸಿದ್ಧನಾದ ನಾರಾಯಣನ, ವರೇಣ್ಯಂ, ಆದರಣೀಯ (ಆದರಕ್ಕೆ ಅರ್ಹವಾದ) ವಾದ, ತತ್, ತದ್ವಾವ ವಿಜಿಜ್ಞಾಸಿತವ್ಯಂ, ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವಾದ ಗುಣ

ಸಮೂಹವನ್ನು ಧೀಮಹಿ-ಧ್ಯಾನಮಾಡುವೆವು, ಅಥವಾ, ಭರ್ಗಃ, (ಇಲ್ಲಿ ರೇಫವು ಅಧಿಕವಾಗಿರುವದು ಭಗಃ ಎಂದಿರಬೇಕು,) ಭಗಃ-ಐಶ್ವರ್ಯಾದಿ ಗುಣಸಮೂಹವನ್ನ, ಧೀಮಹಿ-ಚಿಂತಿಸುವೆವು.

(ಭಗ ಶಬ್ದಕ್ಕೆ ಐಶ್ವರ್ಯಾದಿ ಗುಣಗಳೇ ಅರ್ಥವೆಂದು ಪರಾಶರಮಹರ್ಷಿಗಳು ಅಪ್ಪಣೆ ಕೊಡಿಸಿರುತ್ತಾರೆ.)

ಐಶ್ವರಸ್ಯಸಮಗ್ರಸ್ಯ, ವೀರ್ಯಸ್ಯ, ಯಶಸಃ, ಶ್ರಿಯಃ, । ಜ್ಞಾನ,
ವೈರಾಗ್ಯ, ಯೋಶ್ಚೈವಷಣ್ಣಾಂಭಗಇತೀರಣಾ ॥

ತಾ॥ ಈ ಆರುಗುಣಗಳು, ವಶೀ, ವದಾನ್ಯಃ, ಇತ್ಯಾದಿ ಸರ್ವ ಗುಣಗಳಿಗೂ ಉಪಲಕ್ಷಣವೆಂದು ಭಾವ.

ತಾತ್ಪರ್ಯ॥ ಸಂಸಾರದುಃಖ ನಾಶಕರನಾದ ಯಾವ ಪರಮಾತ್ಮನು, ನಮ್ಮಗಳಿಗೆ ಯಜ್ಞದಾನ, ತಪಸ್ಸೇ ಮೊದಲಾದ ಸತ್ಕರ್ಮಗಳಲ್ಲಿ ಬುದ್ಧಿಯನ್ನು ಪ್ರೇರಿಸುವನೋ, ಅಂತಹ ಜಗತ್ಸೃಷ್ಟಿ, ಸ್ಥಿತಿ (ಪಾಲನ) ಸಂಹಾರಾದಿ ಕಾರಣಭೂತನಾದ ಪರಮಾತ್ಮನ, ಸಂಬಂಧಿ ಶ್ರುತಿಪ್ರಸಿದ್ಧವಾಗಿಯೂ, ಆದರಣೀಯವಾಗಿಯೂ, ಇರುವ ಐಶ್ವರ್ಯಾದಿ ಗುಣಸಮೂಹವನ್ನ ಧ್ಯಾನಿಸುವೆವು.

ಆದರೆ ಗುಣಸಮೂಹಕ್ಕೆ ಆದರಣೀಯತ್ವವು ಹೇಗೆ ಕೂಡುವದು ಎಂದರೆ,

ಯಥೋಪಾಸನಂಫಲಪ್ರಾಪ್ತಿಃ,

(ಹೇಗೆ ಉಪಾಸನ ಮಾಡುವನೋ ಹಾಗೆ ಫಲವಂ ಹೊಂದುವನು) ಎಂಬಂತೆ ಭಗವದುಪಾಸನವೂ ಕೂಡಾ ಗುಣಗಳ ದ್ವಾರಾ ಪುರುಷಾರ್ಥಸಾಧಕವು ಲೋಕದಲ್ಲಿಯೂ ಹೀಗೆಯೇ ಕಾಣಬಹುದಾಗಿದೆ. ಅತ್ಯಂತ ಜ್ಞಾನಸಂಕೋಚವುಳ್ಳ ಪಕ್ಷ್ಯಾದಿಗಳು ಕೂಡಾ, ಪಲ್ಲವ, (ಚಿಗುರು) ಪುಷ್ಪಫಲಾದಿ ಗುಣಗಳಿಂದ ಕೂಡಿರುವ ವೃಕ್ಷವನ್ನೇ ಸೇವಿಸುವವು. ಇತರವಾದ ಶುಷ್ಕವೃಕ್ಷವನ್ನು ತ್ಯಜಿಸುವವು.

ಆದಕಾರಣ, ಸ್ವಾಭಾವಿಕವಾಗಿ ಅಸಂಖ್ಯೆಯ ಕಲ್ಯಾಣಗುಣಸಮೂಹವುಳ್ಳವನಾದ ಪ್ರಯುಕ್ತವೇ ಭಗವಂತನು ಉಪಾಸ್ಯನೆಂದು

ಪೇಳಬಹುದು. ತತಶ್ಚ, ಗುಣಸಮೂಹಕ್ಕೆ ಆದರಣೀಯತ್ವವು ಸಿದ್ಧ
ವಾಯಿತು.

## ಗಾಯತ್ರೀಶಿರಸಃ ಯೋಜನಾಂತರಂ,

ಮೂ॥ ಓಮಾಪೋಜ್ಯೋತೀರಸೋಽಮೃತಂಬ್ರಹ್ಮಭೂರ್ಭುವ
ಸ್ಸುವರೋಂ ॥

ತಾತ್ಪರ್ಯ ॥ ಆಪಃ, ಆಪ್ನೋತೀತ್ಯಾಪಃ, "ಎಂಬಂತೆ, ಬ್ರಹ್ಮಾದಿ
ಸ್ತಂಬಪರ್ಯಂತವಾದ ಚೇತನಾಚೇತನಾತ್ಮಕವಾದ ಕಾರ್ಯ ಸಮೂಹವನ್ನ
ಕಾರಣತ್ವೇನ ಹೊಂದಿರುವ" ಪರಮಾತ್ಮನು, (ವ್ಯತ್ಯಯದಿಂದ ಏಕವ
ಚನಕ್ಕೆ ಇಲ್ಲಿ ಬಹುವಚನವಿರುವದು) ಅಥವಾ ಉದಕಕ್ಕೆ ಅಂತರಾತ್ಮ
ನಾದ ಪರಮಾತ್ಮನು.

ಜ್ಯೋತಿಃ, "ಜ್ಯೋತಿಷಾಂ, ಜ್ಯೋತಿಃ" ಎಂಬಂತೆ ಎಲ್ಲರಿಗೂ
ಜ್ಞಾನಕಾರಣನಾದ ಪ್ರಯುಕ್ತ ಪರಂಜ್ಯೋತಿಃ ಎಂದು ಹೇಳಲ್ಪಟ್ಟ
ನಾರಾಯಣನು,

ರಸಃ, "ರಸಗ್ಂಹ್ಯೇವಾಯಂಲಬ್ಧ್ವಾನಂದೀಭವತಿ" ಎಂಬಂತೆ
ಸುಖಹೇತುವಾದವನು.

ಅಮೃತಂ, ಮೋಕ್ಷಕ್ಕೆ ಕಾರಣಭೂತನು, ಇಲ್ಲಿ ಕಾರಣದಲ್ಲಿ ಕಾ
ರ್ಯತ್ವೋಪಚಾರವು.

ಬ್ರಹ್ಮ, "ಮಹತೋಮಹೀಯಾನ್" ಎಂಬಂತೆ, ಸರ್ವ ಪದಾರ್ಥ
ಗಳಿಂದಲೂ ಬೃಹದ್ಗುಣ ವಿಶಿಷ್ಟನು. ಹೀಗೆ, ನಾರಾಯಣ ಪರಂಬ್ರಹ್ಮ
ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧನಾಗಿಯೂ, ಪೂರ್ವೋಕ್ತಗುಣಗಳಿಂ
ಕೂಡಿದವನಾಗಿಯೂ ಇರುವ ನಾರಾಯಣನ ಗುಣಸಮೂಹವನ್ನ ಧ್ಯಾ
ಸುವ, ಎಂದು ಗಾಯತ್ರೀ ಕ್ರಿಯಾಪದದೊಡನೆ ಅನ್ವಯವು.

ಓಂಭೂಃ, ಆದಿಯಾಗಿ, ಗಾಯತ್ರೀಶಿರಃ ಪರ್ಯಂತವೂ, ಏಕಾ
ರ್ಥವಾದ ಪ್ರಯುಕ್ತ, ಗಾಯತ್ರೀಮಂತ್ರಕ್ಕೆ, ಏಕವಾಕ್ಯತ್ವವು.

ಅಥಉಪಸ್ಥಾನಮಂತ್ರಸ್ಯಯೋಜನಾಂತರಂ, ಉತ್ತಮೇಶಿಖರೇ
ದೇವಿ (ವೀ) ಭೂಮ್ಯಾಂಪರ್ವತಮೂರ್ಧನಿ, ಬ್ರಾಹ್ಮಣೇ
ಭ್ಯೋಹ್ಯನುಜ್ಞಾನಂಗಚ್ಛದೇವಿ (ವೀಂ) ಯಥಾಸುಖಂ ।

ಅರ್ಥ॥ ತಾತ್ಪರ್ಯ॥ ಹೇದೇವಿ, ಗಾಯತ್ರಿಯೇ, (ಜಪಮಾಡುವರನ್ನ
ಅನುಗ್ರಹಿಸುವದಕ್ಕೋಸ್ಕರ ನನ್ನ ಪ್ರಾರ್ಥನೆಯಿಂದ ಈ ಭೂಮಿಗೆ
ಬಂದಿರತಕ್ಕ) ನೀನು, ದೇವಿ ಎಂದು ಪದಚ್ಛೇದಪಕ್ಷದಲ್ಲಿ, ಗಾಯತ್ರ್ಯಾ
ವಾಹನ ಮಂತ್ರದಲ್ಲಿ ಹೇಳಲ್ಪಟ್ಟಿರುವಂತೆ ದಾನಾದಿ ಗುಣಯುಕ್ತೆಯಾದ
ನೀನು ಬ್ರಾಹ್ಮಣೇಭ್ಯಃ, "ಬ್ರಹ್ಮಾಧೀಯತೆ, ಇತಿ, ಬ್ರಾಹ್ಮಣಾಃ" ಎಂ
ಬಂತೆ, ಬ್ರಹ್ಮಶಬ್ದವಾಚ್ಯವಾದ ಗಾಯತ್ರೀಮಂತ್ರ ಜಪವಂ ಮಾಡುವನ
ರುಗಳಿಗೆ, ಹಿ, ಯಾವ ಕಾರಣದ್ದೆಸೆಯಿಂದ, ಅನುಜ್ಞಾನಂ-ಅನುಗ್ರಹಾ
ತ್ಮಕ ಜ್ಞಾನವನ್ನು, ದದಾಸಿ- (ಎಂದು ಅಧ್ಯಾಹಾರ) ಕೊಡುವೆಯೋ,
ಆ ಕಾರಣ, ಉತ್ತಮೇ-ಎತ್ತರವಾದ, ಪರ್ವತಮೂರ್ಧನಿ-ಶೃಂಗೇ, ಮೇ
ರು, ವೇಂಕಟ, ಚಿತ್ರಕೂಟ, ರೈವತಕ, ಗೋವರ್ಧನಾದಿ ಕ್ರೀಡಾಪರ್ವ
ತ ಶಿಖರ (ದಲ್ಲಿ) ಗಳಿಗೆ, ಯಥಾಸುಖಂ-ಕ್ರೀಡಾವಿಹಾರ ಸುಖಾನುಗುಣ
ವಾಗಿ, ಗಚ್ಛ-ಪ್ರಯಾಣಮಾಡು.

ಆಸತ್ಯೇನ + ಪುನಾತು, ಇತಿಉಪಸ್ಥಾನಮಂತ್ರಸ್ಯಯೋಜ
ನಾಂತರಂ ॥

ಅರ್ಥ, ತಾತ್ಪರ್ಯ॥ ಸತ್ಯೇನ-ಪರಮಾರ್ಥವಾದ, ನಿತ್ಯವಾದ್ದೆಂದು
ಭಾವ. ರಜಸಾ, (ರಜಶ್ಶಬ್ದವು ಲೋಕಶಬ್ದ ಪರ್ಯಾಯಪದವು, ಸಪ್ತ
ಮ್ಯರ್ಥದಲ್ಲಿ ತೃತೀಯೆ) ಲೋಕದಲ್ಲಿ (ವೈಕುಂಠದಲ್ಲಿ) ವರ್ತಮಾನ, (ಸ್ವ
ಧರ್ಮಾನುಷ್ಠಾನ ದ್ವಾರಾ ಭಗವದಾರಾಧನ ಮಾಡುವ) ಪುರುಷನನ್ನ,
ಅಮೃತಂ, ನಿಶ್ರೇಯಸ, ಮೋಕ್ಷವನ್ನ ಹೊಂದಿಸುವ ಅಪೇಕ್ಷೆಯುಳ್ಳವ
ನಾಗಿ, ಭುವನಾ-ಲೋಕಗಳನ್ನು, ವಿಪಶ್ಯನ್-ಸಾಕ್ಷಾತ್ಕರಿಸುವನಾಗಿ, ಆ,
ವರ್ತಮಾನಃ-ಸರ್ವತ್ರ ಇರುತ್ತಲಿರುವ, ಸವಿತಾ-ಸೃಷ್ಟ್ಯಾದಿ ಜಗದ್ವ್ಯಾ

೧ ಮಂತ್ರಪಾತ್ರದ್ರವ್ಯಯಜ್ಞಾಗ್ನಿ ಮುನಿರ್ಮೋಕ್ಷಪಿತಾಮಹಾಃ । ತಪೋ
ದ್ವಿರೇಫರುದ್ರಾಶ್ಚ ಚಂದ್ರಶ್ಚಬ್ರಹ್ಮಸಂಜ್ಞಿತಾಃ ॥ ಇತಿನಿಘಂಟು.

ಪಾರಕರ್ತೃವಾದ, ದೇವಃ-ವಾಸುದೇವನು, ಹಿರಣ್ಮಯೇನ, ರಥೇನ, ಹಿತ, ರಮಣೀಯವಾದ ಯಾನ (ವಾಹನ) ವಿಶೇಷದಿಂದ, (ಉಪಸ್ಥಾನವಂ ಮಾಡುವ) ನನ್ನನ್ನೂ ತನ್ನ ಸ್ಥಾನವಂ ಹೊಂದಿಸಲಪೇಕ್ಷೆಯುಳ್ಳವನಾಗಿ ಅಭಿಮುಖ (ಇದಿರಾಗಿ) ವಾಗಿ ಬರುವನೆಂದು ಉಪಸ್ಥಾನವಂ ಮಾಡುವನ ಭಾವನೆಯು.

ಉತ್-ಅತ್ಯಂತವಾಗಿ, ತಮಸಃ-ಮೂಲಪ್ರಕೃತಿಗೆ, ಉತ್ತರಂ-ಉತ್ತರತ್ರ ಇರತಕ್ಕ, ಜ್ಯೋತಿಃ-ನಾರಾಯಣಪರೋಜ್ಯೋತಿಃ-ಇತ್ಯಾದಿ ಶ್ರುತ್ಯುಕ್ತ ಲಕ್ಷಣವುಳ್ಳ, ದೇವಂ-ಆಶ್ರಿತರುಗಳಿಗೆ ಇಷ್ಟಾರ್ಥಪ್ರದನಾಗಿಯೂ, ದೇವತಾ-ದೇವರಕ್ಷಕನಾಗಿಯೂ, ಸೂರ್ಯಂ-ಪ್ರಾಣಿಗಳನ್ನು ಚನ್ನಾಗಿ ಕರ್ಮಗಳಲ್ಲಿ ಪ್ರೇರಿಸುವನಾಗಿಯೂ, ಉತ್ತಮಂ-ಉತ್ಕೃಷ್ಟತಮನಾಗಿಯೂ, ಜ್ಯೋತಿಃ-ಸೂರ್ಯಾದಿ ತೇಜಸ್ಸುಗಳಿಗೆ ಪ್ರಕಾಶಕನಾಗಿಯೂ ಇರುವ, ದೇವಂ-ಸ್ವಾಮಿಯನ್ನ, ಪರಿಪಶ್ಯಂತೋವಯಂ-ನೋಡುವರಾಗಿ ನಾವು, ಶರಣಂ, ಅಗನ್ಮ, ಶರಣಹೊಂದಿದೆವು.

ತ್ಯಂ-ಆ ಪ್ರಸಿದ್ಧನಾದ, ಜಾತವೇದಸಂ-ಆಶ್ರಿತರುಗಳಿಗೆ ಸುಖಪ್ರಾಪಕನಾದ, ದೇವಂ-ಸೂರ್ಯಂ, ಪರಮಾತ್ಮನಾದ ವಾಸುದೇವನನ್ನು, ಕೇತವಃ-ಕೇತು (ಧ್ವಜ) ಗಳೋಪಾದಿಯಲ್ಲಿ ಪ್ರಕಾಶಕರಾದ ಭೃಗುಪರಾಶರ ನಾರದಾದಿಗಳು, ವಿಶ್ವಾಯ-ಪ್ರಪಂಚದ, ದೃಶೇ-ದರ್ಶನಕ್ಕೋಸ್ಕರ, (ಭೂತ, ಭವಿಷ್ಯತ್, ವರ್ತಮಾನಾದಿ ಜ್ಞಾನಕ್ಕೋಸ್ಕರ) ಉತ್-ವಹಂತಿ, ಹೃದಯದಲ್ಲಿ ಯೋಗದಿಂದ ಧ್ಯಾನಿಸುವರು. (ನಾವೂ ಹಾಗೆ ಭಾವಿಸುವ ಎಂದು ವಾಕ್ಯಶೇಷವು.)

(ಚಿತ್ರಮಿತ್ಯಾದಿ)

ದೇವಾನಾಂ, (ಅಂಗಪ್ರಾಯರಾದ) ಇಂದ್ರಾದಿ ದೇವತೆಗಳಿಗೆ, ಚಿತ್ರಂ, ಅನೀಕಂ, ಪೂಜಾರ್ಹವಾದ ಶಿರಸ್ಸು) ಶಿರಸ್ಸಿನೋಪಾದಿಯಲ್ಲಿ ಪ್ರಧಾನವಾಗಿಯೂ, ಮಿತ್ರಸ್ಯ-ಸೂರ್ಯನಿಗೂ, ವರುಣಸ್ಯ-ವರುಣನಿಗೂ, ಅಗ್ನೇಃ-ಅಗ್ನಿಗೂ, (ಇದು ಇತರ ದೇವಮನುಷ್ಯರಿಗೂ ಉಪಲಕ್ಷಣವು) ಚಕ್ಷುಃ-ಪ್ರಕಾಶಹೇತುವಾದ, ಪರಂ-ಬ್ರಹ್ಮನು, ಉದಗಾತ್-ನನ್ನ ಅಂತಃಕರಣದಲ್ಲಿ ಆವಿರ್ಭವಿಸಿದನು. (ಹೀಗೆ ಉಪಸ್ಥಾತೃವಿನ ಭಾವನೆಯು)

ಅಥವಾ, ದೇವಾನಾಂ, ಅನೀಕಂ, (ಅವಭಾಸಂತಇತಿದೇವಾಃ, ರಶ್ಮಯಃ, ತೇಷಾಮನೀಕಂಸಮೂಹಃ ಇತಿಭಾಷ್ಯಂ) ತೇಜೋರಾಶಿಯಾಗಿಯೂ, "ಮಿತ್ರಸ್ಯ, ವರುಣಸ್ಯಾಗ್ನೇಃಚಕ್ಷುಃ" ಸೂರ್ಯ ವರುಣ ಅಗ್ನ್ಯಾದಿಗಳಿಗೆ ಕಾಂತಿಹೇತುವಾಗಿಯೂ, ಸೂರ್ಯಃ-ಪ್ರಾಣಿಗಳನ್ನು ಕರ್ಮಗಳಲ್ಲಿ ಚನ್ನಾಗಿ ಪ್ರೇರಿಸುವವನಾಗಿಯೂ, ಜಗತಃತಸ್ಥುಷಶ್ಚ-ಜಂಗಮ ಸ್ಥಾವರಗಳೆಂಬ ಆತ್ಮಸಮೂಹಕ್ಕೆ, ಆತ್ಮಾ-ಅಂತರಾತ್ಮನಾದ ಪರಮಾತ್ಮನು, ದ್ಯಾವಾಪೃಥಿವೀ-ಭೂ, ಸ್ವರ್ಗ, ಮತ್ತು ತನ್ಮಧ್ಯವರ್ತಿ ಆಕಾಶವನ್ನ ಕೂಡಾ, ಆಪ್ರಾಃ-ತುಂಬಿಸುವದು, (ತೇನೇದಂಪೂರ್ಣಂ ಪುರುಷೇಣಸರ್ವಂ, ಎಂಬಂತೆ ಆ ಪರಮಾತ್ಮನಿಂದಲೇ ಸಕಲ ಜಗತ್ತೂ ಪೂರ್ಣವಾಗಿರುವದೆಂದು ಭಾವವು) ಇಂತಹ ಪರಮಾತ್ಮನು ನನ್ನ ಮನಸ್ಸಿನಲ್ಲಿ ಆವಿರ್ಭವಿಸಿದನೆಂದು ಭಾವನೆ.

(ತದಿತ್ಯಾದಿ) ತತ್-ಪೂರ್ವಮಂತ್ರ ಪ್ರಸಿದ್ಧವಾಗಿಯೂ, ಚಕ್ಷು-ವಿಶ್ವತಶ್ಚಕ್ಷುರುತ ವಿಶ್ವತೋಮುಖಃ, ಇತ್ಯಾದಿ ಶ್ರುತ್ಯನುಸಾರ, ಚಕ್ಷುಃ ಎಂದು ವ್ಯಪದೇಶವುಳ್ಳದ್ದಾಗಿಯೂ, ಅಥವಾ, ಚಕ್ಷುಃ, ಜ್ಞಾನಹೇತುವಾಗಿಯೂ, ದೇವಹಿತಂ, ಸೂರ್ಯಾದಿ ಸರ್ವ ದೇವತೆಗಳಿಗೂ ಹಿತಕರವಾಗಿಯೂ, ಪುರಸ್ತಾತ್-ಉಚ್ಚರತ್-ಭಕ್ತರಮನಸ್ಸಿನಲ್ಲಿ ಭಜನಾತ್ಪೂರ್ವವೇ ಸಾನ್ನಿಧ್ಯವುಳ್ಳದ್ದಾಗಿಯೂ, ಶುಕ್ರಂ-ನಿರ್ಮಲವಾಗಿಯೂ, (ಚಕ್ಷುಶ್ಶಬ್ದವಾಚ್ಯವಾಗಿದ್ದಾಗ್ಯೂ, ಕಾಚ, ಪಟಲಾದಿ, ನೇತ್ರರೋಗರಹಿತವಾಗಿ, ಸುಜ್ಞಾನಹೇತು ಭೂತವಾಗಿರುವದೆಂದು ಭಾವ) ಇರುವ ಸೂರ್ಯಾದಿ ಶಬ್ದವಾಚ್ಯವಾದ ಪರಂಬ್ರಹ್ಮನನ್ನ, ಪಶ್ಯೇಮ, ಶರದಶ್ಶತಂ, ಶತಸಂಖ್ಯಾ ವರ್ಷಗಳಲ್ಲಿ ಸಾಕ್ಷಾತ್ಕರಿಸುವ, (ಭಗವದನುಗ್ರಹದಿಂದಲೇ ನೋಡುವ ಎಂದು ತನ್ನ ಅಭಿಲಾಷೆಯು, ಉತ್ತರತ್ರ ಹೀಗೆಯೇ ತಿಳಿಯತಕ್ಕದ್ದು) ಜೀವೇಮಶರದಶ್ಶತಂ-ಅಪರೋಕ್ಷಸ್ಕರವೇ ಜೀವಿಸುವ, ನಂದಾಮ, ಶರದಶ್ಶತಂ, ಅಷ್ಟುಕಾಲವೂ ಭಗವದ್ಭಕ್ತಿರಸದಿಂದ ಸಮೃದ್ಧರಾಗುವ, ಮೋದಾಮಶರದಶ್ಶತಂ-ಭಗವದನುಭವಪ್ರೀತ ಮನಸ್ಕರಾಗಿರುವ, ಭವಾಮಶರದಶ್ಶತಃ-ಸತ್ತಾವಿಶಿಷ್ಟರಾಗುವ, ಶೃಣವಾಮ ಶರದಶ್ಶತಂ,-ಭಗವತ್ಕಥಾಶ್ರವಣಮಾಡುವ, ಪ್ರಬ್ರವಾಮ-ಭಗವತ್ಸ್ತೋತ್ರಾದಿಗಳನ್ನು ಪ್ರವಚನ ಮಾಡುವ, ಅಜೀತಾಸ್ಯಾಮಶರದಶ್ಶತಂ-ವಿರೋಧಿಗಳಿಂದಲೂ, ಜನ್ಮಾಂತ

ರೀಯ ಪಾಪಗಳಿಂದಲೂ, ಇಂದ್ರಿಯಗಳಿಂದಲೂ, ರಾಕ್ಷಸಾದಿಗಳಿಂದಲೂ ಪರಾಜಯವನ್ನುಹೊಂದದೇ ಇರುವ, ಜ್ಯೋಕ್ಚ-ಬಹುಕಾಲಪರ್ಯಂತ, ಸೂರ್ಯಂ-ಪರಮಾತ್ಮನನ್ನ, ದೃಶೇ-ನೋಡುವ,

(ಜನ್ಮಾಂತರೀಯವಾದ ಕರ್ಮಾನುಸಾರ ನಾವು ಯಾವ ಜನ್ಮವನ್ನ ಹೊಂದಿದಾಗ್ಯೂ ಆಯಾಯಾ ಜನ್ಮದಲ್ಲಿ ಭಗವದನುಗ್ರಹದಿಂದ, ಭಗವದನುಸಂಧಾನ ಯೋಗ್ಯರಾಗಿರುವ ಎಂದು ಪರಮತಾತ್ಪರ್ಯ)

ಯಾವ ಭಗವಂತನು, ಮಹತೋಣರ್ಣವಾತ್-ಮಹಾಸಮುದ್ರ (ಕ್ಷೀರಸಮುದ್ರ) ದ್ದೆಸೆಯಿಂದ, ಉದಗಾತ್-ಜಗದ್ರಕ್ಷಣಾರ್ಥವಾಗಿ ರಾಮ ಕೃಷ್ಣಾದಿರೂಪೇಣ ಭೂಮಿಯಲ್ಲಿ ಅವತರಿಸುವನೋ (ಅಂತಹ ಪರಮಾತ್ಮನನ್ನ ಬಹುಕಾಲ ನೋಡುವ ಎಂದು ಪೂರ್ವವಾಕ್ಯದೊಡನೆ ಸಂಬಂಧವು)

ವಿಭ್ರಾಜಮಾನಸ್ಸರಿರಸ್ಯಮಧ್ಯಾತ್-ಸಮುದ್ರಮಧ್ಯವನ್ನ ಹೊಂದಿ ಪ್ರಕಾಶಿಸುವನಾಗಿಯೂ, ವೃಷಭಃ-ಸರ್ವಶ್ರೇಷ್ಠನಾಗಿಯೂ, ರೋಹಿತಾಕ್ಷಃ-ಸೂರ್ಯಕಿರಣ ವಿಕಸಿತವಾದ ಕಮಲದೋಪಾದಿಯಲ್ಲಿ ಕೆಂಪಾದ ಕಣ್ಣುಗಳುಳ್ಳವನಾಗಿಯೂ ಇರುವ, ಸೂರ್ಯೋ, ವಿಪಶ್ಚಿತ್, ಆ ಸರ್ವಜ್ಞನಾದ ಪರಮಾತ್ಮನು, ಮನಸಾ-ಅನುಗ್ರಹವಿಶಿಷ್ಟವಾದ ಮನಸ್ಸಿನಿಂದ, ಮಾಂ-ನನ್ನನ್ನ ಪುನಾತು-ಭಗವದಾರಾಧನಕ್ಕೆ ಯೋಗ್ಯನಾಗುವಂತೆ ಶುದ್ಧನನ್ನಾಗಿ ಮಾಡಲಿ.

## ಅಥದೇವ ಪೂಜಾವಿಧಿಃ.

ನಾರದಃ॥ ಸರ್ವೇಷಾಮೇವಲೋಕಾನಾಂಗುರುರ್ನಾರಾಯಣೋಹರಿಃ । ತಸ್ಯಸಂಪೂಜನಂಕಾರ್ಯಂಸರ್ವಪಾಪಹರಂಹಿತತ್॥

ತಾತ್ಪರ್ಯ॥ ಸರ್ವರಿಗೂ ನಾರಾಯಣನೇ ಪರಮಾಚಾರ್ಯನಾದ ಪ್ರ

---

ಮಿತ್ರಸ್ಯ, ಎಂಬ ಅನುವಾಕಮಂತ್ರಕ್ಕೆ ಮಾತ್ರ, ಶ್ರುತಪ್ರಕಾಶಿಕಾಚಾರ್ಯಕೃತ ಭಾಷ್ಯಾನುಸಾರ ಟೀಕೆಯು ಬರಿಯಲ್ಪಟ್ಟಿಲ್ಲ, ಸಾಯಂ ಸಂಧ್ಯಾಪ್ರಕರಣದಲ್ಲಿ ಬರಿಯಲ್ಪಡುತ್ತೆ.

ಸಂಧ್ಯಾಮಂತ್ರಗಳಲ್ಲಿ, ಯೋಜನಾಂತರಂ ಎಂದು ಹಿಂದೆ ಬರೆದಿರುವದೂ ಈ ಭಾಷ್ಯಾನುಸಾರವೇ ಎಂದು ಅರಿಯಲ್ಪಡತಕ್ಕದ್ದು.

ಯುಕ್ತ ಅವನ ಪೂಜೆಯು ಸರ್ವರಿಂದಲೂ ಅನುಷ್ಠಿಸಲ್ಪಡತಕ್ಕದ್ದು. ಆ ಭಗವದಾರಾಧನೆಯಿಂದ ಸಕಲ ಪಾಪಗಳೂ ನಾಶವಾಗುವವು.

ಪಾದ್ಮೆ॥ ಪೌರುಷೇಣೈವಸೂಕ್ತೇನಪ್ರತ್ಯೃಚಂಕಮಲಾಸನ।
ನಾರಾಯಣಾನುವಾಕೇನವಿಷ್ಣುಸೂಕ್ತೇನವಾರ್ಚಯೇತ್॥

ತಾತ್ಪರ್ಯ॥ ಪುರುಷಸೂಕ್ತ ಋಕ್ಕುಗಳಿಂದಲೋ, ನಾರಾಯಣಾನುವಾಕಮಂತ್ರದಿಂದಲೋ, ವಿಷ್ಣುಸೂಕ್ತದಿಂದಲೋ, ಭಗವದರ್ಚನವಂ ಮಾಡತಕ್ಕದ್ದು.

ವ್ಯಾಸಃ॥ ಯೋಮೋಹಾದಥವಾಲಸ್ಯಾದಕೃತ್ವಾವಿಷ್ಣುಪೂಜನಂ।
ಭುಂಕ್ತೇಸಯಾತಿನರಕಾನ್ಸೂಕರೇಷ್ವಭಿಜಾಯತೇ॥

ತಾತ್ಪರ್ಯ॥ ಯಾವವನು, ಅಜ್ಞಾನದಿಂದಲೋ, ಸೋಮಾರಿತನದಿಂದಲೋ, ವಿಷ್ಣುಪೂಜನವಂ ಮಾಡದೇ, ತಾನು ಭೋಜನಮಾಡುವನೋ ಅವನು ನರಕಯಾತನೆಯನ್ನು ಹೊಂದಿ ಸೂಕರ (ಹಂದಿ) ಜನ್ಮದಲ್ಲಿ ಜನಿಸುವನು.

ವಿಷ್ಣುಧರ್ಮೋತ್ತರೇ॥ ವಿಷ್ಣುಪೂಜಾವಿಹೀನಸ್ಯದತ್ತಂಚೇಷ್ಟಂಹುತಂಶ್ರುತಂ। ತಪಶ್ಚವ್ಯರ್ಥತಾಂಯಾತಿಪ್ರೇತಾಲಂಕಾರವದ್ವಿಜ॥

ತಾತ್ಪರ್ಯ॥ ಭಗವದಾರಾಧನವಂ ಮಾಡದ ಮನುಷ್ಯನಿಂದ ಮಾಡಲ್ಪಡುವ, ತಪಸ್ಸು, ಯಾಗ, ಹೋಮ, ದಾನ, ಅಧ್ಯಯನಾದಿಗಳೆಲ್ಲವೂ, ಶವಾಲಂಕಾರದೋಪಾದಿಯಲ್ಲಿ ವ್ಯರ್ಥಗಳು.

ಪಾದ್ಮೆ॥ ಆದ್ಯಯಾವಾಹಯೇದ್ದೇವಂಆಸನಂಚದ್ವಿತೀಯಯಾ।
ಪಾದ್ಯಂತೃತೀಯಯಾರ್ಘ್ಯಂಚಚತುರ್ಥ್ಯಾವಿತರೇದ್ವಿಜಾ।
ಪಂಚಮ್ಯಾಚಮನಂಸ್ನಾನಂಷಷ್ಠ್ಯಾಸಪ್ತಮ್ಯಾಂಬರಂ। ಉಪವೀತಮಷ್ಟಮ್ಯಾನವಮ್ಯಾಗಂಧಲೇಪನಂ। ಪುಷ್ಪಂದಶಮ್ಯೈಕಾದಶಯಾ, ದ್ವಾದಶ್ಯಾಧೂಪದೀಪಕೌ।ನಿವೇದನಂತ್ರಯೋದಶ್ಯಾಚತುರ್ದಶ್ಯಾನಮಸ್ಕೃತಿಃ। ಪ್ರದಕ್ಷಿಣಂಪಂಚದಶ್ಯಾಷೋಡಶ್ಯೋದ್ವಾಸನಂಹರೇಃ॥

ತಾತ್ಪರ್ಯ॥ ಪುರುಷಸೂಕ್ತ ಋಕ್ಕುಗಳಿಗೆ ಆರಾಧನೆದಲ್ಲಿ ವಿನಿಯೋಗ ಕ್ರಮವು ಪಾದ್ಮದಲ್ಲಿ ಹೇಳಲ್ಪಟ್ಟಿರುವದು. ಆರಾಧನದಲ್ಲಿ ಪ್ರಥಮ ಋಕ್ಕಿನಿಂದ, ಭಗವದಾವಾಹನವನ್ನೂ, ಎರಡನೇ ಋಕ್ಕಿನಿಂದ, ಆಸನಸ ಮರ್ಪಣೆಯನ್ನೂ, ಮಾಡತಕ್ಕದ್ದು.

ಅನಂತರ, ೩-೪-೫-೬-೭-೮-೯-೧೦-೧೧-೧೨-೧೩, ನೇ ಋಕ್ಕು ಗಳಿಂದ ಯಥಾಕ್ರಮವಾಗಿ, ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನ, ವಸ್ತ್ರ, ಯಜ್ಞೋಪವೀತ, ಗಂಧ, ಪುಷ್ಪ, ಧೂಪ, ದೀಪ, ನಿವೇದನಗ ಳನ್ನ ಸಮರ್ಪಿಸಿ ೧೪ನೇ ಋಕ್ಕಿನಿಂದ ನಮಸ್ಕರಿಸಿ, ೧೫ನೇ ಋಕ್ಕಿನಿಂದ ಪ್ರದಕ್ಷಿಣಮಾಡಿ, ೧೬ನೇ ಋಕ್ಕಿನಿಂದ ಉದ್ವಾಸನವಂ ಗೈದು ಆರಾಧನ ಪೂರ್ತಿಯಂ ಮಾಡತಕ್ಕದ್ದು.

ಇವುಗಳೇ ಷೋಡಶೋಪ ಚಾರಗಳೆನಿಸುವವು.

ಸ್ಮೃತಿರತ್ನಾಕರೇ ವಿಷ್ಣುಮಂದಿರೇ } ಹವಿರ್ದಾನಂತ್ರಿಕಾಲೇಷುಉತ್ತಮೋತ್ತಮಮು ಚ್ಯತೇ । ದ್ವಯೋಃ ಮಧ್ಯಮಂಪ್ರೋಕ್ತಂಏಕ ಕಾಲೇ । ಧಮಂಹವಿಃ ॥

ತಾತ್ಪರ್ಯ॥ ತ್ರಿಸಂಧ್ಯೆಗಳಲ್ಲಿಯೂ ಪೂಜಾಪುರಸ್ಸರವಾಗಿ ಭಗ ವಂತನಿಗೆ ಹವಿರ್ನಿವೇದನವು ಅತ್ಯುತ್ತಮವು.

ಎರಡುವೇಳೆ ನಿವೇದನವು ಮಧ್ಯಮವು, ಏಕಕಾಲದಲ್ಲಿ ಮಾತ್ರ ನಿವೇದನಮಾಡುವದು ಅಧಮವೆನಿಸುವದು.

ಶಾಂಡಿಲ್ಯಃ॥ ತ್ರಿಸಂಧ್ಯಂಕಾರಯೇದ್ಬಾಲಾನ್ಪ್ರಣಾಮಂದೇವಪಾದ ಯೋಃ । ಪುತ್ರಃಪ್ರೇಷ್ಯಸ್ತಥಾಶಿಷ್ಯಃಇತ್ಯೇವಂಚನಿವೇದ ಯೇತ್ ॥

ತಾತ್ಪರ್ಯ ॥ ಇವನು ಪುತ್ರ, ಇವ ಶಿಷ್ಯ, ಇವ ಭೃತ್ಯ ಎಂದು ಸಂ ಬಂಧ ಪುರಸ್ಸರವಾಗಿ, ಬಾಲಕರುಗಳನ್ನು, ತ್ರಿಸಂಧ್ಯೆ (ಪ್ರಾತಃ, ಮ ಧ್ಯಾಹ್ನ, ಸಾಯಂಕಾಲಗಳಲ್ಲಿ) ಗಳಲ್ಲಿಯೂ, ಭಗವತ್ಸನ್ನಿಧಿಯಲ್ಲಿ ನಮ ಸ್ಕಾರಮಾಡಿಸಿ, ಹೇಳುವದು, (ನಿವೇದನವು ಶರಣಾಗತಿ ಪರ್ಯಾಯ ವೆಂದೂ ಹೇಳುವರು.)

ಶಾಂಡಿಲ್ಯಃ॥ ವೈಶೇಷಿಕೇಷುಕುರ್ವೀತದಿವಸೇಷುವಿಶೇಷವಿತ್।ಪಾಕಂಪಾಯಸಪೂರ್ವಾಣಾಂ ಸರ್ವೇಷಾಂವಾಯಥಾಬಲಂ । ಸಂಕ್ರಾಂತಿರ್ಜನ್ಮನಕ್ಷತ್ರಂ ಶ್ರವಣಂದ್ವಾದಶೀದ್ವಯಂ। ಪರ್ವದ್ವಯಂಸಮುದ್ದಿಷ್ಟಂಸವಿಶೇಷಕ್ರಿಯಾವಿಧೌ ॥ ಚಂದ್ರಸೂರ್ಯೋಪರಾಗೇಚ ಪ್ರಾದುರ್ಭಾವದಿನೇಹರೇಃ । ಮಾಸರ್ಕ್ಷೇಷುಚ ಪುಣ್ಯೇಷುವಿಶೇಷಾರಾಧನಂವಿದುಃ । ದುರ್ನಿಮಿತ್ತೇಚದುಸ್ವಪ್ನೇಸಂಜಾತೇಚಮಹಾಭಯೇ ॥ ಆಗತೇಷುಚಭಕ್ತೇಷುಕುರ್ಯಾದ್ವೈಶೇಷಿಕಾಃಕ್ರಿಯಾಃ ॥

ತಾತ್ಪರ್ಯ॥ ಸಂಕ್ರಮಣ, ಜನ್ಮನಕ್ಷತ್ರ, ಶ್ರವಣನಕ್ಷತ್ರ, ಶುಕ್ಲ, ಕೃಷ್ಣದ್ವಾದಶಿಗಳು, ಪೌರ್ಣಮಾಸೀ, ಅಮಾವಾಸ್ಯ, ಚಂದ್ರ, ಸೂರ್ಯಗ್ರಹಣ, ಭಗವತ್ಪ್ರಾದುರ್ಭಾವದಿನ (ಜಯಂತಿಗಳು) ಭಗವಂತನ ಮಾಸನಕ್ಷತ್ರಗಳು, ಈ ಪೂರ್ವೋಕ್ತ ವಿಶೇಷ ದಿವಸಗಳಲ್ಲಿ, ಯೋಗ್ಯತಾನುಗುಣವಾಗಿ ಪಾಯಸವೇ ಮೊದಲಾದ ಭಕ್ಷ್ಯಾದಿ ನಿವೇದನಪೂರ್ವಕವಾಗಿ ವಿಶೇಷಾರಾಧನ ಮಾಡಬೇಕು.

ದುರ್ನಿಮಿತ್ತಗಳಲ್ಲಿಯೂ, ದುಸ್ವಪ್ನವಾದ ಸಂದರ್ಭದಲ್ಲಿಯೂ, ಮಹಾಭಯಪ್ರಾಪ್ತಿಯಲ್ಲಿಯೂ, ಭಗವದ್ಭಕ್ತರ ಆಗಮನದಲ್ಲಿಯೂ ವಿಶೇಷಾರಾಧನ ಮಾಡತಕ್ಕದ್ದು.

ಪಾದ್ಮೇ॥ ಸಾಲಿಗ್ರಾಮಶಿಲಾಯಾಸ್ತು ನಚಸಂಪ್ರೋಕ್ಷಣಂಸ್ಮೃತಂ । ನಪ್ರತಿಷ್ಠಾವಿಧಾತವ್ಯಾನಚೈವಾವಾಹನಾದಿಕಂ ॥ ಸಾಲಿಗ್ರಾಮಶಿಲಾಯತ್ರ ಪೂಜ್ಯತೇಭಗವನ್ಮಯೀ । ತದ್ದೇಶೇ ಯೋಜನಾದರ್ವಾಕ್ ಮೃತೋನಿರ್ವಾಣಮೃಚ್ಛತೇ॥

ತಾತ್ಪರ್ಯ॥ ಸಾಲಿಗ್ರಾಮಾರಾಧನದಲ್ಲಿ, ಸಂಪ್ರೋಕ್ಷಣ, ಪ್ರತಿಷ್ಠಾ, ಆವಾಹನ, ವಿಸರ್ಜನಾದಿಗಳು, ಮಾಡಲ್ಪಡತಕ್ಕದ್ದಿಲ್ಲ.

ಸಾಲಿಗ್ರಾಮ ಶಿಲಾರಾಧನವು ಎಲ್ಲಿ ನಡಿಯುವದೋ ಆ ಪ್ರದೇಶಕ್ಕೆ ಒಂದು ಯೋಜನಪರ್ಯಂತ ಮೃತನಾದಾಗ್ಯೂ ಮೋಕ್ಷವನ್ನು ಹೊಂದುತ್ತಾನೆ.

ಬೋಧಾಯನಃ॥ ಪ್ರತಿಮಾಸ್ಥಾನೇಷ್ವಪ್ಸ್ವಗ್ನೌ ಆವಾಹನವಿಸರ್ಜನವರ್ಜಂಸರ್ವಂಸಮಾನಂ, ಇತ್ಯಾದಿ ।

ತಾತ್ಪರ್ಯ॥ ಪ್ರತಿಮೆಗಳಲ್ಲಿ, ಉದಕದಲ್ಲಿ, ಅಗ್ನಿಯಲ್ಲಿ ಸಹಾ, ಆವಾಹನ, ವಿಸರ್ಜನ ವಿನಾ ಸರ್ವವೂ ಸಮಾನವು.

## ಅಥ ಧನುರ್ಮಾಸಪೂಜಾ.

ಬ್ರಹ್ಮಾಂಡೇ॥ ಚಾಪಂಗತೇದಿವಾನಾಥೇ ಉತ್ಥಾಪ್ಯಶಯನಾದ್ಧರಿಂ । ಉಷಃಕಾಲೇತುಸಂಪ್ರಾಪ್ತೇ ಅರ್ಚಯಿತ್ವಾಜನಾರ್ದನಂ।ಉಪಚಾರೈಷ್ಷೋಡಶಭಿಃಮುದ್ಗಾನ್ನಂಚನಿವೇದಯೇತ್॥

ತಾತ್ಪರ್ಯ॥ ಧನುರ್ಮಾಸದಲ್ಲಿ, ಉಷಃಕಾಲದಲ್ಲಿ ಭಗವಂತನನ್ನ ಷೋಡಶೋಪಚಾರಗಳಿಂದ ಆರಾಧಿಸಿ ಮುದ್ಗಾನ್ನ ನಿವೇದನ ಮಾಡತಕ್ಕದ್ದು. (ಮುದ್ಗಾನ್ನ=ಪೊಂಗಲ್)

ವೈಖಾನಸೇ ॥ ಬ್ರಾಹ್ಮೇಮುಹೂರ್ತೇಸಂಪ್ರಾಪ್ತೇರವೌಧನುಷಿಸಂಸ್ಥಿತೆ॥ ಸ್ನಾನಂಕೃತ್ವಾನೃಸೂಕ್ತೇನಷೋಡಶೈರುಪಚಾರಕೈಃ । ನಗರಗ್ರಾಮರಕ್ಷಾರ್ಥಂಅರ್ಚಯಿತ್ವಾಶ್ರಿಯಃಪತಿಂ। ಸಹಸ್ರವಾರ್ಷಿಕೀಪೂಜಾದಿನೇನೈಕೇನಲಭ್ಯತೆ ॥

ತಾತ್ಪರ್ಯ॥ ಧನುರ್ಮಾಸದಲ್ಲಿ ಬ್ರಾಹ್ಮಮುಹೂರ್ತದಲ್ಲಿ ಸ್ನಾನವ ಮಾಡಿ ಪುರುಷಸೂಕ್ತದಿಂದ ಷೋಡಶೋಪಚಾರಪೂರ್ವಕ ಭಗವಂತನಾದ ಶ್ರಿಯಃಪತಿಯನ್ನ ಆರಾಧಿಸಿದ್ದಾದರೆ, ರಾಷ್ಟ್ರಾದಿ ರಕ್ಷಣವಾಗುವದು. ಅಲ್ಲದೇ ಸಹಸ್ರವರ್ಷ ಪೂಜಾಫಲವು ಏಕದಿನಾರಾಧನದಿಂದ ಪ್ರಾಪ್ತವಾಗುವದು.

ಸ್ಮೃತಿರತ್ನಾಕರೇ॥ ಪ್ರಾಗುದಯಾದೇವಾರ್ಚನಂವಿಷ್ಣವೇಚಾರ್ನಂತರಮೇವಸಂಧ್ಯೋಪಾಸನಂ, ಇತಿ ॥

ತಾತ್ಪರ್ಯ॥ ಉದಯಾತ್ಪೂರ್ವವೇ ಆರಾಧನಮಾಡಿ ಅನಂತರವೇ ಸಂಧ್ಯೋಪಸ್ಥಾನಾದಿಗಳು ಅನುಷ್ಠಿಸಲ್ಪಡತಕ್ಕವುಗಳು.

# ಅವತಾರಿಕಾ.

ದೇವಪೂಜಾವಿಧಾನವು ಅನೇಕ ಗ್ರಂಥಗಳಲ್ಲಿ ಅನೇಕಪ್ರಕಾರವಾಗಿ ಹೇಳಲ್ಪಟ್ಟಿರುವದು.

ವೇದೇಷುಪೌರುಷಂಸೂಕ್ತಂಪುರಾಣೇಷುಚವೈಷ್ಣವಂ । ಭಾರತೇ
ಭಗವದ್ಗೀತಾಧರ್ಮಶಾಸ್ತ್ರೇಷುಮಾನವಂ ॥

ಎಂಬಂತೆ, ವೇದಗಳಲ್ಲಿ ಪುರುಷಸೂಕ್ತವೂ, ಪುರಾಣಗಳಲ್ಲಿ ವಿಷ್ಣುಪುರಾಣವೂ, ಭಾರತದಲ್ಲಿ ಭಗವದ್ಗೀತೆಯೂ, ಧರ್ಮಶಾಸ್ತ್ರಗಳಲ್ಲಿ ಮನುಸ್ಮೃತಿಯೂ, ಮುಖ್ಯವಾದುವುಗಳು. (ಇದಂಪುರುಷಸೂಕ್ತಂಹಿಸರ್ವವೇದೇಷುಪಠ್ಯತೆ,) ಈ ಪುರುಷಸೂಕ್ತವು ನಾಲ್ಕುವೇದಗಳಲ್ಲಿಯೂ ಪಠಿತವಾಗಿರುವದು.

ಋಗ್ವೇದದಲ್ಲಿ (೧೬) ಋಕ್ಕುಗಳೂ, ತೈತ್ತರೀಯ-ವಾಜಸನೇಯಗಳಲ್ಲಿ (೧೮-೧೬) ಋಕ್ಕುಗಳೂ, ಸಾಮಾಥರ್ವಣಗಳಲ್ಲಿ ಕಿಂಚಿನ್ನ್ಯೂನಾಧಿಕ ಋಕ್ಕುಗಳೂ, ಪಠಿತವಾಗಿರುವವು.

ಶೌನಕ ನಾರದಾದಿಗಳೆಲ್ಲರೂ ಪುಂಸೂಕ್ತ ಋಕ್ಕುಗಳಿಂದಲೇ ಆರಾಧನೆಯು ಮುಖ್ಯವೆಂದು ಹೇಳಿರುತ್ತಾರೆ.

ಶ್ರೀಭಾಷ್ಯಕಾರೀಯ ನಿತ್ಯ, ತದ್ವ್ಯಾಖ್ಯಾರೂಪ ಶ್ರೀವಂಗಿ ವಂಶೇಶ್ವರಕಾರಿಕಾ, ಗೋಪಾಲ ದೇಶಿಕಾಹ್ನಿಕಾದಿ ಗ್ರಂಥಗಳಲ್ಲಿ ಭಗವಚ್ಛಾಸ್ತ್ರರೀತ್ಯಾ ಆರಾಧನಾಕ್ರಮಗಳು ಹೇಳಲ್ಪಟ್ಟಿವೆ.

ಅದರಲ್ಲಿಯೂ ವಿಶೇಷವಾಗಿ ವಿಗ್ರಹಾರಾಧನ ಕ್ರಮಗಳೇ ವಿಶೇಷವಾಗಿ ಹೇಳಲ್ಪಟ್ಟಿರುವವು. ಮಹಾಭೂತಶುದ್ಧಿ, ಆಧಾರ ಪೀಠಾದಿಕ್ರಮಗಳು ವಿಸ್ತೃತವಾಗಿವೆ. ಬಿಂಬಾದಿಗಳನ್ನುವಿನಾ ಅನ್ಯತ್ರ ಪೂಜಾಸಂದರ್ಭದಲ್ಲಿ ಆವಾಹನಾದಿ ಕ್ರಮಗಳೂ ವಿವರಿಸಲ್ಪಟ್ಟು ಇತರ ತಂತ್ರಗಳೂ ವಿವರಿಸಲ್ಪಟ್ಟಿವೆ.

ತದ್ರೀತ್ಯಾ ಅನುಷ್ಠಾನ ಮಾಡಬೇಕಾದರೆ(ಆರಾಧನ ಮಾಡಬೇಕಾದರೆ) ನಿಕೃಷ್ಟಪಕ್ಷ ನಾಲ್ಕು ಘಳಿಗೆಗೆ ಕಮ್ಮಿ ಆಗಲಾರದು.

ಪ್ರಕೃತಕಾಲದಲ್ಲಿ ಅಸ್ಮದಾದಿಗಳಿಗೆ ಮನೋದಾರ್ಢ್ಯವಿಲ್ಲದ ಪ್ರಯುಕ್ತ, ತದ್ರೀತ್ಯಾ ಅನುಷ್ಠಾನವು ಶ್ರಮವಾಗಿರುವದು.

ಆದಕಾರಣ ಪ್ರಧಾನವಾದ ಆರಾಧನಕ್ಕೆ ಲೋಪವಿಲ್ಲದಂತೆ, ನಿತ್ಯಶಃ ಅನುಷ್ಠಿಸಲು ಅರ್ಹವಾಗುವಂತೆ ಪ್ರಯೋಗವು ಮುಂದೆ ಬರಿಯಲ್ಪಡುವದು.

ಮನೋದಾರ್ಢ್ಯವೂ, ವಿಳಂಬವನ್ನ ಸಹಿಸಲು ಅನುಕೂಲತೆಯೂ ಉಳ್ಳವರು ಇತರ ಆಹ್ನಿಕಗಳಪ್ರಕಾರ ಅನುಷ್ಠಿಸುವದೇ ಯುಕ್ತವು.

ಎಷ್ಟು ಅತಿಶಯವಾಗಿ ಅನುಷ್ಠಿಸಿದಾಗ್ಯೂ ಅಷ್ಟು ಶ್ರೇಯಸ್ಕರವಾಗುವದು, ಎಂದು ನ್ಯಾಯಸಿದ್ಧವಾಗಿರುವದು.

## ಭಗವದಾರಾಧನ ಕ್ರಮ.

ಚನ್ನಾಗಿ ತೊಳೆಯಲ್ಪಟ್ಟ ಕೈಕಾಲುಗಳುಳ್ಳವನಾಗಿ, ಶುದ್ಧಾಚಮನವಂ ಮಾಡಿ ಸೊಂಟದಲ್ಲಿ ಉತ್ತರೀಯವನ್ನ ಸುತ್ತಿ, ಪೂಜಾಗೃಹ (ಸನ್ನಿಧಿ) ಕ್ಕೆ ಹೊರಗೆ ಸ್ವಲ್ಪದೂರದಲ್ಲಿ ನಿಂತು, ಚಂಡಾದಿದ್ವಾರಪಾಲೇಭ್ಯೋನಮಃ, ಎಂದು ದ್ವಿರಾವೃತ್ತಿ ಪ್ರಣಾಮಮಾಡಿ, ಅವರುಗಳಿಂದ ದೇವಗೃಹ ಪ್ರವೇಶಕ್ಕೆ ಅನುಜ್ಞೆಯಾದಂತೆ ಭಾವಿಸಿ, ಬಲಗಾಲು ಮುಂದಾಗಿ ದೇವಗೃಹವಂ ಪ್ರವೇಶಿಸಿ, ಅಸ್ತ್ರಾಯಫಟ್ ಎಂದು ಹೇಳಿ, (ಈ ಅಸ್ತ್ರಮಂತ್ರವು ದೇವಗೃಹದಲ್ಲಿರುವ ದುಷ್ಟಜಂತು ಪಲಾಯನೋದ್ದೇಶ್ಯವಾದುದು) ಭಗವಂತನನ್ನ ನಮಸ್ಕರಿಸಿ, ಹಸ್ತತಾಳತ್ರಯ ಪೂರ್ವಕವಾಗಿ ಘಂಟಾನಾದದೊಡನೆ ಭಗವತ್ಪ್ರಬೋಧನವಂಮಾಡಿ, ಪ್ರಣವಸಹಿತಾಸ್ತ್ರ ಮಂತ್ರದಿಂದ ಕವಾಟೋದ್ಘಾಟನ (ಬಾಗಿಲು ತೆಗಿಯುವದು) ವಂ ಮಾಡಿ, ಪ್ರಾತಃಕಾಲದಲ್ಲಿ ಅಭಿಗಮನಾರಾಧನ ಮಾಡದಿರುವ ಪಕ್ಷ,

ಕೌಸಲ್ಯಾಸುಪ್ರಜಾರಾಮಪೂರ್ವಾಸಂಧ್ಯಾಪ್ರವರ್ತತೇ।
ಉತ್ತಿಷ್ಠನರಶಾರ್ದೂಲಕರ್ತವ್ಯಂದೈವಮಾಹ್ನಿಕಂ॥

---

೧ ಅಪರಾಧಸಹಸ್ರಭಾಜನಂ, ಇತ್ಯಾದಿ ಶ್ಲೋಕಾನುಸಂಧಾನಪೂರ್ವಕವಾಗಿ ನಮಸ್ಕರಿಸುವದು. ಅಂತ್ಯದಲ್ಲಿ ಈ ಶ್ಲೋಕಗಳು ಬರೆಯಲ್ಪಡುವವು.

ಇತ್ಯಾದಿ ಶ್ಲೋಕಗಳಿಂದ ಸುಪ್ರಭಾತವಂ ಹೇಳಿ, ನಿಶ್ಶಬ್ದವಾದ ಪೂಜಾಪ್ರದೇಶದಲ್ಲಿ, ಓಂ, ಭೂಂ, ಭೂಮ್ಯೈನಮಃ, ಎಂದು ಭೂಮಿಯಂ ಸಂಗ್ರಹಿಸಿ (ಬಲಹಸ್ತಾಂಗುಲಿಗಳಿಂದ ಭೂಸ್ಪರ್ಶವಂಗೈಯುವದು) ಯಂ, ಎಂಬ ಅಕ್ಷರ (ಇದೇ ವಾಯು ಬೀಜಾಕ್ಷರ) ವನ್ನ ಬಲಗೈಯಲ್ಲಿ ಬರದು ಭೂಮಿಗೆ ತೋರಿಸಿ, ಭುವಂ ಶೋಷಯಾಮಿ, ಎಂದು ಹೇಳಿ, ಭೂಮಿಯನ್ನ ವಾಯುವಿನಿಂದ ಶೋಷಿಸಿದಂತೆ ಭಾವಿಸಿ, ಬಲಗೈಯಲ್ಲಿ ರಂ, ಎಂದು ಅಗ್ನಿಬೀಜಾಕ್ಷರವಂ ಬರೆದು, ದಾಹಯಾಮಿ ಎಂದುಹೇಳಿ ಭೂಮಿಗೆ ತೋರಿಸಿ, ಭೂಮಿಯನ್ನ ಅಗ್ನಿಯಿಂದ ದಗ್ಧವಾದಂತೆ ಭಾವಿಸಿ, ವಂ, ಎಂದು ಅಮೃತ ಬೀಜಾಕ್ಷರವಂ ಬರೆದು ಪ್ಲಾವಯಾಮಿ, ಎಂದು ಭೂಮಿಗೆ ತೋರಿಸಿ ಅಮೃತಧಾರೆಯಿಂದ ನೆನದಂತೆಯೂ, ಆರಾಧನಕ್ಕೆ ಯೋಗ್ಯವಾದಂತೆಯೂ ಭಾವಿಸಿ ಅಸ್ತ್ರಮಂತ್ರದಿಂದ ರಕ್ಷೆಯಂಮಾಡಿ ಭಗವದ್ದಕ್ಷಿಣ (ಬಲ) ಭಾಗದಲ್ಲಿ ಆಸನದಲ್ಲಿ ಕುಳಿತುಕೊಂಡು, ಗುರು ಪರಂಪರಾನುಸಂಧಾನ ಪೂರ್ವಕವಾಗಿ, ನಿತ್ಯಾನುಸಂಧಾನದೊಡನೆ, ಭಗವಂತನನ್ನ ಶರಣುಹೊಂದಿ, ಭಗವದಾರಾಧನ ಪರ್ಯಂತ, ಧ್ಯಾನಾನುಕೂಲ ಮನೋವೃತ್ತಿ ಸಿದ್ಧ್ಯರ್ಥವಾಗಿ, ದ್ವಯೋಚ್ಚಾರಣ ಪೂರ್ವಕವಾಗಿ ನ್ಯಾಸದಶಕಾನು ಸಂಧಾನವಂ ಮಾಡುವದು.

ತತ್ಪ್ರಕಾರಃ॥ ಅಹಂಮದ್ರಕ್ಷಣಭರೋಮದ್ರಕ್ಷಣಫಲಂತಥಾ ॥
ನಮಮಶ್ರೀಪತೇರೇವೇತ್ಯಾತ್ಮಾನಂನಿಕ್ಷಿಪೇದ್ಬುಧಃ ॥೧॥
ನ್ಯಸ್ಯಾಮ್ಯಕಿಂಚನಶ್ಶ್ರೀಮನ್ನನುಕೂಲೋನ್ಯವರ್ಜಿತಃ।
ವಿಶ್ವಾಸಪ್ರಾರ್ಥನಾಪೂರ್ವಮಾತ್ಮರಕ್ಷಾಭರಂತ್ವಯಿ ॥೨॥
ಸ್ವಾಮೀಸ್ವಶೇಷಂಸ್ವವಶಂಸ್ವಭರತ್ವೇನನಿರ್ಭರಂ।
ಸ್ವದತ್ತಸ್ವಧಿಯಾಸ್ವಾರ್ಥಂಸ್ವಸ್ಮಿನ್ನ್ಯಸ್ಯತಿಮಾಂಸ್ವಯಂ ॥೩॥
ಶ್ರೀಮನ್ನಭೀಷ್ಟವರದತ್ವಾಮಸ್ಮಿ ಶರಣಂಗತಃ।
ಏತದ್ದೇಹಾವಸಾನೇಮಾಂತ್ವತ್ಪಾದಂಪ್ರಾಪಯಸ್ವಯಂ ॥೪॥
ತ್ವಚ್ಛೇಷತ್ವೇಸ್ಥಿರಧಿಯಂತ್ವತ್ಪ್ರೀತ್ಯೇಕಪ್ರಯೋಜನಂ।
ನಿಷಿದ್ಧಕಾಮ್ಯರಹಿತಂಕುರುಮಾಂನಿತ್ಯಕಿಂಕರಂ ॥೫॥

೧ ನಿತ್ಯಾನುಸಂಧಾನವು ಅಂತದಲ್ಲಿ ಬರೆಯಲ್ಪಡುವದು.

ದೇವೀಭೂಷಣಹೇತ್ಯಾದಿಜುಷ್ಟಸ್ಯಭಗವಂಸ್ತವ ।
ನಿತ್ಯಂನಿರಪರಾಧೇಷುಕೈಂಕರ್ಯೇಷುನಿಯುಂಕ್ಷ್ವಮಾಂ ॥೬॥
ಮಾಂಮದೀಯಂಚನಿಖಿಲಂಚೇತನಾಚೇತನಾತ್ಮಕಂ ।
ಸ್ವಕೈಂಕರ್ಯೋಪಕರಣಂವರದಸ್ವೀಕುರುಸ್ವಯಂ ॥೭॥
ತ್ವದೇಕರಕ್ಷ್ಯಸ್ಯಮಮತ್ವಮೇವಕರುಣಾಕರ ।
ನಪ್ರವರ್ತಯಪಾಪಾನಿಪ್ರವೃತ್ತಾನಿನಿವರ್ತಯ ॥೮॥
ಅಕೃತ್ಯಾನಾಂಚಕರಣಂಕೃತ್ಯಾನಾಂವರ್ಜನಂಚಮೇ ।
ಕ್ಷಮಸ್ವನಿಖಿಲಂದೇವಪ್ರಣತಾರ್ತಿಹರಪ್ರಭೋ ॥೯॥
ಶ್ರೀಮಾನ್ನಿಯತಪಂಚಾಂಗಂಮದ್ರಕ್ಷಣಭರಾರ್ಪಣಂ ।
ಅಚೀಕರತ್ಸ್ವಯಂಸ್ವಸ್ಮಿನ್ನತೋಹಮಿಹನಿರ್ಭರಃ ॥೧೦॥

ಸಂಸಾರಾವರ್ತವೇಗಪ್ರಶಮನಶುಭದೃಗ್ದೇಶಿಕಪ್ರೇಕ್ಷಿತೋಹಂಸಂ
ತ್ಯಕ್ತೋನ್ಯೈರುಪಾಯೈರನುಚಿತಚರಿತೇಷ್ವದ್ಯಶಾಂತಾಭಿಸಂ
ಧಿಃ ॥ ನಿಶ್ಶಂಕಸ್ತತ್ವದೃಷ್ಟ್ಯಾನಿರವಧಿಕದಯಂಪ್ರಾಪ್ಯಸಂರ
ಕ್ಷಕಂತ್ವಾಂನ್ಯಸ್ಯತ್ವತ್ಪಾದಪದ್ಮೇವರದನಿಜಭರಂನಿರ್ಭರೋನಿ
ರ್ಭಯೋಸ್ಮಿ ॥೧೧॥ ಇತಿ,

ಅವತಾರಿಕಾ॥ ಈ ನ್ಯಾಸದಶಕವು ಪಂಚಾಂಗ ವಿಶಿಷ್ಟವಾದ ಪ್ರಪತ್ತ್ಯನುಷ್ಠಾನ ಬೋಧಕವಾಗಿರುವದು. ಪ್ರಪತ್ತಿಯ ಪಂಚಾಂಗ (೫ ಅಂಗ) ಸ್ವರೂಪಾದಿಗಳು ಮುಮುಕ್ಷೂಪಾಯ ಸಂಗ್ರಹದಲ್ಲಿ ವಿವರಿಸಲ್ಪಡುವವು.

ಆದ ಪ್ರಯುಕ್ತ ನ್ಯಾಸದಶಕದ ಮುಖ್ಯ ತಾತ್ಪರ್ಯ ಮಾತ್ರ ಇಲ್ಲಿ ಬರೆಯಲ್ಪಡುವದು.

ತಾತ್ಪರ್ಯ॥ ನಾನೂ, ನನ್ನನ್ನ ರಕ್ಷಿಸುವ ಭಾರವೂ, ನನ್ನ ರಕ್ಷಣ ಫಲವೂ, ಶ್ರಿಯಃಪತಿಯಾದ ನಾರಾಯಣನಿಗೇ ವಿನಾ ನನಗಲ್ಲವು ಎಂದು, ಆತ್ಮಸಮರ್ಪಣ ಮಾಡತಕ್ಕದ್ದು. ೧

ಎಲೈ ಭಗವಂತನೇ, ನಿನಗೆ ಅನುಕೂಲನಾಗಿ, ಪ್ರತಿಕೂಲವಂಬಿಟ್ಟು, ವಿಶ್ವಾಸ, ಪ್ರಾರ್ಥನೆಗಳೊಡನೆ, ಅನನ್ಯಗತಿಕನಾದ ನಾನು, ನಿನ್ನಲ್ಲಿ ಆತ್ಮರಕ್ಷಾಭರ ಸಮರ್ಪಣ ಮಾಡುವೆನು. ೨

ಸ್ವಾಮಿಯಾದ ಪರಮಾತ್ಮನು, ತನಗೆ ಶೇಷನಾಗಿಯೂ, ಸ್ವಾಧೀನ
ನಾಗಿಯೂ, ಇರುವ ನನ್ನನ್ನ ಸ್ವಾರ್ಥಕ್ಕಾಗಿಯೇ ತನ್ನಿಂದ ಕೊಡಲ್ಪಟ್ಟ
ಸದ್ಬುದ್ಧಿಯಿಂದ ತನ್ನಲ್ಲಿ ಸೇರಿಸಿಕೊಳ್ಳುವನು.

ವರದನೇ ನಿನ್ನನ್ನ ಶರಣುಹೊಂದಿದೆನು. ಈ ದೇಹಾವಸಾನದಲ್ಲಿಯೇ
ನನ್ನನ್ನ ನಿನ್ನ ಪಾದಾರವಿಂದ ಸೇರುವಂತೆ ಮಾಡು.

ನಿನ್ನ ಶೇಷತ್ವದಲ್ಲಿ ಸ್ಥಿರಬುದ್ಧಿಯುಳ್ಳವನಾಗಿ ನಿನ್ನನ್ನೇ ಹೊಂದುವ
ದು ಮುಖ್ಯ ಪ್ರಯೋಜನವೆಂದು ತಿಳಿದಿರುವ ನಿತ್ಯಕಿಂಕರನಾದ ನಾನು
ಶಾಸ್ತ್ರನಿಷಿದ್ಧ ಕರ್ಮಗಳನ್ನೂ, ಕಾಮ್ಯಕರ್ಮಗಳನ್ನೂ ಅನುಷ್ಠಿಸದಂ
ತೆ ಅನುಗ್ರಹಿಸು.

ದೇವೀ (ಶ್ರೀ, ಭೂದೇವಿಗಳು) ಭೂಷಣಾಯುಧಾದಿಗಳಿಂದ ಯುಕ್ತ
ನಾದ, ಭಗವಂತನಾದ ನಿನಗೆ ನಿರಪರಾಧ ಕೈಂಕರ್ಯಗಳನ್ನ ಮಾಡುವಂತೆ
ನನ್ನನ್ನು ಅನುಗ್ರಹಿಸು.

ನನ್ನನ್ನೂ, ನನ್ನ ಸಂಬಂಧಿಯಾದ, ಚೇತನಾಚೇತನ ಪದಾರ್ಥಗಳ
ನ್ನೂ ಸಹಾ ವರದನೇ, ನೀನು, ನಿನ್ನ ಕೈಂಕರ್ಯೋಪಕರಣವನ್ನಾಗಿ ಸ್ವೀ
ಕರಿಸು.

ದಯಾನಿಧಿಯಾದ ಭಗವಂತನೇ ರಕ್ಷಕಾಂತರರಿಲ್ಲದೇ ನಿನ್ನಿಂದಲೇ ರಕ್ಷಿ
ಸಲರ್ಹನಾದ ನಾನು ಪಾಪಕೃತ್ಯಗಳನ್ನು ಮಾಡದಂತೆ ಅನುಗ್ರಹಿಸು.

ನನ್ನಿಂದ ಮಾಡಲ್ಪಡುವ, ಅಕೃತ್ಯಗಳನ್ನೂ, ಕೃತ್ಯವರ್ಜನ (ಅನು
ಷ್ಠಿಸಬೇಕಾದುದನ್ನ ಬಿಡುವಿಕೆ) ವನ್ನೂ ಕ್ಷಮಿಸಿ ರಕ್ಷಿಸು.

ಶ್ರಿಯಃಪತಿಯಾದ ಭಗವಂತನು, ಪಂಚಾಂಗ ವಿಶಿಷ್ಟವಾದ ಪ್ರಪತ್ತಿ
(ಶರಣಾಗತಿ, ಸಕಲ ಭಾರವನ್ನೂ ಅರ್ಪಿಸುವಿಕೆ) ಯನ್ನ ನನ್ನಿಂದ ಮಾ
ಡಿಸಿದನು, ಅದಪ್ರಯುಕ್ತ ನಾನು ನಿರ್ಭರ (ಭಾರವಿಲ್ಲದವನು) ನಾಗಿ
ರುವೆನು.

ಸಂಸಾರತಾಪವನ್ನ ಪ್ರಶಮನ ಮಾಡುವದಾಗಿಯೂ, ಶುಭವನ್ನುಂ
ಟುಮಾಡುವದಾಗಿಯೂ ಇರುವ ಆಚಾರ್ಯಕಟಾಕ್ಷವಿಷಯನಾದ ನಾನು,
ಇತರ ಉಪಾಯಗಳನ್ನು ಬಿಟ್ಟು (ಇತರ ಉಪಾಯಾನುಷ್ಠಾನದಲ್ಲಿ

ಯೋಗ್ಯತೆ ಇಲ್ಲದವನಾಗಿ)ಅನುಚಿತಗಳನ್ನು ಮಾಡಲು ಇಷ್ಟವಿಲ್ಲದವನಾಗಿ, ಪರಮ ಕೃಪಾಳುವಾದ ಭಗವಂತನಾದ ನಿನ್ನನ್ನೇ ರಕ್ಷಕನನ್ನಾಗಿ ತಿಳಿದು, ಸಕಲ ಶಂಕೆಗಳನ್ನು ಬಿಟ್ಟು, ನಿನ್ನ ಪಾದಾರವಿಂದದಲ್ಲಿ ನನ್ನ ಸಕಲಭಾರವನ್ನೂ ಸಮರ್ಪಿಸಿ, "ಆಶ್ರಿತಾಭೀಷ್ಟಪೂರಕನಾದವರದನೇ" ನಿರ್ಭರನಾದ ಪ್ರಯುಕ್ತ (ಸಕಲ ಭಾರಗಳಿಂದಲೂ ಬಿಡಲ್ಪಟ್ಟವನಾದಕಾರಣ) ನಿರ್ಭಯನಾದೆನು.

ಭಗವದನುಗ್ರಹದಿಂದ ನಿರ್ಮಲವಾದ ಮನೋವ್ಯಾಪಾರವುಳ್ಳವನಾಗಿ ತನಗೆ ಸ್ವಾಮಿಯಾದ ಭಗವಂತನನ್ನ ಧ್ಯಾನಮಾಡಿ ಭಗವತ್ಕೈಂಕರ್ಯರೂಪ ಪೂಜೆಯನ್ನ ಆರಂಭಿಸುವದು.

ಮೂಲಮಂತ್ರದಿಂದ, ಅಥವಾ ಧರ್ಮಶಾಸ್ತ್ರೋಕ್ತರೀತ್ಯಾ ತ್ರಿಃಪ್ರಾಣಾನಾಯಮ್ಯ.

> ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರಸೇನ, ಅನೇನಾತ್ಮನಾಸ್ವಕೀಯೈಶ್ಚ ದೇಹೇಂದ್ರಿಯಾಂತಃಕರಣೈಃ, ಸ್ವಕೀಯಕಲ್ಯಾಣತಮದ್ರವ್ಯಮಯಾನ್, ಔಪಚಾರಿಕಸಾಂಸ್ಪರ್ಶಿಕಾಭ್ಯವಹಾರಿಕಾದಿ ಸಮಸ್ತಭೋಗಾನ್ ಅತಿಪ್ರಭೂತಾನ್, ಅತಿಪ್ರಿಯತಮಾನ್, ಅತಿಸಮಗ್ರಾನ್, ಅತ್ಯಂತಭಕ್ತಿಕೃತಾನ್, ಅಖಿಲಪರಿಜನಪರಿಚ್ಛದಾನ್ವಿತಾಯಸ್ವಸ್ಮೈಸ್ವಪ್ರೀತಯೇ ಸ್ವಯಮೇವ ಪ್ರತಿಪಾದಯಿತುಮುಪಕ್ರಮತೆ, ಇತ್ಯನುಸಂಧಾಯ ॥

## ಭೂತ ಶುದ್ಧಿಕ್ರಮಃ.

ಓಂ, ಲಾಂ, ನಮಃ, ಪರಾಯಸರ್ವಾತ್ಮನೇನಮಃ, ಎಂದು ಪಾದಗಳಲ್ಲಿ ನ್ಯಾಸಮಾಡಿ, ಪೃಥಿವೀಂಗಂಧತನ್ಮಾತ್ರೇ ವಿಲಾಪಯಾಮಿ, ಗಂಧತನ್ಮಾತ್ರಮಪ್ಸುವಿಲಾಪಯಾಮಿ, ಎಂದು ಚಿಂತಿಸುವದು.

ಓಂ, ವಾಂ, ನಮಃ, ಪರಾಯ ನಿವೃತ್ತ್ಯಾತ್ಮನೇನಮಃ ಎಂದು ಗುಹ್ಯಪ್ರದೇಶದಲ್ಲಿ ನ್ಯಾಸಮಾಡಿ, ಅಪ್ಸೋರಸತನ್ಮಾತ್ರೇ ವಿಲಾಪಯಾಮಿ, ರಸತನ್ಮಾತ್ರಂತೇಜಸಿವಿಲಾಪಯಾಮಿ, ಇತಿ ಚಿಂತಯೇತ್.

ಓಂ, ರಾಂ, ನಮಃ, ಪರಾಯ ವಿಶ್ವಾತ್ಮನೇನಮಃ, ಎಂದು ಹೃದಯ ದಲ್ಲಿ ನ್ಯಾಸಮಾಡಿ, ತೇಜಃ, ರೂಪತನ್ಮಾತ್ರೇ ವಿಲಾಪಯಾಮಿ, ರೂಪತ ನ್ಮಾತ್ರಂವಾಯೌ ವಿಲಾಪಯಾಮಿ, ಇತಿಚಿಂತಯೇತ್ ||

ಓಂ, ಯಾಂ, ನಮಃ, ಪರಾಯಪುರುಷಾತ್ಮನೇನಮಃ, ಎಂದು ನಾಸಿಕಾ ಗ್ರದಲ್ಲಿ ನ್ಯಾಸಮಾಡಿ, ವಾಯುಂಸ್ಪರ್ಶತನ್ಮಾತ್ರೇ ವಿಲಾಪಯಾಮಿ, ಸ್ಪರ್ಶತನ್ಮಾತ್ರಮಾಕಾಶೇ ವಿಲಾಪಯಾಮಿ, ಇತಿ ಚಿಂತಯೇತ್||

ಓಂ, ಕ್ಷಾಂ, ನಮಃ, ಪರಾಯಪರಮೇಷ್ಠ್ಯಾತ್ಮನೇನಮಃ, ಎಂದು ಶಿರಸ್ಸಿನಲ್ಲಿ ನ್ಯಾಸಮಾಡಿ, ಆಕಾಶಂಶಬ್ದತನ್ಮಾತ್ರೇ ವಿಲಾಪಯಾಮಿ, ಶ ಬ್ದತನ್ಮಾತ್ರಂ, ಏಕಾದಶೇಂದ್ರಿಯಾಣಿಚ, ಅಹಂಕಾರೇ ವಿಲಾಪಯಾಮಿ, ಅಹಂಕಾರಂಮಹತಿವಿಲಾಪಯಾಮಿ, ಮಹಾಂತಂಪ್ರಕೃತೌ ವಿಲಾಪಯಾ ಮಿ, ಪ್ರಕೃತಿಂತಮಸಿ ವಿಲಾಪಯಾಮಿ, ತಮಃಪರಮಾತ್ಮನ್ಯೇಕೀಭಾವ ಯಾಮಿ, ಇತಿಚಿಂತಯೇತ್ ||

ಇದೇ ತತ್ವಸಂಹಾರನ್ಯಾಸವು.

## ಅಥ ಸೃಷ್ಟಿನ್ಯಾಸಃ.

ಓಂ, ಕ್ಷಾಂ, ನಮಃ, ಪರಾಯ ಪರಮೇಷ್ಠ್ಯಾತ್ಮನೇನಮಃ, ಎಂದು ಶಿರಸ್ಸಿನಲ್ಲಿ ನ್ಯಾಸಮಾಡಿ, ಪರಮಾತ್ಮನಃತಮ ಉತ್ಪಾದಯಾಮಿ, ತಮ ಸಃಪ್ರಕೃತಿ ಮುತ್ಪಾದಯಾಮಿ, ಪ್ರಕೃತೇರ್ಮಹಾಂತ ಮುತ್ಪಾದಯಾ ಮಿ, ಮಹತೋಽಹಂಕಾರ ಮುತ್ಪಾದಯಾಮಿ, ಅಹಂಕಾರದೇಕಾದಶೇಂ ದ್ರಿಯಾಣಿ, ಶಬ್ದತನ್ಮಾತ್ರಂ ಚೋತ್ಪಾದಯಾಮಿ, ಶಬ್ದತನ್ಮಾತ್ರಾ ದಾಕಾಶಮುತ್ಪಾದಯಾಮಿ, ಇತಿ ಚಿಂತಯೇತ್ ||

ಓಂ, ಯಾಂನಮಃಪರಾಯಪುರುಷಾತ್ಮನೇ ನಮಃ, ಎಂದು ನಾಸಾಗ್ರ ದಲ್ಲಿ ನ್ಯಾಸಮಾಡಿ, ಆಕಾಶಾತ್, ಸ್ಪರ್ಶತನ್ಮಾತ್ರ ಮುತ್ಪಾದಯಾಮಿ, ಸ್ಪರ್ಶತನ್ಮಾತ್ರಾದ್ವಾಯು ಮುತ್ಪಾದಯಾಮಿ, ಇತಿ ಚಿಂತಯೇತ್||

ಓಂರಾಂನಮಃ ಪರಾಯವಿಶ್ವಾತ್ಮನೇ ನಮಃ, ಎಂದು ಹೃದಯದಲ್ಲಿ ನ್ಯಾಸಮಾಡಿ, ವಾಯೋಃರೂಪತನ್ಮಾತ್ರ ಮುತ್ಪಾದಯಾಮಿ. ರೂಪತ ನ್ಮಾತ್ರಾತ್ತೇಜ ಉತ್ಪಾದಯಾಮಿ, ಇತಿ ಚಿಂತಯೇತ್||

ಓಂ, ವಾಂನಮಃಪರಾಯನಿವೃತ್ತ್ಯಾತ್ಮನೇ ನಮಃ, ಎಂದು ಗುಹ್ಯದಲ್ಲಿ ನ್ಯಾಸಮಾಡಿ, ತೇಜಸೋರಸತನ್ಮಾತ್ರ ಮುತ್ಪಾದಯಾಮಿ, ರಸತನ್ಮಾತ್ರಾದಪ ಉತ್ಪಾದಯಾಮಿ, ಇತಿ ಚಿಂತಯೇತ್॥

ಓಂ, ಲಾಂನಮಃಪರಾಯ ಸರ್ವಾತ್ಮನೇ ನಮಃ, ಎಂದು ಪಾದಗಳಲ್ಲಿ ನ್ಯಾಸಮಾಡಿ, ಅದ್ಭ್ಯೋಗಂಧತನ್ಮಾತ್ರ ಮುತ್ಪಾದಯಾಮಿ, ಗಂಧತನ್ಮಾತ್ರಾತ್ ಪೃಥಿವೀ ಮುತ್ಪಾದಯಾಮಿ, ಇತಿ ಚಿಂತಯೇತ್॥

ಸಂಹಾರನ್ಯಾಸದಿಂದ ತ್ರಿಗುಣಾತ್ಮಕ ದೇಹನಾಶವನ್ನೂ, ಸೃಷ್ಟಿನ್ಯಾಸದಿಂದ ಕೇವಲ ಸಾತ್ವಿಕ ದೇಹೋತ್ಪತ್ತಿಯನ್ನೂ, ಧ್ಯಾನಿಸಿ, ಪರಿಶುದ್ಧವಾದ ಆ ದೇಹದಲ್ಲಿ ಜೀವಾತ್ಮನು ಪ್ರವೇಶಿಸಿರುವಂತೆ ತಿಳಿದು, ಪ್ರಾಣಾಯಾಮವಂ ಮಾಡಿ, ಭಗವಂತನ ವಾಮಪಾದಾಂ (ಎಡಗಾಲು) ಗುಷ್ಠದಿಂದ ಹೊರಡಲ್ಪಟ್ಟ ಅಮೃತ ಧಾರೆಯಿಂದ ಶರೀರ ವಿಶಿಷ್ಟನಾದ ಜೀವಾತ್ಮನು ಸ್ನಾನಮಾಡಿ ಲಾಂಛನೋರ್ಧ್ವಪುಂಡ್ರಾದಿಗಳಿಂದ ಯುಕ್ತನಾಗಿರುವಂತೆ ಭಾವಿಸಿ ಯಥಾಶಕ್ತಿ ಮೂಲಮಂತ್ರವಂ ಜಪಿಸಿ ಪೂಜಾರಂಭವಂ ಮಾಡುವದು.

## ಮಾನಸಿಕಾರಾಧನ ಕ್ರಮಃ.

ಅಧೋಮುಖವಾಗಿರುವ ಹೃದಯ ಕಮಲವನ್ನ, ಊರ್ಧ್ವಮುಖವಾಗಿರುವಂತೆಯೂ, ಆ ಕಮಲ ಮಧ್ಯದೊಳ್, ದಿವ್ಯವಾದ ಪೀಠದಲ್ಲಿ, ಸಪರಿವಾರನಾದ ಭಗವಂತನು, ಮೂಲಮಂತ್ರ ಧ್ಯಾನಶ್ಲೋಕ (ಸವ್ಯಂ ಪಾದಂಪ್ರಸಾರ್ಯ ಎಂಬುವದು) ದಲ್ಲಿ ಉಕ್ತವಾಗಿರುವ ರೀತಿಯಿಂದ ಬಿಜಯಮಾಡಿರುವಂತೆಯೂ, ಆ ಸ್ವಾಮಿಯ ಬಲಪಾರ್ಶ್ವದಲ್ಲಿ ತಾನು ಕುಳಿತಿರುವದಾಗಿಯೂ ಭಾವಿಸಿ,

> ಸಾವರ್ಣೇಸ್ಥಾಲಿವರ್ಯೇಮಣಿಗಣಖಚಿತೇಗೋಘೃತಾಕ್ತಾನ್ಸುಪಕ್ವಾನ್ ಭಕ್ಷ್ಯಾನ್ಭೋಜ್ಯಾಂಶ್ಚಲೇಹ್ಯಾನ್ಪರಮಮಪಿ ಹವಿಶ್ಯೋಷ್ಯಮನ್ನಂನಿಧಾಯ । ನಾನಾಶಾಕೈರುಪೇತಂಸದಧಿಮಧುಘೃತಂಕ್ಷೀರಪಾನೀಯಯುಕ್ತಂ ತಾಂಬೂಲಂಚಾತ್ಮಗೇಹೇ ಪ್ರತಿದಿವಸಮಹಂಮಾನಸಂಕಲ್ಪಯಾಮಿ ॥

ತಾತ್ಪರ್ಯ॥ ನವರತ್ನಾಲಂಕೃತವಾದ ಸ್ವರ್ಣಭಾಜನ (ತಟ್ಟೆ) ದಲ್ಲಿ, ಗೋಘೃತ ಪಕ್ವವಾದ ಭಕ್ಷ್ಯ ಭೋಜ್ಯಾದಿಗಳಿಂದಲೂ, ನಾನಾ ಶಾಕಗಳಿಂದಲೂ, ದಧಿ ಘೃತ ಕ್ಷೀರ, ಪರಿಮಳೋದಕಾದಿಗಳಿಂದಲೂ ಕೂಡಿರುವ ದಿವ್ಯಾನ್ನವನ್ನೂ, ತಾಂಬೂಲವನ್ನೂ ಭಗವಂತನಿಗೆ ಮಾನಸಿಕವಾಗಿ ಸಮರ್ಪಿಸುವೆನು, ಎಂದು, ಪೂರ್ವೋಕ್ತವಾದ ಸಕಲವನ್ನೂ ಭಗವಂತನಿಗೆ ನಿವೇದನ ಮಾಡಿದಂತೆ ಮನಸ್ಸಿನಲ್ಲಿ ಭಾವಿಸುವದು.

ಹೀಗೆ ಮಾನಸಿಕಾರಾಧನವಂ ಮಾಡಿ.

ಭಗವನ್ಪುಂಡರೀಕಾಕ್ಷಹೃದ್ಯಾಗಂತುಮಯಾಕೃತಂ । ಆತ್ಮಸಾತ್ಕುರುದೇವೇಶಬಾಹ್ಯೈಃತ್ವಾಂಸಮ್ಯಗರ್ಚಯೇ॥

ತಾತ್ಪರ್ಯ॥ ಕಮಲಾಕ್ಷನಾದ ಭಗವಂತನೇ ಮಾನಸಿಕಾರಾಧನವು, ನನ್ನಿಂದ ಮಾಡಲ್ಪಟ್ಟತಷ್ಟೆ, ಇನ್ನು ಬಾಹ್ಯೋಪಕರಣಗಳಿಂದ ನಿನ್ನಂ ಆರಾಧಿಸುವೆನು. ಅದಂ ಅಂಗೀಕರಿಸು ಎಂದು ಯಾಚಿಸಿ, ಅನುಜ್ಞೆಯಂ ಹೊಂದಿ, ಪೂಜಾ ಸಂಭಾರಗಳಂ ಸಂಗ್ರಹಿಸಿ ತನ್ನ ಎಡಪಾರ್ಶ್ವದಲ್ಲಿ ಜಲಭಾಜನ (ಶುದ್ಧೋದಕದ ಚೊಂಬು) ದಲ್ಲಿ ಉದಕವಂ ತುಂಬಿ, ಆ ಉದಕದಲ್ಲಿ ಗಂಧ ಪುಷ್ಪಗಳಂ ಹಾಕಿ ಮೂಲಮಂತ್ರದಿಂದ ಸಪ್ತಾವೃತ್ತಿ ಅಭಿಮಂತ್ರಿಸಿ ಮೂಲಮಂತ್ರದಿಂದ (ಅಥವಾ ಪೂರ್ವೋಕ್ತ ರೀತ್ಯಾ) ಶೋಷಣದಾಹನ ಪ್ಲಾವನಗಳಂ ಮಾಡಿ, ದಿವ್ಯಾಮೃತೋದಕವನ್ನಾಗಿ ಭಾವಿಸಿ, ಅಸ್ತ್ರಮಂತ್ರದಿಂದ ರಕ್ಷೆಯಂ ಮಾಡಿ ಸುರಭಿಮುದ್ರೆಯಂ (ಹಸುವಿನ ಮೊಲೆಯಂತೆ ಬೆರಳುಗಳಿಂದ ಮಾಡುವ ಮುದ್ರಾವಿಶೇಷ) ಪ್ರದರ್ಶನ ಮಾಡಿ, ಇತರ ಪೂಜಾದ್ರವ್ಯಗಳನ್ನ ತನ್ನ ದಕ್ಷಿಣ (ಬಲ) ಪಾರ್ಶ್ವದಲ್ಲಿ ಸಂಗ್ರಹಿಸಿ, ಮೂಲಮಂತ್ರದಿಂದ ಶೋಷಣ, ದಾಹನ ಪ್ಲಾವನಗಳಂ ಮಾಡಿ, ತನಗೆ ಮುಂಭಾಗದಲ್ಲಿರುವ ಪೀಠ (ಮುಕ್ಕಾಲಿ) ಯಲ್ಲಿ ಆಗ್ನೇಯಾದಿ ಕೋಣ (ವಿದಿಕ್ಕು) ಗಳಲ್ಲಿ ಕ್ರಮವಾಗಿ, ಅರ್ಘ್ಯ, ಪಾದ್ಯ, ಆಚಮನೀಯ, ಸ್ನಾನೀಯ, ಪಾತ್ರೆಗಳನ್ನೂ ಮಧ್ಯೆ ಶುದ್ಧೋದಕ ಪಾತ್ರವನ್ನೂ, ಇಟ್ಟು, ಅಸ್ತ್ರಮಂತ್ರದಿಂದ ತೊಳೆದು, ಶೋಷಣ ದಾಹನ ಪ್ಲಾವನಗಳಂಮಾಡಿ, ಶುದ್ಧೋದಕದಿಂದ ಪಾತ್ರಗಳನ್ನು ತುಂಬಿ, ಆ ಪಾತ್ರಗಳಲ್ಲಿ, ತುಲಸೀ, ಗಂಧ, ಪಚ್ಚಕರ್ಪೂರ, ಏಲಾ, ಲವಂಗ,

ಲಾವಂಚ, ಕೇಸರಾದಿ ಸುಗಂಧ ದ್ರವ್ಯಗಳನ್ನ ವಿಭವಾನುಸಾರ ಸಮ ರ್ಪಿಸಿ, ಅರ್ಘ್ಯಾದಿ ಪಾತ್ರೆಗಳಲ್ಲಿ ಹಸ್ತವನ್ನ ಇಟ್ಟು ಮೂಲಮಂತ್ರದಿಂದ ಅಭಿಮಂತ್ರಿಸಿ, ಓಂ, ನಮೋ, ಭಗವತೇ ಅರ್ಘ್ಯಂ ಪರಿಕಲ್ಪಯಾಮಿ, ಪಾದ್ಯಂ, ಆಚಮನೀಯಂ ಪರಿಕಲ್ಪಯಾಮಿ, ಸ್ನಾನೀಯಂ ಪರಿಕಲ್ಪಯಾ ಮಿ, ಶುದ್ಧೋದಕಂ ಪರಿಕಲ್ಪಯಾಮಿ, ಎಂದು ಕಲ್ಪಿಸಿ, ಅರ್ಘ್ಯ ಪಾತ್ರ ದಿಂದ ಉದಕವನ್ನ ಉದ್ಧರಣಿಯಿಂದ ಗ್ರಹಿಸಿ, ಪೂಜಾಭೂಮಿಯನ್ನೂ, ಪೂಜಾದ್ರವ್ಯಗಳನ್ನೂ, ತನ್ನನ್ನೂ ಸಹಾ ಪ್ರತ್ಯೇಕ ಪ್ರತ್ಯೇಕವಾಗಿ ಪ್ರೋಕ್ಷಿಸಿ, ಆಸನವನ್ನ ಕಲ್ಪಿಸುವದು.

[1]ಕೂರ್ಮಾದೀನ್ದಿವ್ಯಲೋಕಂತದನುಮಣಿಮಯಂಮಂಟಪಂತತ್ರ ಶೇಷಂತಸ್ಮಿನ್ಧರ್ಮಾದಿಪೀಠಂತದುಪರಿಕಮಲಂಚಾಮರಗ್ರಾ ಹಿಣೀಶ್ಚ । ವಿಷ್ಣುಂದೇವೀರ್ವಿಭೂಷಾಯುಧಗಣಮುರಗಂ ಪಾದುಕೇವೈನತೇಯಂಸೇನೇಶಂದ್ವಾರಪಾಲಾನ್ಕುಮುದಮು ಖಗಣಾನ್ವಿಷ್ಣುಭಕ್ತಾನ್ಪ್ರಪದ್ಯೇ ॥

ತಾತ್ಪರ್ಯ॥ ಕೂರ್ಮಾದಿ (ಜಗದಾಧಾರನಾದ ಕೂರ್ಮರೂಪಿಯಾದ ನಾರಾಯಣ, ನಾಗರಾಜನಾದ ಅನಂತ, ಭೂಮಿಗಳು) ಗಳನ್ನೂ, ವೈ ಕುಂಠವೆಂಬ, ದಿವ್ಯಲೋಕವನ್ನೂ, ಆ ಲೋಕದಲ್ಲಿ, ಆನಂದಮಯವಾದ ಮಹಾಮಣಿಮಂಟಪವನ್ನೂ, ಆ ಮಂಟಪದಲ್ಲಿ ಹಾಸಿಗೆಯಾಗಿರುವ ಮಹಾ ಶೇಷನನ್ನೂ, ಆ ಶೇಷನ ಮೇಲ್ಭಾಗದೊಳ್ ಧರ್ಮಾದಿ (ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈ ಶ್ವರ್ಯಗಳೆಂಬ ಪೀಠಪಾದ, ಪೀಠಗಾತ್ರಗಳಿಂ ಕೂಡಿರುವ ನಾಗರಾಜ) ಪೀ ಠವನ್ನೂ, ಆ ಪೀಠದಲ್ಲಿ ಅಷ್ಟದಳ ಕಮಲವನ್ನೂ, ಆ ಎಂಟುದಳಗಳಲ್ಲಿ, ಚಾಮರಗ್ರಾಹಿಣಿ (ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋ ಗಾ, ಪ್ರಹ್ವಿ, ಸತ್ಯಾ, ಈಶಾನಾ, ಎಂಬ) ಗಳನ್ನೂ, (ಚಕಾರದಿಂದ) ಗು ರುಗಳನ್ನೂ, ನಾರಾಯಣನನ್ನೂ, ದೇವಿ (ಶ್ರೀ, ಭೂ, ನೀಳೆ, ಗಳೆಂಬ ದಿವ್ಯ ಮಹಿಷಿಗಳು) ಗಳನ್ನೂ, ದಿವ್ಯಭೂಷಣ (ಕಿರೀಟ, ಕುಂಡಲ, ವೈಜ ಯಂತೀ, ತುಳಸೀ, ಶ್ರೀವತ್ಸ, ಹಾರ, ಕೌಸ್ತುಭ ಪೀತಾಂಬರಾದಿಗಳು)ಗಳ

೧ ಆಧಾರಪೀಠಾದಿ ಕಲ್ಪನವು ಬಹು ವಿಸ್ತಾರವಾದದ್ದಾದ ಪ್ರಯುಕ್ತ ತದರ್ಥ ಬೋಧಕವಾದ ಈ ಸಂಗ್ರಹಶ್ಲೋಕವು [illegible]

ನ್ನೂ, ಆಯುಧಸಮೂಹ (ಸುದರ್ಶನ, ನಂದಕ, ಪದ್ಮ, ಪಾಂಚಜನ್ಯ, ಕೌಮೋದಿಕೀ, ಶಾಂರ್ಙ್ಗಾದಿ ಆಯುಧಗಳು) ವನ್ನೂ, ನಾಗರಾಜನಾದ ಅನಂತನನ್ನೂ, ಭಗವತ್ಪಾದುಕೆಗಳನ್ನೂ, ವೈನತೆಯನನ್ನೂ, ಸೇನಾಧಿಪತಿಯಾದ ವಿಷ್ವಕ್ಸೇನರನ್ನೂ, ದ್ವಾರಪಾಲಕರು (ಚಂಡ, ಪ್ರಚಂಡ, ಭದ್ರ, ಸುಭದ್ರ, ಜಯ, ವಿಜಯ, ಧಾತೃ, ವಿಧಾತೃ, ಗಳೆಂಬುವರು, ಗಳನ್ನೂ, ಕುಮುದರೇ ಮೊದಲಾದ (ಕುಮುದ, ಕುಮುದಾಕ್ಷ, ಪುಂಡರೀಕ, ವಾಮನ, ಶಂಕುಕರ್ಣ, ಸರ್ವನೇತ್ರ, ಸುಮುಖ, ಸುಪ್ರತಿಷ್ಠಿತರು) ಗಣಾಧಿಪತಿಗಳನ್ನೂ, ಇಲ್ಲಿ ಹೇಳಲ್ಪಟ್ಟಿರುವ ಇನ್ನೂ ಹೇಳಲ್ಪಡದಿರುವ, ವಿಷ್ಣುಭಕ್ತರುಗಳನ್ನ ನಮಸ್ಕರಿಸುವೆನು, ಎಂದು ನಮಸ್ಕರಿಸಿ.

ಆವಾಹನ ಮಾಡತಕ್ಕ ಸಂದರ್ಭದಲ್ಲಿ, ಕ್ಷೀರಾರ್ಣವ, ಸೂರ್ಯಮಂಡಲ, ಹೃದಯ, ಶ್ರೀರಂಗಾದಿ ಕ್ಷೇತ್ರಗಳಿಂದ ಯಥಾಭಿಲಾಷವಾಗಿ ಆವಾಹನಮಾಡಿ ನಮಸ್ಕರಿಸಿ, ಅನುಜ್ಞೆಯನ್ನ ಹೊಂದಿ.

ಭಗವನ್ ಸಮಾರಾಧನಾಭಿಮುಖೋಭವ, ಎಂದು ಪ್ರಾರ್ಥಿಸಿ, ಮೂಲಮಂತ್ರದಿಂದ ನಮಸ್ಕರಿಸಿ.

> ಬ್ರಹ್ಮಾದ್ಯೈಸ್ಸಕಲಾದೇವಾಯನ್ನಸ್ಮರಂತಿಮಹೀಶ್ವರಾಃ । ಸಏಷ ಭಗವಾನದ್ಯಮಮಪ್ರತ್ಯಕ್ಷತಾಂಗತಃ । ಸ್ವಾಗತಂಭಗವನ್ನದ್ಯಮಾಂತಾರಯಿತುಮಾಗತಃ । ಧನ್ಯೋಽಸ್ಮ್ಯನುಗೃಹೀತೋಽಸ್ಮಿ ಕೃತಾರ್ಥೋಽಸ್ಮಿ ಕೃಪಾನಿಧೇ ॥ ಎಂದು ಸುಖಾಗಮನವನ್ನ ಕೇಳಿ,

ತಾತ್ಪರ್ಯ ॥ ಯಾವ ಪರಮಾತ್ಮನು ಬ್ರಹ್ಮಾದಿ ದೇವತೆಗಳಿಗೂ ಅಗೋಚರನೋ ಆ ಪರಮ ಪುರುಷನು ನನಗೆ ಪ್ರತ್ಯಕ್ಷನಾದನು, ಪರಮಾತ್ಮನಾದ ಭಗವಂತನೇ ನಿನಗೆ ಸುಖಾಗಮನವೇ, ನೀನು ನನ್ನನ್ನ ರಕ್ಷಿಸಲು ಬಂದ ಪ್ರಯುಕ್ತ ನಾನೀಗ ಧನ್ಯನಾದೆ, ಅನುಗ್ರಹಿಸಲ್ಪಟ್ಟ ಕೃಪಾನಿಧಿಯಾದ ಪರಮಾತ್ಮನೆ ನಾನು ಕೃತಾರ್ಥನಾದೆನು.

೧ ವಿಷ್ವಕ್ಸೇನರ ನಮಸ್ಕಾರಾನಂತರ, ಗಜಾನನ, ಜಯತ್ಸೇನ, ಹರಿವಕ್ತ್ರ, ಕಾಲಪ್ರಕೃತಿಗಳೆಂಬ ವಿಷ್ವಕ್ಸೇನ ಪರಿವಾರಗಳನ್ನು ನಮಸ್ಕರಿಸುವರು.

ಸಾನ್ನಿಧ್ಯಂಕುರುದೇವೇಶಸರ್ವದಾಸರ್ವಕಾಮದ । ದ್ರವ್ಯಮಂತ್ರ ಕ್ರಿಯಾಶಕ್ತಿಶ್ರದ್ಧಾಹಾನಿಂಸಹಪ್ರಭೋ ॥ ಎಂದು ಸಾನ್ನಿಧ್ಯಯಾಚನ ಮಾಡಿ.

ತಾತ್ಪರ್ಯ॥ ಸರ್ವ ಕಾಮಪ್ರದನಾದ ದೇವನಾಯಕನೇ ಸರ್ವದಾ ಸಾನ್ನಿಧ್ಯವಂ ಹೊಂದಿ ನನ್ನಿಂದ ಮಾಡಲ್ಪಡತಕ್ಕ ಆರಾಧನದಲ್ಲಿ, ಉಂಟಾಗುವ, ದ್ರವ್ಯ, ಮಂತ್ರ, ಕ್ರಿಯಾ, ಭಕ್ತಿ, ಶ್ರದ್ಧಾಹಾನಿಯನ್ನ ಕ್ಷಮಿಸು, ಎಂದು ನಮಸ್ಕರಿಸುವದು.

ಸಾಲಗ್ರಾಮಾರಾಧನದಲ್ಲಿ ಆ ವಾಹನಾದಿಗಳಿಲ್ಲವು. ಸ್ವಾಗತ, ಸಾನ್ನಿಧ್ಯಯಾಚನೆಗಳನ್ನ ಮಾಡತಕ್ಕದ್ದು.

ಇಜ್ಯಾಕಾಲಸ್ತ್ರುತೀಯೋಯಮಹ್ನೋಂಶಸ್ಸಮುಪಾಗತಃ । ಸಂಭೃತಾಶ್ಚೈವಸಂಭಾರಾಃಕಲ್ಪಿತಾನ್ಯಾಸನಾನಿಚ । ಸ್ನಾನಾದ್ಯರ್ಥಾನಿದೇವೇಶತವೇಚ್ಛಾವರ್ತತೇಯದಿ । ಅವಲೋಕನದಾನೇನತತ್ಸರ್ವಂಸಫಲಂಕುರು ಇತಿ, ವಿಜ್ಞಾಪ್ಯ॥

ತಾತ್ಪರ್ಯ॥ ಭಗವಂತನೇ, ಆರಾಧನಾಕಾಲವಾದ ಮಧ್ಯಾಹ್ನಪ್ರಾಪ್ತವಾಗಿ, ಸಂಭಾರಗಳು ಸಂಪಾದಿಸಲ್ಪಟ್ಟು ಸ್ನಾನಾದ್ಯಾಸನಗಳೂ ಕಲ್ಪಿಸಲ್ಪಟ್ಟಿರುವವು. ನಿನಗೆ ಇಚ್ಛೆಇರುವಪಕ್ಷ ನಿನ್ನ ಕಟಾಕ್ಷವೀಕ್ಷಣೆಯಿಂದ ಅದೆಲ್ಲವಂ ಸಫಲವನ್ನಾಗಿ ಮಾಡು.

ಓಂನಮೋನಾರಾಯಣಾಯಮಂತ್ರಾಸನಂ ಸಮರ್ಪಯಾಮಿ, ಎಂದು

ತುಲಸೀ, ಪುಷ್ಪಗಳಿಂದ ಮಂತ್ರಾಸನವಂ ಸಮರ್ಪಿಸಿ, ಉದ್ಧರಣಿಯಿಂದ ಅರ್ಘ್ಯಜಲವನ್ನ ಗ್ರಹಿಸಿ, ಹಸ್ತಗಳಿಂದ ನಾಸಿಕಾಪರ್ಯಂತ ಎತ್ತಿ, ನಿಂತು, ತನ್ನ ಮುಖವಂ ಬಗ್ಗಿಸಿಕೊಂಡು, ಭಗವಂತನೇ ನನ್ನ ಪೂಜೆಯನ್ನಂಗೀಕರಿಸು ಎಂದು ಚಿಂತಿಸುವನಾಗಿ, ಭಗವನ್ಮುಖದಲ್ಲಿ ತೋರಿಸಿ ಭಗವದ್ದಕ್ಷಿಣ ಹಸ್ತದಲ್ಲಿಯೂ ಸ್ವಲ್ಪಬಿಟ್ಟು, ಶೇಷವನ್ನ ಪ್ರತಿಗ್ರಹಪಾತ್ರ (ಕೆಳಗೆ ಇರುವ ಸ್ತಪನೆಪಾತ್ರೆ) ದಲ್ಲಿ ಬಿಡುವದು. ಅನಂತರ ಉದ್ಧರಿ

---

೧ ಉತ್ತರತ್ರ ಎಲ್ಲಿ ಎಲ್ಲಿ, ಅರ್ಘ್ಯಾದಿಗಳು ಸಮರ್ಪಣ ಮಾಡುವಂತೆ ಹೇಳಲ್ಪಡುವವೋ ಅಲ್ಲಿ ಇದೇರೀತ್ಯಾ ಅನುಷ್ಠಿಸಲ್ಪಡತಕ್ಕದ್ದು.

ಣೆಯನ್ನ ಮಧ್ಯೆ ಇರುವ ಶುದ್ಧೋದಕದಿಂದ ತೊಳೆದು, ಪಾದ್ಯಪಾತ್ರ ದಿಂದ ಜಲವನ್ನ ಗ್ರಹಿಸಿ, ಭಗವನ್ನಿದಂಪಾದ್ಯಂ ಪ್ರತಿಗೃಹ್ಣೀಷ್ವ, ಎಂದು, ಭಗವತ್ಪಾದಗಳಲ್ಲಿ ಸ್ವಲ್ಪ ಸಮರ್ಪಿಸಿ, ಮನಸ್ಸಿನಲ್ಲಿ ಭಗವತ್ಪಾದಗಳನ್ನ ತೊಳೆದಂತೆ ಭಾವಿಸಿ, ಶೇಷವನ್ನ ಪ್ರತಿಗ್ರಹಪಾತ್ರದಲ್ಲಿ ಬಿಡುವದು. ಹೀಗೆ ದ್ವಿರಾವೃತ್ತಿಮಾಡಿ, ಅನಂತರ ಉದ್ಧರಣಿಯನ್ನ ಶುದ್ಧೋದಕದಿಂದ ತೊಳೆದು, ಭಗವತ್ಪಾದಗಳನ್ನ ವಸ್ತ್ರದಿಂದ ತೊಡೆದು, (ಅನುಕೂಲವಿಲ್ಲದ ಪಕ್ಷ ಭಾವಿಸಿ) ಆಚಮನೀಯ ಪಾತ್ರದಲ್ಲಿ ಆಚಮನೀಯವಂ ತೆಗದುಕೊಂಡು, ಆಚಮನೀಯಂ ಪ್ರತಿಗೃಹ್ಣೀಷ್ವ, ಎಂದು ಚಿಂತಿಸಿ, ಭಗವದ್ದಕ್ಷಿಣ ಹಸ್ತದಲ್ಲಿ ಕಿಂಚಿತ್ ಸಮರ್ಪಿಸಿ, ಭಗವಂತನು ಆಚಮನ ಮಾಡುವನು ಎಂದು ಭಾವಿಸಿ, ಶೇಷವನ್ನ ಪ್ರತಿಗ್ರಹ ಪಾತ್ರದಲ್ಲಿ ಸಮರ್ಪಿಸುವದು. ಹೀಗೆ ತ್ರಿರಾವೃತ್ತಿ ಸಮರ್ಪಿಸಿ, ಶುದ್ಧೋದಕದಿಂದ ಉದ್ಧರಣಿಯನ್ನ ತೊಳೆದು, ಅನಂತರ, ಗಂಧಪುಷ್ಪ, ಧೂಪ, ದೀಪಾಚಮನ, ಮುಖವಾಸ (ಕರ್ಪೂರಾದಿ ಸುವಾಸನಾದ್ರವ್ಯ) ತಾಂಬೂಲಗಳನ್ನ ಸಮರ್ಪಿಸಿ ನಮಸ್ಕರಿಸುವದು. ಗಂಧಾದಿ ಮುಖ್ಯ ದ್ರವ್ಯವಿಲ್ಲದಪಕ್ಷ ಶುದ್ಧೋದಕವನ್ನೇ ಉದ್ಧರಿಣಿಯಿಂದ ಗ್ರಹಿಸಿ ಪ್ರತ್ಯಾಮ್ನಾಯವಾಗಿ ಸಮರ್ಪಿಸತಕ್ಕದ್ದು. ಭಗವಂತನಿಗೆ ಯಾವದನ್ನು ಸಮರ್ಪಿಸಬೇಕಾದಾಗ್ಯೂ ಮೂಲಮಂತ್ರದೊಡನೆ (ಓಂನಮೋನಾರಾಯಣಾಯ ಅರ್ಘ್ಯಂಸಮರ್ಪಯಾಮಿ, ಹೀಗೆಯೇ ಎಲ್ಲವನ್ನೂ ಊಹಿಸತಕ್ಕದ್ದು) ಸಮರ್ಪಿಸಬೇಕು.

ಅನಂತರ ಸ್ನಪನಪಾತ್ರೆಯಂ ಸಿದ್ಧಮಾಡಿ, ಭಗವಂತನಂ ನಮಸ್ಕರಿಸಿ,

> ಸ್ನಾನಕಾಲಸ್ತ್ವಯಂಪ್ರಾಪ್ತ ! ತವೇಚ್ಛಾವರ್ತತೆಯದಿ । ಅಭ್ಯಂಜಯಿತ್ವಾದೇವೇಶ ಸುಸ್ನಾನಂಕರ್ತುಮರ್ಹಸಿ । ಸ್ಫಟೀಕತಂಡುಯಾಪೀಠಇದಂಸ್ನಾನಪರೇತ್ವಯಿ । ಸಮಾದಪೀಠಪರಮಂಇದಂಸ್ನಾನಾಸನಂಮಹತ್ । ಆಸಾದಯಾಶುಸ್ನಾನಾರ್ಥಂಮದನುಗ್ರಹಕಾಮ್ಯಯಾ ।

ತಾತ್ಪರ್ಯ॥ ದೇವನಾಯಕನೇ ಸ್ನಾನಕಾಲವು ಪ್ರಾಪ್ತವಾದ ಪ್ರಯುಕ್ತ, ಉತ್ತಮವಾದ ಸ್ನಾನಪೀಠವನ್ನ ಸಿದ್ಧಮಾಡಿರುವೆನು, ನಿನಗೆ ಇಷ್ಟವಿರುವಪಕ್ಷ ಅಭ್ಯಂಜನಪೂರ್ವಕವಾಗಿ ಮಂಗಳಸ್ನಾನವನ್ನ ಮಾಡು,

ನನ್ನನ್ನ ಅನುಗ್ರಹಿಸುವದಕ್ಕೆ ಸ್ನಾನಾಸನವನ್ನ ಅಲಂಕರಿಸು, ಇತಿ ವಿಜ್ಞಾಪ್ಯ.

ಓಂ, ನಮೋನಾರಾಯಣಾಯ ಸ್ನಾನಾಸನಂ ಸಮರ್ಪಯಾಮಿ, ಎಂದು ಗಂಧಯುಕ್ತ ಪುಷ್ಪದಿಂದ ಸ್ನಾನಾಸನವಂ ಸಮರ್ಪಿಸಿ, ಪಾದುಕೆಗಳನ್ನು ಸಮರ್ಪಿಸಿ, ಅಲ್ಲಿ ದಯಮಾಡಿದ ವೊಡನೆ, ಮಾಲ್ಯ, ವಸ್ತ್ರ, ಭೂಷಣಗಳಂ ತೆಗೆದು, ವಿಷ್ವಕ್ಸೇನರಲ್ಲಿ ಕೊಟ್ಟು ಸ್ನಾನವಸ್ತ್ರವಂ ಸಮರ್ಪಿಸಿ, ಪಾದ್ಯ, ಆಚಮನ, ಪಾದಪೀಠಪ್ರದಾನ, ದಂತಕಾಷ್ಠ, ಜಿಹ್ವಾನಿರ್ಲೇಹನ (ನಾಲಿಗೆಯಂ ಹೆರೆಯುವದು) ಗಂಡೂಷ, ಮುಖಪ್ರಕ್ಷಾಳನ, ಹಸ್ತಪ್ರಕ್ಷಾಳನ, ಆಚಮನ, ಆದರ್ಶ (ಕನ್ನಡಿ) ಪ್ರದರ್ಶನ ಹಸ್ತಪ್ರಕ್ಷಾಳನ, ಮುಖವಾಸ, ತಾಂಬೂಲ, ತೈಲಾಭ್ಯಂಜನ, ಉದ್ವರ್ತನ, (ಶೀಗೆ ಮೊದಲಾದದ್ದು) ಪ್ರಕ್ಷಾಳನ, ತೋಯ, ಕಂಕತ (ಬಾಚಣಿಗೆ) ಶೋಧನ, ಹರಿದ್ರಾ (ಅರಿಶಿನ) ಲೇಪನ, ಪ್ರಕ್ಷಾಳನ, ವಸ್ತ್ರ, ಉತ್ತರೀಯ, ಯಜ್ಞೋಪವೀತ, ಪಾದ್ಯ, ಆಚಮನ, ಗಂಧ, ಪುಷ್ಪ, ಧೂಪ, ದೀಪ, ಆಚಮನಗಳನ್ನು ಸಮರ್ಪಿಸಿ, ಗೀತವಾದ್ಯಾದಿ ಮಂಗಳದೊಡನೆ, ಪುರುಷಸೂಕ್ತದಿಂದಲೂ, ಮೂಲಮಂತ್ರದಿಂದಲೂ, ಭಗವಂತನಿಗೆ ಸ್ನಾನೀಯದ್ರವ್ಯಯುಕ್ತವಾದ ಉದಕದಿಂದಲೂ, ಶುದ್ಧೋದಕದಿಂದಲೂ ಅಭಿಷೇಕ ಮಾಡಿ ನೀರಾಜನ (ಮಂಗಳಾರತಿ) ಆಚಮನ, ದೇಹಶೋಧನ, ವಸ್ತ್ರ, ಉತ್ತರೀಯ, ಪಾದ್ಯ, ಆಚಮನಗಳನ್ನು ಸಮರ್ಪಿಸುವದು.

## ೧ ಪುರುಷಸೂಕ್ತಂ.

ಸಹಸ್ರಶೀರ್ಷಾಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ ।

ಸಭೂಮಿಂವಿಶ್ವತೋವೃತ್ವಾ । ಅತ್ಯತಿಷ್ಠದ್ದಶಾಙ್ಗುಲಂ ॥೧

---

೧ ಈ ಪುರುಷಸೂಕ್ತಕ್ಕೆ ತಾತ್ಪರ್ಯವು ಅಂತದಲ್ಲಿ ಬರೆಯಲ್ಪಡುತ್ತೆ, ಪ್ರಯೋಗ ಸೌಕರ್ಯಕ್ಕಾಗಿ ಇಲ್ಲಿ ಮೂಲವು ಬರೆಯಲ್ಪಟ್ಟಿರುವದು. ಆಸನಾದಿ ಷೋಡಶೋಪಚಾರಗಳನ್ನ ಸಮರ್ಪಿಸಲು ಅನುಕೂಲಿಸುವಂತೆ ಋಕ್ಕುಗಳಿಗೆ ಸಂಖ್ಯೆ ಕೊಡಲ್ಪಟ್ಟಿರುವದು.

ಪುರುಷಏವೇದಗ್ಂಸರ್ವಂ । ಯದ್ಭೂತಂಯಚ್ಚಭವ್ಯಂ ।

ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥೨॥

ಏತಾವಾನಸ್ಯಮಹಿಮಾ । ಅತೋಜ್ಯಾಯಾಗ್ಂಶ್ಚಪೂರುಷಃ ॥

ಪಾದೋಽಸ್ಯವಿಶ್ವಾಭೂತಾನಿ । ತ್ರಿಪಾದಸ್ಯಾಮೃತಂದಿವಿ । ॥೩॥

ತ್ರಿಪಾದೂರ್ಧ್ವಉದೈತ್ಪುರುಷಃ । ಪಾದೋಽಸ್ಯೇಹಾಭವಾತ್ಪುನಃ ॥

ತತೋವಿಷ್ವಙ್ವ್ಯಕ್ರಾಮತ್ । ಸಾಶನಾನಶನೇಅಭಿ ॥೪॥

ತಸ್ಮಾದ್ವಿರಾಡಜಾಯತ । ವಿರಾಜೋಅಧಿಪೂರುಷಃ ॥

ಸಜಾತೋಅತ್ಯರಿಚ್ಯತ । ಪಶ್ಚಾದ್ಭೂಮಿಮಥೋಪುರಃ ॥೫॥

ಯತ್ಪುರುಷೇಣಹವಿಷಾ । ದೇವಾಯಜ್ಞಮತನ್ವತ ॥

ವಸಂತೋಅಸ್ಯಾಸೀದಾಜ್ಯಂ । ಗ್ರೀಷ್ಮಇಧ್ಮಶ್ಶರದ್ಧವಿಃ ॥೬॥

ಸಪ್ತಾಸ್ಯಾಸನ್ಪರಿಧಯಃ । ತ್ರಿಸ್ಸಪ್ತಸಮಿಧಃಕೃತಾಃ ॥

ದೇವಾಯದ್ಯಜ್ಞಂತನ್ವಾನಾಃ । ಅಬಧ್ನನ್ಪುರುಷಂಪಶುಂ ॥೭॥

ತಂಯಜ್ಞಂಬರ್ಹಿಷಿಪ್ರೌಕ್ಷನ್ । ಪುರುಷಂಜಾತಮಗ್ರತಃ ॥

ತೇನದೇವಾಅಯಜಂತ । ಸಾಧ್ಯಾಋಷಯಶ್ಚಯೇ ॥೮॥

ತಸ್ಮಾದ್ಯಜ್ಞಾತ್ಸರ್ವಹುತಃ । ಸಂಭೃತಂಪೃಷದಾಜ್ಯಂ ॥

ಪಶೂಗ್ಂಸ್ತಾಗ್ಂಶ್ಚಕ್ರೇವಾಯವ್ಯಾನ್ । ಆರಣ್ಯಾನ್‌ಗ್ರಾಮ್ಯಾಶ್ಚಯೇ ॥೯॥

ತಸ್ಮಾದ್ಯಜ್ಞಾತ್ಸರ್ವಹುತಃ । ಋಚಸ್ಸಾಮಾನಿಜಜ್ಞಿರೇ ॥

ಛಂದಾಗ್ಂಸಿಜಜ್ಞಿರೇತಸ್ಮಾತ್ । ಯಜುಸ್ತಸ್ಮಾದಜಾಯತ ॥೧೦॥

ತಸ್ಮಾದಶ್ವಾಅಜಾಯಂತ । ಯೇಕೇಚೋಭಯಾದತಃ ॥

ಗಾವೋಹಜಜ್ಞಿರೇತಸ್ಮಾತ್ । ತಸ್ಮಾಜ್ಜಾತಾಅಜಾವಯಃ ॥೧೧॥

ಯತ್ಪುರುಷಂವ್ಯದಧುಃ । ಕತಿಧಾವ್ಯಕಲ್ಪಯನ್ ।

ಮುಖಂಕಿಮಸ್ಯಕೌಬಾಹೂ । ಕಾವೂರೂಪಾದಾವುಚ್ಯೇತೇ ॥೧೨॥

ಬ್ರಾಹ್ಮಣೋಽಸ್ಯಮುಖಮಾಸೀತ್ । ಬಾಹೂರಾಜನ್ಯಃಕೃತಃ ।

ಊರೂತದಸ್ಯಯದ್ವೈಶ್ಯಃ । ಪದ್ಭ್ಯಾಗ್ಂಶೂದ್ರೋಅಜಾಯತ ॥೧೩॥

ಚಂದ್ರಮಾಮನಸೋಜಾತಃ । ಚಕ್ಷೋಸ್ಸೂರ್ಯೋಅಜಾಯತ ।

ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ ॥೧೪॥

ನಾಭ್ಯಾಆಸೀದಂತರಿಕ್ಷಂ । ಶೀರ್ಷ್ಣೋದ್ಯೌಸ್ಸಮವರ್ತತ ।

ಪದ್ಭ್ಯಾಂಭೂಮಿರ್ದಿಶಶ್ಶ್ರೋತ್ರಾತ್ । ತಥಾಲೋಕಾಗ್ಂಅಕಲ್ಪಯನ್ ॥೧೫॥

ವೇದಾಹಮೇತಂಪುರುಷಂಮಹಾಂತಂ। ಆದಿತ್ಯವರ್ಣಂತಮಸಸ್ತುಪಾರೇ।
ಸರ್ವಾಣಿರೂಪಾಣಿವಿಚಿತ್ಯಧೀರಃ । ನಾಮಾನಿಕೃತ್ವಾಽಭಿವದನ್ಯದಾ
ಸ್ತೇ ॥೧೬॥

ಧಾತಾಪುರಸ್ತಾದ್ಯಮುದಾಜಹಾರ । ಶಕ್ರಃಪ್ರವಿದ್ವಾನ್ಪ್ರದಿಶಶ್ಚತಸ್ರಃ॥
ತಮೇವಂವಿದ್ವಾನಮೃತಇಹಭವತಿ । ನಾನ್ಯಃಪಂಥಾಅಯನಾಯವಿ
ದ್ಯತೇ ॥೧೭॥

ಯಜ್ಞೇನಯಜ್ಞಮಯಜಂತದೇವಾಃ । ತಾನಿಧರ್ಮಾಣಿಪ್ರಥಮಾ
ನ್ಯಾಸನ್ ।
ತೇಹನಾಕಂಮಹಿಮಾನಸ್ಸಚಂತೇ । ಯತ್ರಪೂರ್ವೇಸಾಧ್ಯಾಸ್ಸಂತಿ
ದೇವಾಃ ॥೧೮॥

ತೈತ್ತಿರೀಯದಲ್ಲಿ (೧೮) ಋಕ್ಕುಗಳು, ಇರುವದಾದ ಪ್ರಯುಕ್ತ ಪ್ರಥಮತಃ (೧೪) ಋಕ್ಕುಗಳಿಂದ (೧೪) ಉಪಚಾರಗಳನ್ನು ಯಥಾಕ್ರಮವಾಗಿ ಸಮರ್ಪಿಸಿ, ಅನಂತರ ಎರಡೆರಡು ಋಕ್ಕುಗಳನ್ನು ಸೇರಿಸಿ ಜೋಡಿಸಿ ಇತರ ಉಪಚಾರದ್ವಯವನ್ನು ಅನುಷ್ಠಿಸತಕ್ಕದ್ದೆಂದು ಹೇಳುತ್ತಾರೆ.

ಅನಂತರ ಅಲಂಕಾರಾಸನಂ ಸಮರ್ಪಿಸಿ.

ದೇವದೇವಜಗನ್ನಾಥಭೂಷಾಸ್ರಕ್ಚಂದನಾದಿಕಂ । ಅಲಂಕಾರಾರ್ಥ
ಸಂಭಪ್ರಂಅಧಿತಿಷ್ಠತ್ವಂಶ್ರೀಯುತಂ ॥

ತಾತ್ಪರ್ಯ॥ ಜಗನ್ನಾಯಕನೇ, ದೇವನಾಯಕನೇ, ಮಂಗಳದಾಯಕವಾದ ಈ ಅಲಂಕಾರಾಸನವನ್ನು ಅಲಂಕರಿಸಿ, ಗಂಧಮಾಲ್ಯಾಭರಣಗಳನ್ನು ಸ್ವೀಕರಿಸು, ಎಂದು ವಿಜ್ಞಾಪಿಸಿ.

ಓಂನಮೋ ನಾರಾಯಣಾಯ ಅಲಂಕಾರಾಸನಂಸಮರ್ಪಯಾಮಿ,

ಎಂದು ಆಸನವಂ ಪುಷ್ಪದಿಂದ ಸಮರ್ಪಿಸಿ.

ಅಲಂಕಾರಾಸನಾರೂಢನಾದಂತೆ ಭಗವಂತನನ್ನ ಭಾವಿಸಿ, ಪಂಚ (೫) ಪಾತ್ರಗಳಲ್ಲಿರುವ ಉದಕವನ್ನೂ ಪರಿಹರಿಸಿ, (ಕೆಳಗಿರುವ ಪತದ್ಗ್ರಹ ಪಾತ್ರದಲ್ಲಿ ಬಿಟ್ಟು) ಪೂರ್ವದೋಷಾದಿಯಲ್ಲಿ ಶುದ್ಧೋದಕದಿಂದ, ಅರ್ಘ್ಯ, ಪಾದ್ಯ, ಆಚಮನೀಯ, ಶುದ್ಧೋದಕದಿಂದ ಅರ್ಘ್ಯ, ಪಾದ್ಯಾಚಮನಗಳನ್ನ ಸಮರ್ಪಿಸಿ, ಗಂಧ, ಪುಷ್ಪ, ವಸ್ತ್ರೋತ್ತರೀಯ ಭೂಷಣಾದಿಗಳನ್ನು ಘಂಟಾನಾದಪುರಸ್ಸರ ಧೂಪದೀಪಗಳನ್ನೂ ಸಮರ್ಪಿಸಿ, ಆಚಮನವಂ ಸಮರ್ಪಿಸಿ, ಛತ್ರ, ಚಾಮರ, ನೃತ್ತ ಗೀತಾದಿಗಳಿಂದ ಪೂಜಿಸುವದು.

ಶ್ರೀ, ಭೂ, ನೀಳಾದೇವಿಗಳಿಗೂ, ಅನಂತ, ಗರುಡ, ವಿಷ್ವಕ್ಸೇನ ಸುದರ್ಶನಾದಿಗಳಿಗೂ, ಪರಾಂಕುಶಾದ್ಯಾಚಾರ್ಯರುಗಳಿಗೂ, ಸ್ನಾನಾಸನಾದ್ಯಲಂಕಾರಾಸನಾಂತ ಪರ್ಯಂತ, ಅರ್ಘ್ಯಾದ್ಯುಪಚಾರಗಳನ್ನ ಪ್ರತ್ಯೇಕಪ್ರತ್ಯೇಕವಾಗಿ ಸಮರ್ಪಿಸುವದು. ಅಥವಾ (ಅಶಕ್ತಪಕ್ಷ) ಗಂಧ, ಪುಷ್ಪ, ಧೂಪ, ದೀಪ, ಆಚಮನಗಳನ್ನ ಸಮರ್ಪಿಸುವದು. ಅಥವಾ, ಪುಷ್ಪಾಂಜಲಿಯಂ ಸಮರ್ಪಿಸುವದು. ಅರ್ಘ್ಯಾದಿ ಜಲಗಳನ್ನ ಪ್ರತಿಗ್ರಹ ಪಾತ್ರದಲ್ಲಿ ಬಿಟ್ಟು, ಪೂರ್ವದೋಷಾದಿಯಲ್ಲಿ ಪಾತ್ರಗಳನ್ನ ಶೋಧಿಸಿ, ಶೋಷಣ ದಾಹನ ಪ್ಲಾವನಗಳಂಮಾಡಿ, ಅರ್ಘ್ಯ, ಪಾದ್ಯ, ಆಚಮನೀಯ, ಪಾನೀಯ, ಸರ್ವಾರ್ಥತೋಯ (ಶುದ್ಧೋದಕ) ಗಳನ್ನು ಕಲ್ಪಿಸುವದು.

## ಅಥ ಮಂತ್ರಪುಷ್ಪ ಪ್ರಕಾರಃ.

ಹರಿಃಓಂ॥ ಅಗ್ನಿಮೀಳೇಪುರೋಹಿತಂಯಜ್ಞಸ್ಯದೇವಮೃತ್ವಿಜಂ,

ಹೋತಾರಂರತ್ನಧಾತಮಂ ಹರಿಃಓಂ, ಹರಿಃಓಂ,

ಇಷೇತ್ವೋರ್ಜೇತ್ವಾವಾಯವಸ್ಥೋಪಾಯವಸ್ಥದೇವೋ

ವಸ್ಸನಿತಾವಸ್ರ್ವರ್ಯತುಶ್ರೇಷ್ಠತಮಾಯಕರ್ಮಣೇ, ಹರಿಃ ಓಂ, ಹರಿಃಓಂ,

ಅಗ್ನಆಯಾಹಿವೀತಯೇಗೃಣಾನೋಹವ್ಯದಾತಯೇ, ನಿಹೋತಾಸತ್ಸಿಬರ್ಹಿಷಿ, ಹರಿಃಓಂ, ಹರಿಃಓಂ,

ಶನ್ನೋದೇವೀರಭಿಷ್ಟಯಆಪೋಭವಂತುಪೀತಯೇ, ಶಂಯೋರಭಿಸ್ರವಂತುನಃ, ಹರಿಃಓಂ, ಹರಿಃಓಂ,

ಓಮಿತ್ಯಗ್ರೇವ್ಯಾಹರೇತ್, ನಮಇತಿಪಶ್ಚಾತ್, ನಾರಾಯಣಾಯೇತ್ಯುಪರಿಷ್ಟಾತ್, ಓಮಿತ್ಯೇಕಾಕ್ಷರಂ, ನಮಇತಿದ್ವೇಅಕ್ಷರೇ, ನಾರಾಯಣಾಯೇತಿಪಂಚಾಕ್ಷರಾಣಿ, ಏತದ್ವೈನಾರಾಯಣಸ್ಯಾಷ್ಟಾಕ್ಷರಂಪದಂ, ಯೋಹವೈನಾರಾಯಣಸ್ಯಾಷ್ಟಾಕ್ಷರಂಪದಮಧ್ಯೇತಿ, ಅನಪಬ್ರುವಸ್ಸರ್ವಮಾಯುರೇತಿ, ವಿಂದತೇಪ್ರಾಜಾಪತ್ಯಗ್ಂರಾಯಸ್ಪೋಷಂಗೌಪತ್ಯಂ, ತತೋಮೃತತ್ವಮಶ್ನುತೆ ತತೋಮೃತತ್ವಮಶ್ನುತ ಇತಿ, ಯಏವಂವೇದ, ಇತ್ಯುಪನಿಷತ್,

ಇಚ್ಛಾಪೀರಿಮಹಾಬಾಹುಂರಘುವೀರಂಮಹಾಬಲಂ ||
ಗಜೇನಮುಕ್ತಾಭರಾಂತಂರಾಮಂಭಕ್ತಾನ್ನತಾನನಂ ||
ತಂದೃಷ್ಟ್ವಾಶತ್ರುಹಂತಾರಂಮಹರ್ಷೀಣಾಂಸುಖಾವಹಂ |
ಬಭೂವಹೃಷ್ಟಾವೈದೇಹೀಭರ್ತಾರಂಪರಿಷಸ್ವಜೇ ||
ತಾಪಸಾವನಾವಿರಭೋಕ್ತ್ಯಾಭಿಸ್ಸ್ಮಯಮಾನಮುಖಾಂಬುಜಃ |
ಪೀತಾಂಬರಧರಸ್ಸ್ರಗ್ವೀಸಾಕ್ಷಾನ್ಮನ್ಮಥಮನ್ಮಥಃ ||
ಪಿಷನಾರಾಯಣಶ್ರೀಮಾನ್ನಿರ್ವಾಣವಸಿಕೇತನಃ ||
ನಾಗಪರ್ಯಂಕಮುತ್ಸೃಜ್ಯಹ್ಯಾಗತೋಮಧುರಾಂಪುರೀಂ ||

ಇತ್ಯಾದಿಭಿಃ, ಮೂಲಮಂತ್ರೇಣ, ಚಪ್ರತ್ಯಕ್ಷರಂ, ಪ್ರಪ್ಪಂಪ್ರದಾಯ, ದ್ವಾದಶಾಕ್ಷರ, ವಿಷ್ಣುಗಾಯತ್ರೀ, ಪಂಚೋಪನಿಷನ್ಮಂತ್ರ, ಇತಿಹಾಸಪುರಾಣಾದಿಭಿಃ, ಮಂತ್ರಪುಷ್ಪಂಸಮರ್ಪ್ಯ, [1]ಕೇಶವಾದಿದ್ವಾದಶನಾಮಭಿಃ ಮತ್ಸ್ಯಾದಿ, ದಶನಾಮಭಿಃ, ಅಷ್ಟೋತ್ತರಶತ, ಸಹಸ್ರನಾಮಭಿಶ್ಚಯಥಾನುಕೂಲಂಅಭ್ಯರ್ಚ್ಯ,

ಶ್ರೀದೇವ್ಯಾದಿ, ಪಾರ್ಷದಾಂತಂ, ಪ್ರಷ್ಪಾಣಿಸಮರ್ಪ್ಯ, ಯಥಾಶಕ್ತಿಮೂಲಮಂತ್ರಂಜಪಿತ್ವಾ, ಮುಖವಾಸತಾಂಬೂಲಾದೀನಿ ದದ್ಯಾತ್ ||

ತಾತ್ಪರ್ಯ|| ಸುಸ್ಪಷ್ಟವಾಗಿರುವದು.

ಅನಂತರ ಭೋಜ್ಯಾಸನವಂ ಸಿದ್ಧಪಡಿಸಿ,

ಮೃಷ್ಟಮೇಧ್ಯಸ್ಥಿರಾನ್ನಾನಿ ಭಕ್ಷ್ಯಭೋಜ್ಯಾನ್ಯನೇಕಶಃ |
ಸಂಪನ್ನಾನಿಜಗನ್ನಾಥ ಭೋಜ್ಯಾಸನಮುಪಾಶ್ರಯ ||

ತಾತ್ಪರ್ಯ|| ಪರಿಶುದ್ಧವಾದ ಮೃಷ್ಟಾನ್ನಗಳೂ, ಭಕ್ಷ್ಯಭೋಜ್ಯಗಳೂ ಸಿದ್ಧವಾಗಿರುವವು. ಜಗನ್ನಾಥನೇ ಭೋಜ್ಯಾಸನದಲ್ಲಿ ದಯಮಾಡು, ಇತಿ, ಪ್ರಾರ್ಥ್ಯ.

---

೧ ಕೇಶವಾದಿ ದ್ವಾದಶನಾಮಗಳು ಮತ್ಸ್ಯಾದಿ ದಶನಾಮಗಳೂ ಸಹ ಸರ್ವ ವಿದಿತವಾಗಿರುವ ಪ್ರಯುಕ್ತ ಬರೆಯಲ್ಪಡುವದಿಲ್ಲವು.

ಓಂ, ನಮೋ ನಾರಾಯಣಾಯ ಭೋಜ್ಯಾಸನಂ ಸಮರ್ಪಯಾಮಿ, ಎಂದು ಭೋಜ್ಯಾಸನವಂ ಸಮರ್ಪಿಸಿ, ಮೂಲಮಂತ್ರದಿಂದ ಪಾದುಕೆಗಳಂ ಕೊಟ್ಟು ಪಾದುಕೆಗಳನ್ನ ಭಗವಂತನು ಅಲಂಕರಿಸಿದಂತೆ ಭಾವಿಸಿ, ಪಾದ್ಯ, ಆಚಮನ, ಅರ್ಘ್ಯ (ಚಮೆಳೋದಕ) ಗಳನ್ನು ಸಮರ್ಪಿಸಿ, ಮಧುಪರ್ಕಕ್ಕಾಗಿ ಗುಡ (ಬೆಲ್ಲ) ದ್ರಾಕ್ಷಿಕ (ಜೇನುತುಪ್ಪ) ಕ್ಷೀರ, ದಧಿ, ಆಜ್ಯಗಳನ್ನು ಪಾತ್ರದಲ್ಲಿ ಇಟ್ಟು ಶೋಷಣ ದಾಹನ ಪ್ಲಾವನಗಳಂ ಮಾಡಿ ಅರ್ಘ್ಯಜಲದಿಂದ ಪ್ರೋಕ್ಷಿಸಿ ಸಂತುಷ್ಟಮನಸ್ಕನಾಗಿ ಅವನತ (ಬಗ್ಗಿಸಲ್ಪಟ್ಟ) ಶಿರಸ್ಕನಾಗಿ ಮಧುಪರ್ಕವಂ ಸಮರ್ಪಿಸಿ ಆಚಮನೀಯವಂ ಸಮರ್ಪಿಸುವದು.

(ಭಗವಂತನಿಗೆ ಸಮರ್ಪಿಸತಕ್ಕ ಸಕಲ ದ್ರವ್ಯವನ್ನೂ ಶೋಷಣ, ದಾಹನ, ಪ್ಲಾವನಗಳಿಂದ ಶೋಧಿಸಿ, ಅರ್ಘ್ಯಜಲದಿಂದ ಪ್ರೋಕ್ಷಿಸಿ, ಅಸ್ತ್ರಮಂತ್ರದಿಂದ ರಕ್ಷಾಪೂರ್ವಕವಾಗಿಯೇ ಸಮರ್ಪಿಸತಕ್ಕದ್ದು.)

ಅನಂತರ ಮಧುಪರ್ಕಾಂಗವಾಗಿ ಗೋವನ್ನೂ, ಸುವರ್ಣರತ್ನಾದಿಗಳನ್ನೂ ಸಮರ್ಪಿಸುವದು.

ಅನಂತರ, ಘೃತಯುಕ್ತವಾದ ದಿವ್ಯಾನ್ನವನ್ನೂ, ಫಲ, ಮೂಲ ವ್ಯಂಜನಾದಿಗಳನ್ನೂ, ದಧಿ, ಕ್ಷೀರ, ಭಕ್ಷ್ಯಾದಿಗಳನ್ನೂ, ತನಗೆ ಇಷ್ಟವಾದ ಇತರ ಪದಾರ್ಥಗಳನ್ನೂ, (ಸಕಲ ಪದಾರ್ಥಗಳೂ ಶಾಸ್ತ್ರವಿರುದ್ಧವಾಗಿರದಂತೆ) ಸಂಪಾದಿಸಿ, ಶೋಷಣಾದಿಗಳಿಂದ ಶೋಧಿಸಿ, ಅರ್ಘ್ಯಜಲದಿಂದ ಪ್ರೋಕ್ಷಿಸಿ, ಅಸ್ತ್ರಮಂತ್ರಾಭಿಮಂತ್ರಣವಮಾಡಿ, ಸುರಭಿಮುದ್ರಾಪ್ರದರ್ಶನಮಾಡಿ, ಭಗವಂತನ ಪುರೋಭಾಗದಲ್ಲಿ ಇಟ್ಟು, ಅಂಜಲಿಬಂಧಪೂರ್ವಕವಾಗಿ, ನಿಂತು, ಭಯಬಿಂಕಾಡಿ.

ಪಾಯಸಾನ್ನಂ ಗುಡಾನ್ನಂಚ, ಮುದ್ಗಾನ್ನಂ ಶುದ್ಧಮೋದನಂ।
ದಧಿಕ್ಷೀರಾಜ್ಯಸಮ್ಮಿಶ್ರಂ [illegible] ॥
[illegible] ।
[illegible] ॥
[illegible] ।
[illegible] ॥

ಯದರ್ಪಿತಂಕುಚೇಲೇನಯದ್ವೈವಿದುರಕಲ್ಪಿತಂ ॥
ಯತೀಂದ್ರಯಾಮುನೇಯಾದ್ಯೈಃಪರಾಂಕುಶಮುಖೈರಪಿ ।
ನಿವೇದ್ಯಮಾನಂನೈವೇದ್ಯಂಸ್ವೀಕುರುಷ್ವಸುರೇಶ್ವರ ॥ ಇತಿ ಸಂಪ್ರಾರ್ಥ್ಯ ॥

ತಾತ್ಪರ್ಯ॥ ದೇವನಾಯಕನೇ, ನನ್ನಿಂದ ಸಮರ್ಪಿಸಲ್ಪಡುವ, ದಧಿಕ್ಷೀರಾಜ್ಯಗಳಿಂದ ಮಿಶ್ರವಾದ ಶುದ್ಧಾನ್ನವನ್ನೂ, ನಾನಾ ಭಕ್ಷ್ಯ ಫಲಗಳನ್ನೂ, ಮುದ್ಗಾನ್ನಪಾಯಸ ಗುಡಾನ್ನಾದಿಗಳನ್ನೂ ಕೃಪೆಯಿಂದ ಅಂಗೀಕರಿಸು.

ಗೃಹದಲ್ಲಿ ಕೌಸಲ್ಯಾದೇವಿಯಿಂದಲೂ, ಅರಣ್ಯದಲ್ಲಿ, ಲಕ್ಷ್ಮಣಸ್ವಾಮಿಯಿಂದಲೂ, ಪಂಪಾತೀರದಲ್ಲಿ ಭಕ್ತೆಯಾದ ಶಬರಿಯಿಂದಲೂ, ಭರದ್ವಾಜಾಶ್ರಮದಲ್ಲಿ ಭರದ್ವಾಜ ಮಹರ್ಷಿಗಳಿಂದಲೂ, ನಂದಗೋಕುಲದಲ್ಲಿ ಗೋಪ ಗೋಪಾಂಗನೆಗಳಿಂದಲೂ, ಅರಣ್ಯದಲ್ಲಿ ಯಜ್ಞಪತ್ನಿಗಳಿಂದಲೂ, ಮಹೇಂದ್ರನಿಂದಲೂ, ದ್ವಾರಕಾನಗರದಲ್ಲಿ ಕುಚೇಲನಿಂದಲೂ, ಹಸ್ತಿನಾವತಿಯಲ್ಲಿ ವಿದುರನಿಂದಲೂ, ಶ್ರೀರಂಗ, ವೃಷಗಿರಿ, ಸತ್ಯವ್ರತ, ಯದುಗಿರಿ ಕುರುಕಾನಗರ್ಯಾದಿಗಳಲ್ಲಿ, ಪರಾಂಕುಶ, ಯಾಮುನೇಯ, ಭಾಷ್ಯಕಾರಾದಿಗಳಿಂದಲೂ, ಸಮರ್ಪಿಸಲ್ಪಟ್ಟ ನೈವೇದ್ಯವನ್ನ ಸ್ವೀಕರಿಸಿದಂತೆ ನನ್ನಿಂದ ಸಮರ್ಪಿಸಲ್ಪಡುವ ಈ ಭಕ್ಷ್ಯ ಭೋಜ್ಯಾದಿಗಳನ್ನು ಪರಮ ಕೃಪೆಯಿಂದ ಸ್ವೀಕರಿಸು, ಎಂದು ಪ್ರಾರ್ಥಿಸಿ, ಘಂಟಾನಾದ ಪೂರ್ವಕವಾಗಿ ಹವಿರ್ನಿವೇದನ ಮಾಡುವದು.

ಪರಿಷೇಚನಾಭ್ಯುಕ್ಷಣ ಪ್ರಾಣಾಹುತಿಗಳನ್ನು ಯಥಾಕ್ರಮವಾಗಿ ಸಮರ್ಪಿಸಿ ಗ್ರಾಸ ಮುದ್ರೆ (ಮಧ್ಯಮ, ಅನಾಮಿಕಾ ಬೆರಳುಗಳ ಮಧ್ಯಪರ್ವ (ಗೆಣ್ಣು) ಗಳಿಗೆ ಅಂಗುಷ್ಠ ಸಂಬಂಧ) ಯಿಂದ ಮೂಲಮಂತ್ರದೊಡನೆ ನಿವೇದನ ಮಾಡತಕ್ಕದ್ದು.

ಮಧ್ಯೇ ಮಧ್ಯೇಪಾನೀಯವನ್ನೂ ಸಮರ್ಪಿಸುವದು. ಅನಂತರ ಅನುಪಾನ (ಶುಂಠಿ, ನಿಂಬೇರಸಾದಿಗಳಿಂದ ಕೂಡಿದ ಮಜ್ಜಿಗೆ) ತರ್ಪಣ (ಎಳನೀರು ಮುಂತಾದ್ದು) ಗಳಂ ಸಮರ್ಪಿಸಿ, ಸರ್ವಾರ್ಥೋದಕದಿಂದ, ಹಸ್ತಪ್ರಕ್ಷಾಳನ, ಗಂಡೂಷ, ಮುಖಪ್ರಕ್ಷಾಳನಗಳಂ ಸಮರ್ಪಿಸಿ

ಪಾದ್ಯ, ಆಚಮನಗಳಂ ಕೊಟ್ಟು, ವಸ್ತ್ರದಿಂದ, ಮುಖಶೋಧನ, ಹಸ್ತ ಶೋಧನ, ಪಾದಶೋಧನಗಳನ್ನ ಮಾಡಿ, ಗಂಧ ಪುಷ್ಪ ಮುಖವಾಸ ತಾಂಬೂಲಗಳಂ ಸಮರ್ಪಿಸುವದು.

ದೇವ್ಯಾದಿಗಳಿಗೆ ಹವಿರ್ನಿವೇದನ ಪಕ್ಷದಲ್ಲಿ ಭಗವನ್ನಿವೇದಿತಾನ್ನದಲ್ಲಿ ಕಿಂಚಿದ್ಭಾಗವನ್ನ ಭಾಗಿಸಿ ನಿವೇದನ ಮಾಡುವದು. ಅರ್ಘ್ಯಾದ್ಯುಪಚಾರ ಗಳನ್ನು ಪ್ರತ್ಯೇಕವಾಗಿ ಸಮರ್ಪಿಸಿ ಗಂಧ ಪುಷ್ಪ, ತಾಂಬೂಲಗಳನ್ನ ಸಮರ್ಪಿಸುವದು. ವಿಷ್ವಕ್ಸೇನಾರಾಧನಕ್ಕೂ ಸ್ವಲ್ಪ ಭಾಗವಂ ತೆಗೆ 'ಡುವದು.

ಪಾತ್ರಗಳನ್ನು ಶೋಧಿಸಿ, ಶೋಷಣಾದಿಗಳನ್ನು ಮಾಡಿ, ಶುದ್ಧೋದ ಕದಿಂದ ಪಾತ್ರಗಳಂ ತುಂಬಿ, ಶೋಷಣಾದಿಗಳಿಂದ ಶೋಧಿಸಿ, ಅರ್ಘ್ಯ, ಪಾದ್ಯ, ಆಚಮನೀಯ, ಪಾನೀಯ, ಸರ್ವಾರ್ಥೋದಕಗಳಂ ಕಲ್ಪಿಸಿ,

ಮಂತ್ರಾಸನವಂ ಸಿದ್ಧಿಮಾಡಿ, ಕೂರ್ಚದಿಂದ ಪ್ರೋಕ್ಷಿಸಿ,

ಮಂತ್ರಾಸನಮಿದಂತುಭ್ಯಂಮಯೋಪಾತ್ತಮನುತ್ತಮಂ॥
ಕೂರ್ಚೇನಶೋಧಿತಂವಿಷ್ಣೋಪುನಾಸಾದಯಪ್ರಭೋ॥ 4

ತಾತ್ಪರ್ಯ ॥ ಕೂರ್ಚದಿಂದ ಶೋಧಿಸಲ್ಪಟ್ಟ ಮಂತ್ರಾಸನವು ಸಿದ್ಧ ಮಾಡಲ್ಪಟ್ಟಿದೆ, ಭಗವಂತನೇ, ಮಂತ್ರಾಸನವನ್ನ ಪುನಃ ಸ್ವೀಕರಿಸು, ಎಂದು ಪ್ರಾರ್ಥಿಸಿ, ಮಂತ್ರಾಸನವಂ ಸಮರ್ಪಿಸಿ, ಪಾದ್ಯ, ಆಚಮನ ಗಂಧ ಪುಷ್ಪ, ಧೂಪ ದೀಪ, ಆಚಮನ, ಭಕ್ಷ್ಯ, ಫಲ, ಆಚಮನ, ಮುಖವಾಸ, ತಾಂಬೂಲಗಳನ್ನ ಸಮರ್ಪಿಸುವದು.

ನಂತರ ಪರ್ಯಂಕಾಸನವಂ ಸಿದ್ಧಮಾಡಿ. 5

ಭಗವನ್ಪುಂಡರೀಕಾಕ್ಷಕರುಣಾಮೃತವಾರಿಧೇ । ಆಸಾದಯ ಮ
ಯೋಪಾತ್ತಂಪರ್ಯಂಕಾಸನಮುತ್ತಮಂ॥

ತಾತ್ಪರ್ಯ॥ ಕೃಪಾನಿಧಿಯಾದ ಕಮಲಾಕ್ಷನೇ, ನನ್ನಿಂದ ಕೊಡಲ್ಪಟ್ಟ ಪರ್ಯಂಕಾಸನವನ್ನ ಆಶ್ರಯಿಸು, ಎಂದು ಪ್ರಾರ್ಥಿಸಿ.

ಓಂನಮೋನಾರಾಯಣಾಯ ಪರ್ಯಂಕಾಸನಂ ಸಮರ್ಪಯಾಮಿ. ಎಂದು

ಪರ್ಯಂಕಾಸನವಂ ಸಮರ್ಪಿಸಿ, ಪಾದ್ಯಾಚಮನಗಳಂ ಕೊಟ್ಟು, ಮಾಲ್ಯ ಭೂಷಣ, ವಸ್ತ್ರಗಳಂ ತೆಗದು ವಿಷ್ವಕ್ಸೇನರಲ್ಲಿ ಸಮರ್ಪಿಸಿ, ಸುಖಶಯನಾರ್ಹವಾದ ವಸ್ತ್ರಾಭರಣಾದಿಗಳಂ ಸಮರ್ಪಿಸಿ, ಆಚಮನ, ಗಂಧ, ಪುಷ್ಪ, ಧೂಪ ದೀಪ, ತಾಂಬೂಲಾದಿಗಳಿಂದ ಪೂಜಿಸಿ.

ಶ್ರಿಯಃಕಾಂತಾಯಕಲ್ಯಾಣನಿಧಯೇನಿಧಯೇರ್ಥಿನಾಂ। ಶ್ರೀಮತೇ
ವೇಂಕಟೇಶಾಯಶ್ರೀನಿವಾಸಾಯಮಂಗಳಂ॥

ಮಂಗಳಾಶಾಸನಪರೈರ್ಮದಾಚಾರ್ಯಪುರೋಗಮೈಃ। ಸರ್ವೈಶ್ಚ
ಪೂರ್ವೈರಾಚಾರ್ಯೈಃಸತ್ಕೃತಾಯಾಸ್ತುಮಂಗಳಂ॥

ಎಂದು ಘಂಟಾನಾದ, ನೃತ್ಯ ಗೀತ ವಾದ್ಯಾದಿಗಳೊಡನೆ ನೀರಾಜನ (ಮಂಗಳಾರತಿ) ಮಂ ಸಮರ್ಪಿಸಿ.

ಉಪನಿಷತ್ಸಮಾಪನ ಮಂತ್ರಗಳಿಂದಲೂ, ದ್ರವಿಡೋಪನಿಷತ್ಸಮಾಪನ ಮಂತ್ರಗಳಿಂದಲೂ (ಶಾತ್ತುಮುರೈ) ಶ್ರುತಿ (ಶ್ರವಣ) ಸುಖಸ್ತೋತ್ರಗಳಿಂದಲೂ ಸ್ತೋತ್ರಮಾಡಿ.

ದೇವಸ್ವಾಮಿನ್ಜಗನ್ನಾಥ, ಶ್ರಿಯಾಭೂಮ್ಯಾಚನೀಳಯಾ । ಜಗದ್ರ
ಕ್ಷಣಜಾಗರ್ಯಾಂಯೋಗನಿದ್ರಾಮುಪಾಕುರು ॥ ಇತಿಪ್ರಾರ್ಥ್ಯ॥

ತಾತ್ಪರ್ಯ॥ ಜಗನ್ನಾಯಕ, ದೇವನಾಯಕ, ಶ್ರೀ, ಭೂ, ನೀಳೆ, ಗಳೊಡನೆ, ಜಗದ್ರಕ್ಷಣೋಚಿತವಾಗಿ ಯೋಗನಿದ್ರಾಸಕ್ತನಾಗು, ಎಂದು ಪ್ರಾರ್ಥಿಸಿ,

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರ
ಸೇನಾನೇನಾತ್ಮನಾಸ್ವಕೀಯೈಶ್ಚದೇಹೇಂದ್ರಿಯಾಂತಃಕರಣೈಃ
ಸ್ವಕೀಯಕಲ್ಯಾಣತಮದ್ರವ್ಯಮಯಾನೌಪಚಾರಿಕಸಾಂಸ್ಪ
ರ್ಶಿಕಾಭ್ಯವಹಾರಿಕಾದಿಸಮಸ್ತಭೋಗಾನತಿಪ್ರಭೂತಾನತಿಪ್ರಿ
ಯತಮಾನತಿಸಮಗ್ರಾನತ್ಯಂತಭಕ್ತಿಕೃತಾನಖಿಲಪರಿಜನಪರಿ

---

ಆರಾಧನಾಂತದಲ್ಲಿ ಈ ಮಂತ್ರಗಳೂ, ನಿತ್ಯಾನುಸಂಧಾನ ಲೇಖನಾಂತದಲ್ಲಿ ದ್ರವಿಡೋಪನಿಷತ್ಸಮಾಪನ ಮಂತ್ರಾದಿಗಳೂ ಬರೆಯಲ್ಪಡುವುವು.

ಚ್ಛದಾನ್ವಿತಾಯಸ್ಯಸ್ಮೈ ಸ್ವಪ್ರೀತಯೇಸ್ವಯಮೇವಪ್ರತಿಪಾ
ದಿತವಾನ್, ಇತ್ಯನುಸಂಧಾಯ ॥

ವಿಷ್ವಕ್ಸೇನಾರಾಧನಕ್ಕೆ ಭಗವಂತನಿಂದ (ವಿಷ್ವಕ್ಸೇನಾರಾಧನಾಯ ಭಗವನ್ನಮನುಜಾನೀಹಿ) ಅನುಜ್ಞೆಯಂಹೊಂದಿ, ಭಗವತ್ಪೂಜಾವಶಿಷ್ಟೋಪಕಗಳಿಂದ ಪೂಜಿಸಿ, ಪೂರ್ವದಲ್ಲಿ ಭಾಗಿಸಿಟ್ಟಿರುವ ಹವಿಸ್ಸನ್ನ ನಿವೇದನಮಾಡಿ, ಆ ಅನ್ನವನ್ನ ಅವರ ಪರಿವಾರಗಳಿಗೆ ನಿವೇದನಮಾಡಿ ಜಲದಲ್ಲಿ ಹಾಕುವದು, ವಿಷ್ವಕ್ಸೇನಾನುಚರನಾಗಿ ತಾನಾದರೂ ಭೋಜನ ಮಾಡಬಹುದು.

ಅನಂತರ ಭಗವಂತನಿಗೆ ಅಷ್ಟಾಂಗ ಪ್ರಣಾಮವಂಮಾಡಿ.

ಇಜ್ಯಾಮಧ್ಯ ಸಂಭಾವಿತಬುದ್ಧಿ ಪೂರ್ವಾಪಚಾರಕ್ಷಮಾಪಣೆಯನ್ನ,

(ಉಪಚಾರಾಪದೇಶನಕೃತಾನಹರಹರ್ಮಯಾ । ಅಪಚಾರಾನಿ
ಮಾನ್ಸರ್ವಾನ್ ಕ್ಷಮಸ್ವಪುರುಷೋತ್ತಮ॥) ಪ್ರಾರ್ಥಿಸುವದು.

ಅನಂತರ ವಿಷ್ವಕ್ಸೇನಾದಿಗಳನ್ನ ಕುರಿತು.

ಸಾವಧಾನಾಶ್ಚತಿಷ್ಠಂತುನಿಕ್ಷಿಪಾಮಿಭವತ್ಸ್ವಹಂ । ಮಮನಾಥಂ
ಮಮಗುರುಂಪಿತರಂಮಾತರಂಚಮೇ ॥ ಹರಿಂಶ್ರಿಯಂಭುವಂ
ಚಾಪಿತಾನ್ಪಾಲಯತಸರ್ವತಃ ॥

ಯಥಾನಿಕ್ಷಿಪ್ತರೂಪಂಮೇಸಂದರ್ಶಯತಸರ್ವದಾ । ಭವತಶ್ಚರಣಂ
ಲಬ್ಧ್ವಾವ್ರಜಾಮಿಗತಸಾಧ್ವಸಃ ॥

ತಾತ್ಪರ್ಯ। ವಿಷ್ವಕ್ಸೇನಾದಿಗಳಿರಾ, ನಿಮ್ಮಲ್ಲಿ, ನಾರಾಯಣನನ್ನೂ, ಶ್ರೀ ಭೂದೇವಿಗಳನ್ನೂ ನಿಕ್ಷೇಪವಾಗಿ ಸಮರ್ಪಿಸಿ ನಿಮ್ಮನ್ನ ಶರಣ ಹೊಂದಿ ನಿರ್ಭಯನಾಗಿ ಹೊರಟು ಹೋಗುವೆನು. ನೀವುಗಳು ಸಾವಧಾನರಾಗಿ ರಕ್ಷಿಸಿರಿ, ಪುನಃ ಆರಾಧನ ಕಾಲಕ್ಕೆ ಭಗವತ್ಸಂದರ್ಶನ ಮಾಡಿಸಿ, ಎಂದು ಪ್ರಾರ್ಥಿಸುವದು.

ಅನಂತರ, ಸರ್ವದೇಶದಶಾಕಾಲೇಷ್ವವ್ಯಾಹತಪರಾಕ್ರಮಾ। ರಾಮಾ
ನುಜಾರ್ಯದಿವ್ಯಾಜ್ಞಾವರ್ಧತಾಮಭಿವರ್ಧತಾಂ ॥ ರಾಮಾ

ನುಜಾರ್ಯದಿವ್ಯಾಜ್ಞಾಪ್ರತಿವಾಸರಮುಜ್ವಲಾ ॥ ದಿಗಂತವ್ಯಾಪಿನೀಭೂಯಾತ್ಸಾಲೋಕಹಿತೈಷಿಣೀ । ಶ್ರೀಮಞ್ಛ್ರೀರಂಗಶ್ರಿಯಮನುಪದ್ರವಾಮನುದಿನಂಸಂವರ್ಧಯ ॥ ನಮೋರಾಮಾನುಜಾರ್ಯಾಯವೇದಾಂತಾರ್ಥಪ್ರದಾಯಿನೇ । ಆತ್ರೇಯಪದ್ಮನಾಭಾರ್ಯಸುತಾಯಗುಣಶಾಲಿನೇ ॥ ರಾಮಾನುಜದಯಾಪಾತ್ರಂಜ್ಞಾನವೈರಾಗ್ಯಭೂಷಣಂ । ಶ್ರೀಮದ್ವೇಂಕಟನಾಥಾರ್ಯಂವಂದೇವೇದಾಂತದೇಶಿಕಂ । ಆಚಮ್ಯ, ತೀರ್ಥಾದಿಕಂಸ್ವೀಕುರ್ಯಾತ್, ಗಂಧಾದಿಕಂಬಿಭೃಯಾತ್ ॥ ಇತಿಇಜ್ಯಾ.

## ಪುರುಷಸೂಕ್ತಭಾಷ್ಯಂ.

ಮುರರಿಪುಚರಣಸರೋರುಹಮಭಿವಂದ್ಯಯತೀಶ್ವರಾಂಘ್ರಿಪದ್ಮಂಚ ॥ ಪುಂಸೂಕ್ತಾರ್ಥಾಬಹುಶಃಪೂರ್ವೈರುಕ್ತಾನ್ಬ್ರವೀಮಿಸಂಕ್ಷೇಪಾತ್ ॥

ಅವತರಣಿಕಾ॥ ದಾಟಲಸಾಧ್ಯವಾದ ಸಂಸಾರ ಸಮುದ್ರದಲ್ಲಿ ಮುಳಿಗಿ ತಾಪತ್ರಯ ಸಂತಪ್ತರಾದ, ಸುರ, ನರ, ತಿರ್ಯಕ್, ಸ್ಥಾವರಾದಿ ಭೇದದಿಂದ ಕೂಡಿರುವ ಸಕಲ ಪ್ರಾಣಿಗಳನ್ನೂ ಉದ್ಧರಿಸಲಪೇಕ್ಷೆಯುಳ್ಳವರಾಗಿ, ದಿವ್ಯ ದಂಪತಿ (ಶ್ರೀ, ಶ್ರೀವಲ್ಲಭರು) ಗಳು ಪರಮ ಕೃಪೆಯಿಂದ, ಅತಿ ಮಹತ್ತರವಾದ ವೇದಸಾಗರವಂ ಮಥನಮಾಡಿ, ಸಕಲ ವೇದ ಸಾರಭೂತ ಸೂಕ್ತ ದ್ವಯವೆಂಬ ತೆಪ್ಪವನ್ನ ಸಂಪಾದಿಸಿದರು.

ತದುಕ್ತಂಲಕ್ಷ್ಮೀತಂತ್ರೇ ॥ — ಕದಾಚಿತ್ಕೃಪಯಾವಿಷ್ಟೌಜೀವಾನಾಂಹಿತಕಾಮ್ಯಯಾ ॥ ಸುಪಿನಸ್ತ್ವರಿಮೇಜೀವಾಃಪ್ರಾಪ್ನುಯುರ್ನಾಕಥಂತ್ವಿತಿ । ಉಪಾಯಾನ್ವೇಷಣೇಯತ್ತೌಪರಮೇಣಸಮಾಧಿನಾ ॥ ಮಥ್ನಾವಸ್ವತಿಗಂಭೀರಂಶಬ್ದಬ್ರಹ್ಮಮಹೋದಧಿಂ । ಮಥ್ಯಮಾನಾತ್ತತಸ್ತಸ್ಮಾತ್ಸಾಮರ್ಗ್ಯಜುಷಸಂಕುಲಾತ್। ತತ್ಸೂಕ್ತಮಿಥುನಂ ದಿವ್ಯಂಪಥ್ಯೋಸ್ಮ್ರತಮಿವೋತ್ಥಿತಂ ॥

ತಾತ್ಪರ್ಯ॥ ಜಗತ್ಪತಿಗಳಾದ ಲಕ್ಷ್ಮೀನಾರಾಯಣರುಗಳು ಕೃಪಾಯು
ಕ್ತರಾದ ಕಾರಣ, ಒಂದಾನೊಂದು ಕಾಲದೋಳ್. ಸಂಸಾರ ಸಾಗರಾಂತ
ರ್ಗತರಾಗಿ ಸಂತಪಿಸುತ್ತಲಿರುವ ಜೀವರುಗಳನ್ನ ನೋಡಿ, ಈ ಜೀವರು
ಗಳು ನಮ್ಮನ್ನ ಹೊಂದಿ ಹೇಗೆ ಸುಖಿಗಳಾಗುವರು. ಇವರು ಸುಖಿಗಳಾ
ಗುವಂತೆ ಮಾಡಲು ಉಪಾಯವೇನು, ಎಂದು ಆಲೋಚಿಸಿ ಅತಿಮಹತ್ತ
ರವಾದ ವೇದರಾಶಿಯನ್ನ ಮಥನ ಮಾಡಿದರು.

ಅನಂತರ ಋಗ್ಯಜುಸ್ಸಾಮಸಂಕುಲವಾದ ವೇದರಾಶಿಯುದ್ದೆಸೆಯಿಂದ,
ಮೊಸರಿನಿಂದ, ಸಾರಭೂತವಾದ ಘೃತವು ಉತ್ಪತ್ತಿಯಾಗುವಂತೆ ವೇದ
ಸಾರಭೂತವಾದ ಸೂಕ್ತದ್ವಯವು ಉತ್ಪನ್ನವಾಯಿತು.

ಅವರೊಳ್ ಪ್ರಾಥಮಿಕವಾದ ಈ ಪುರುಷಸೂಕ್ತವು. ಋಗ್ವೇದದಲ್ಲಿ
ಅಷ್ಟಮಾಷ್ಟಕದಲ್ಲಿ, ಚತುರ್ಥಾಧ್ಯಾಯದೊಳ್ (೧೭) ವರ್ಗದಲ್ಲಿ
(೧೬) ಋಕ್ಕುಗಳಿಂದಲೂ, ಯಜುರ್ವೇದದಲ್ಲಿ ತೈತ್ತರೀಯಕದಲ್ಲಿ (೧೮)
ಋಕ್ಕುಗಳಿಂದಲೂ, ವಾಜಸನೇಯಕದಲ್ಲಿ (೧೬) ಋಕ್ಕುಗಳಿಂದಲೂ,
ಸಾಮಾಥರ್ವಣ ವೇದಗಳಲ್ಲಿ ಕಿಂಚಿನ್ನ್ಯೂನಾಧಿಕವಾಗಿಯೂ ಪಠಿತವಾ
ಗಿರುವುದು.

ಹೀಗೆ ಸಕಲ ವೇದಗಳಲ್ಲಿಯೂ ತತ್ವನಿರ್ಣಯಕ್ಕಾಗಿ ಪಠಿತವಾಗಿರುವ
ದ್ದರಿಂದ ಸರ್ವೋತ್ತಮವಾಗಿರುವದು.

ಆದ್ದರಿಂದಲೇ॥ ಇದಂಪುರುಷಸೂಕ್ತಂಹಿಸರ್ವವೇದೇಷುಪಠ್ಯತೇ॥
ವೇದೇಷುಪೌರುಷಂಸೂಕ್ತಂ, ಪೌರುಷಂಸೂಕ್ತಮಾವರ್ತ್ಯ
ಮುಚ್ಯತೇಸರ್ವಕಿಲ್ಬಿಷಾತ್॥

ಇತ್ಯಾದಿ, ವ್ಯಾಸ, ಶಾಸ್ತ್ರ, ಯಮ ಸ್ಮೃತ್ಯಾದಿ ವಾಕ್ಯ ಪ್ರತಿಪಾದಿತ
ಮಹಾತ್ಮ್ಯವುಳ್ಳ ಪುರುಷಸೂಕ್ತವು ಸರ್ವರಿಂದಲೂ ಅತ್ಯವಶ್ಯಕವಾಗಿ
ತಿಳಿಯಲ್ಪಡತಕ್ಕದ್ದು.

ಸಕಲವೇದಸಾರವಾಗಿ ಮೋಕ್ಷಸಾಧನ ಭೂತವಾದ ಈ ಪುರುಷಸೂ
ಕ್ತವು ಪಾಠಭೇದದಿಂದ ಸರ್ವವೇದಗಳಲ್ಲಿಯೂ ಪಠಿತವಾಗಿದ್ದಾಗ್ಯೂ ತೈ
ತ್ತಿರೀಯ ಪಾಠಾನುಸಾರ ವಿವರಿಸಲ್ಪಡುವದು.

## ಪ್ರಥಮಾಖಿಕ್.

ಸಹಸ್ರಶೀರ್ಷಾ ಪುರುಷಃ । ಸಹಸ್ರಾಕ್ಷಸ್ಸಹಸ್ರಪಾತ್ ॥ ಸಭೂಮಿಂ
ವಿಶ್ವತೋವೃತ್ವಾ । ಅತ್ಯತಿಷ್ಠದ್ದಶಾಂಗುಲಂ ॥

ಅರ್ಥ॥ ಸಹಸ್ರ ಶಿರಸ್ಸುಗಳಿಂದಲೂ, ಸಹಸ್ರನೇತ್ರಗಳಿಂದಲೂ ಸಹಸ್ರಪಾದಗಳಿಂದಲೂ (ಇದು ಹಸ್ತಾದಿಗಳಿಗೂ ಉಪಲಕ್ಷಣವು) ಕೂಡಿರುವ ಪರಮಪುರುಷನಾದ ನಾರಾಯಣನು ಚೇತನಾಚೇತನ ಸಮೂಹವನ್ನು ಅಂತರ್ಬಹಿಃ ವ್ಯಾಪಿಸಿಕೊಂಡು ಅಸಂಖ್ಯಾತ ಯೋಜನವನ್ನತಿಕ್ರಮಿಸಿ ಇರುವನು. ಅಪರಿಚ್ಛಿನ್ನನಾಗಿರುವನೆಂದು ಭಾವ.

ಗೀತಾಯಾಂ॥ ಸಹಸ್ರಬಾಹೂದರವಕ್ತ್ರನೇತ್ರಂ, ಸರ್ವತಃಪಾ
ಣಿಪಾದಂತತ್, ಸರ್ವತೋಕ್ಷಿಶಿರೋಮುಖಂ॥

ಶ್ರು॥ ವಿಶ್ವತಶ್ಚಕ್ಷುರುತವಿಶ್ವತೋಮುಖೋವಿಶ್ವತೋಹಸ್ತಉತ
ವಿಶ್ವತಸ್ಪಾತ್॥

ತಾತ್ಪರ್ಯ॥ ಇತ್ಯಾದಿ, ಗೀತಾ, ಶ್ರುತ್ಯಾದಿ ಪ್ರಮಾಣಾನುಸಾರ, ಸಹಸ್ರಶಿರೋ, ನೇತ್ರ, ಪಾಣಿ, ಪಾದಾದಿಗಳುಳ್ಳವನಾಗಿಯೂ.

ಸರ್ವಲೋಕಪತಿಸ್ಸಾಕ್ಷಾತ್ಪುರುಷಃ ಪ್ರೋಚ್ಯತೇಹರಿಃ ।
ತಂವಿನಾಪುಂಡರೀಕಾಕ್ಷಂಕೋನ್ಯಃಪುರುಷಶಬ್ದಭಾಕ್ ॥
ಭಗವಾನಿತಿಯಶ್ಶಬ್ದಸ್ತಥಾಪುರುಷಇತ್ಯಪಿ ।
ನಿರುಪಾಧೀಚವರ್ತೇತೇವಾಸುದೇವೇಸನಾತನೇ ॥

ಸಹಸ್ರಶೀರ್ಷಂದೇವಂವಿಶ್ವಾಕ್ಷಂವಿಶ್ವಶಂಭುವಂ।
ವಿಶ್ವಂನಾರಾಯಣಂಜ್ಞೇಯಮಕ್ಷರಂಪರಮಂಪ್ರಭುಂ ॥

---

೧ ಸರ್ವಲೋಕನಾಯಕನಾದ ಹರಿಯೇ ಪುರುಷನೆನಿಸಿಕೊಳ್ಳುವನು. ಕಮಲಾಕ್ಷನಾದ ಹರಿಯನ್ನು ವಿನಾ ಯಾರೂ ಪುರುಷಶಬ್ದವಾಚ್ಯರಾಗಲಾರರು. ಭಗವಾನ್ ಎಂಬ ಶಬ್ದವೂ, ಪುರುಷಃ ಎಂಬ ಶಬ್ದವೂ, ವಾಸುದೇವನಲ್ಲಿ ನಿರುಪಾಧಿಕವಾಗಿ ಅನ್ವಯಿಸುವದು.

೨ ಉತ್ತರನಾರಾಯಣದಲ್ಲಿ, ನಾರಾಯಣನಲ್ಲಿ ಪ್ರತಿಪಾದಿತವಾಗಿರುವ ಸಹಸ್ರಶೀರ್ಷತ್ವಾದಿಗಳು ಇಲ್ಲಿ ಹೇಳಲ್ಪಟ್ಟಿರುವ ಪ್ರಯುಕ್ತ ನಾರಾಯಣನೇ ಪುರುಷಶಬ್ದವಾಚ್ಯನೆಂದು ಭಾವ.

ಇತ್ಯಾದಿ ಪ್ರಮಾಣಾನುಸಾರ, ಸಹಸ್ರ ಶಿರಸ್ಸಿನಿಂದಲೂ ಸಹಸ್ರ ನೇತ್ರಾದಿಗಳಿಂದಲೂ ಕೂಡಿರುವ ಪುರುಷ ಶಬ್ದವಾಚ್ಯನಾದ ನಾರಾಯಣನು, ಃಭವತೀತಿಭೂಮಿಃ" ಎಂಬ ವ್ಯುತ್ಪತ್ತ್ಯನುಸಾರ, ಭೂಮಿ ಶಬ್ದವಾಚ್ಯವಾದ ಸಕಲ ಚೇತನಾಚೇತನ ಸಮೂಹವನ್ನೂ.

ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಥಿತಃ ॥

ಎಂಬಂತೆ ಅಂತರ್ಯಾಮ್ಯಾದಿ ರೂಪದಿಂದ ವ್ಯಾಪಿಸಿಕೊಂಡು.

ಶ್ರುತಾಸ್ತ್ರೇ ॥ ಅನಂತಯೋಜನಂಪ್ರಾಹುರ್ದಶಾಂಗುಲವಚಸ್ತ್ವದಂ॥ ಎಂಬ ಪ್ರಮಾಣಾನುಸಾರ ಅನಂತಯೋಜನವನ್ನತಿಕ್ರಮಿಸಿರುವನು, ಇದರಿಂದ ವ್ಯಾಪ್ಯಾಪೇಕ್ಷಯಾವ್ಯಾಪಕಕ್ಕೆ ಅಪರಿಚ್ಛಿನ್ನತ್ವವು ಹೇಳಲ್ಪಟ್ಟಿತು.

ಅನ್ವೈತು॥ ಭೂಮಿಂ-ಭೂವ್ಯಧಿಷ್ಠಾನವಾದ ದೇಹಾಧೋಭಾಗವನ್ನ, ಸಃ-ಜ್ಞಾನಶಕ್ತ್ಯಾದಿ ಪೂರ್ಣನಾದ ಪರಮಪುರುಷನು, ವಿಶ್ವತೋವೃತ್ವಾ, ಸರ್ವತ್ರವ್ಯಾಪಿಸಿಕೊಂಡು, ದಶಾಂಗುಲಂ-ನಾಭಿಯ ಮೇಲ್ಭಾಗದಲ್ಲಿ ದಶಾಂಗುಲ (೧೦) ಪರಿಮಿತಪ್ರದೇಶವನ್ನ, ಅತ್ಯತಿಷ್ಠತ್-ಅತಿಕ್ರಮಿಸಿ ಹೃದಯಮಂಡಲದಲ್ಲಿ ಇರುವನು, ಎಂದು ಹೇಳುವರು.

## ದ್ವಿತೀಯಾಮೃಕ್.

ಪುರುಷಏವೇದಂಸರ್ವಂ । ಯದ್ಭೂತಂಯಚ್ಚಭವ್ಯಂ । ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥

ಅರ್ಥ॥ ಇದಂ, ಪ್ರತ್ಯಕ್ಷವಾಗಿರುವ (ವರ್ತಮಾನಕಾಲಿಕವಾಗಿಯೂ) ಯದ್ಭೂತಂ, ಯಚ್ಚಭವ್ಯಂ-ಭೂತ (ಹಿಂದೆ ಇದ್ದದ್ದು) ಕಾಲಿಕವಾಗಿಯೂ, ಭವಿಷ್ಯ (ಮುಂದಾಗುವದು) ತ್ಕಾಲಿಕವಾಗಿಯೂ ಇರುವ ಸರ್ವಂ-ಸಕಲ ಚೇತನಾಚೇತನಾತ್ಮಕವಾದ ಪದಾರ್ಥ ಸಮೂಹವು, ಪುರುಷಏವ-ಪುರುಷಶಬ್ದವಾಚ್ಯ ನಾರಾಯಣಾಭಿನ್ನವಾದುದು. (ಪರಬ್ರಹ್ಮವು ಸರ್ವ ಶರೀರಕನೆಂದು ಭಾವವು) ಈ ಅರ್ಥವು ಸಾಮಾನಾಧಿಕರಣ್ಯ (ಸಮಾನವಿಭಕ್ತಿಯಿಂದ ಹೇಳಿರುವಿಕೆ) ದಿಂದ ಲಬ್ಧವಾದುದು.

ಶ್ರೀರಾಮಾಯಣೇ॥ ಜಗತ್ಸರ್ವಂಶರೀರಂತೇ.

| | |
|---|---|
| ವಾಜಸನೇಯಕೇ ಮಾಧ್ಯಂದಿನಶಾಖಾಯಾಂಬೃಹದಾರಣ್ಯಕೇ ॥ | ಯಃಪೃಥಿವ್ಯಾಂತಿಷ್ಠನ್ಪೃಥಿವ್ಯಾಅಂತರೋ ಯಂಪೃಥಿವೀನವೇದಯಸ್ಯಪೃಥಿವೀಶರೀರಂ ಯಃಪೃಥಿವೀಮಂತರೋಯಮಯತಿಸತ ಆತ್ಮಾಂತರ್ಯಾಮ್ಯಮೃತಃ ॥ |

ಶ್ರು॥ ಯಆತ್ಮನಿತಿಷ್ಠನ್ನಾತ್ಮನೋಂತರೋಯಮಾತ್ಮಾನವೇದ ಯಸ್ಯಾತ್ಮಾಶರೀರಂಯಆತ್ಮಾನಮಂತರೋಯಮಯತಿಸತ ಆತ್ಮಾಂತರ್ಯಾಮ್ಯಮೃತಃ॥

ಇತ್ಯಾದಿ ಪ್ರಮಾಣಗಳಿಂದ ಚೇತನಾಚೇತನಾತ್ಮಕವಾದ ಪದಾರ್ಥಗಳಿಗೆ ಶರೀರತ್ವವೂ, ಪರಮಾತ್ಮನಿಗೆ ಶರೀರಿತ್ವ (ಆತ್ಮತ್ವ) ವೂ ಹೇಳಲ್ಪಟ್ಟಿರುವದರಿಂದ, ವರ್ತಮಾನ, ಭೂತ ಭವಿಷ್ಯತ್ಕಾಲೀನಗಳಾದ ಸಕಲ ಪದಾರ್ಥ ಶರೀರಕನಾದ ಬ್ರಹ್ಮನೇ ಪುರುಷಶಬ್ದವಾಚ್ಯ ನಾರಾಯಣಾಭಿನ್ನನು ಎಂದು ಈ ಸೂಕ್ತವೂ ಹೇಳುವದು.

ಅಥವಾ ಪುರುಷಏವೇದಂಸರ್ವಂ-ಈ ಸಾಮಾನಾಧಿಕರಣ್ಯವು ಗ್ರಾಮೋಯಂದೇವದತ್ತಃ-ಇತ್ಯಾದಿಗಳಲ್ಲಿಯಂತೆ ನಿಯಾಮ್ಯನಿಯಾಮಕ ಭಾವನಿಬಂಧನವಾಗಿರುವುದು. (ಪರಮಾತ್ಮನು ನಿಯಾಮಕನು ಸಕಲ ಪದಾರ್ಥವು ನಿಯಾಮ್ಯವು ಎಂದು ಭಾವ.)

---

೧ ಶ್ರೀರಾಮಚಂದ್ರನನ್ನ ಕುರಿತು ಬ್ರಹ್ಮಾದಿಗಳ ವಾಕ್ಯವು, ಸಕಲ ಜಗತ್ತೂ ನಿನಗೆ ಶರೀರವು. ನೀನು ಶರೀರಿ (ಆತ್ಮ) ಯು.

೨ ಯಾವ ಪರಮಾತ್ಮನು ಭೂಮಿಯಲ್ಲಿ ಇದ್ದುಕೊಂಡೂ ಭೂಮಿಗೆ ಬೇರೆಯಾದವನೋ, ಯಾವವನನ್ನ ಭೂಮಿಯು ತಿಳಿದಿಲ್ಲವೋ ಯಾವವನಿಗೆ ಭೂಮಿಯು ಶರೀರವೋ ಯಾವವನು ಭೂಮಿಯನ್ನ ಅಂತಃಪ್ರವೇಶಿಸಿ ನಿಯಮಿಸುವನೋ ಆ ಪರಮಾತ್ಮನೇ ನಿರುಪಾಧಿಕಾಮೃತತ್ವಶಾಲಿಯಾದ ನಿನ್ನ ಅಂತರಾತ್ಮನು, ಇಲ್ಲಿ ಸತಆತ್ಮಾಂತರ್ಯಾಮ್ಯಮೃತಃ, ಎಂಬುವದರಿಂದ ಜೀವಾತ್ಮಾಪೇಕ್ಷೆಯೂ ಪರಮಾತ್ಮನಿಗೆ ವ್ಯತಿರೇಕವು ಸಿದ್ಧವಾಗಿರುವದು ಇದರಿಂದ ಅಚೇತನ ಶರೀರಕತ್ವವು ಹೇಳಲ್ಪಟ್ಟಿತು. ಯಆತ್ಮನಿ ಎಂಬ ವಾಕ್ಯದಿಂದ ಚೇತನಶರೀರಕತ್ವವು ಹೇಳಲ್ಪಟ್ಟಿತು ಇವಕ್ಕೂ ಅವರಂತೆಯೇ ಅರ್ಥವನ್ನ ತಿಳಿಯತಕ್ಕದ್ದು.

ತಥಾಚಗೀತಾಯಾಂ॥ ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನತಿಷ್ಠತಿ । ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥

ಅರ್ಥ॥ ಸರ್ವನಿಯಮನಶೀಲನಾದ ವಾಸುದೇವನು ಸರ್ವಪ್ರಾಣಿಗಳ ಜ್ಞಾನೋದಯ ಪ್ರದೇಶ (ಹೃದ್ದೇಶ) ದಲ್ಲಿ ಇರುವನಾಗಿ, ತನ್ನಿಂದಲೇ ನಿರ್ಮಿತವಾದ ದೇಹೇಂದ್ರಿಯಾವಸ್ಥೆಯಂ ಹೊಂದಿರುವ ಪ್ರಕೃತಿ ಎಂಬ ಯಂತ್ರವನ್ನು ಆಶ್ರಯಿಸಿರುವ ಸರ್ವಪ್ರಾಣಿಗಳನ್ನು ಸತ್ವಾದಿಗುಣರೂಪವಾದ ಮಾಯೆಯಿಂದ ಗುಣಾನುರೂಪವಾಗಿ ವರ್ತಿಸುವಂತೆ ಮಾಡುವನು.

ಗೀತಾ॥ ಇಲ್ಲಿ, ಸರ್ವಸ್ಯಚಾಹಂಹೃದಿಸನ್ನಿವಿಷ್ಟಃ ಮತ್ತಸ್ಸ್ಮೃತಿಃ ಜ್ಞಾನಮಪೋಹನಂಚ । ಮತ್ತಸ್ಸರ್ವಂಪ್ರವರ್ತತೇ ॥

ಶ್ರುತಿಃ ॥ ಯಆತ್ಮನಿತಿಷ್ಠನ್ ॥

ಇತ್ಯಾದಿ ಪ್ರಮಾಣಗಳನ್ನು ತಿಳಿಯುವುದು. ಇದರಿಂದ ಪರಮಪುರುಷನೇ ಸಕಲ ಜಗನ್ನಿಯಾಮಕನು ಎಂದು ಹೇಳಲ್ಪಟ್ಟಿತು.

ಅಥವಾ, ಪಾನೀಯಂಪ್ರಾಣಿನಾಂಪ್ರಾಣಾಃ ॥

(ಉದಕವೇ ಪ್ರಾಣಿಗಳಿಗೆ ಪ್ರಾಣಗಳು) ಇತ್ಯಾದಿಗಳಲ್ಲಿ ಸಾಮಾನಾಧಿಕರಣ್ಯವು ಹೇಗೆ ಕಾರ್ಯಕಾರಣಭಾವ ನಿಬಂಧನವುಳ್ಳದ್ದಾಗಿರುವುದೋ ಹಾಗೆ.

“ಪುರುಷಏವೇದಂಸರ್ವಂ”

ಎಂಬ ಸಾಮಾನಾಧಿಕರಣ್ಯವು ಕಾರ್ಯಕಾರಣರೂಪ ನಿಬಂಧನ (ಜಗತ್ಕಾರಣನು ಈಶ್ವರನು, ಜಗತ್ತು, ಕಾರ್ಯವು, ಪರಮಪುರುಷನು ಕಾರಣನು) ವುಳ್ಳದ್ದಾಗಿರುವುದು.

ತಥಾಛಾಂದೋಗ್ಯೇ॥ ಸರ್ವಂಖಲ್ವಿದಂಬ್ರಹ್ಮ ತಜ್ಜಲಾನಿತಿಶಾಂತ ಉಪಾಸೀತ ॥

---

೧ ಸಕಲ ಪದಾರ್ಥಗಳ (ಜಗತ್ತಿನ) ಉತ್ಪತ್ತಿ, ಸ್ಥಿತಿ, ನಾಶಗಳು [illegible] ಸಂಕಲ್ಪಮಾತ್ರದಿಂದ ನಡೆಯುವುದು.

ಜ್ಯೋತೀಂಷಿವಿಷ್ಣುರ್ಭುವನಾನಿವಿಷ್ಣುಃ ವನಾನಿವಿಷ್ಣುರ್ಗಿರಯೋ ದಿಶಶ್ಚ ॥

ಇತ್ಯಾದಿ ಪ್ರಮಾಣಗಳಿಂದ ಜಗತ್, ಬ್ರಹ್ಮವಾಚಿ ಶಬ್ದಗಳಿಗೆ ಕಾರ್ಯ ಕಾರಣಭಾವದಲ್ಲಿ ಸಾಮಾನಾಧಿಕರಣ್ಯವು ಹೇಳಲ್ಪಟ್ಟಿರುತ್ತಾಗಿ ಇಲ್ಲಿ ಯೂ ಕಾರ್ಯಕಾರಣಭಾವವನ್ನೇ ಹೇಳಬೇಕಾಗಿರುವುದು, ಎಂದು ಕೇವರು ಹೇಳುವರು.

ಮೂ॥ ಉತಾಮೃತತ್ವಸ್ಯೇಶಾನಃ । ಯದನ್ನೇನಾತಿರೋಹತಿ ॥

"ಉತ" ಮತ್ತೇನೆಂದರೆ,

ಅರ್ಥ॥ ಅಮೃತತ್ವಸ್ಯ, ನಿತ್ಯಮುಕ್ತರುಗಳಿಗೆ, ತಥಾಚ, ನಿಘಂಟುಃ। ಮೋಕ್ಷೇ, ನಿತ್ಯೇ, ಮೃತೇ, ದೇವೇ, ಕೀರ್ತಿತಂತ್ವಮೃತಂಬುಧೈಃ॥ ಇತಿ.

ಈಶಾನಃ ॥ ನಿಯಾಮಕನಾದವನು.

ಇಂತಹ (ಚತುರ್ಮುಖಾನಂದಾಪೇಕ್ಷಯಾ ಶತಗುಣಿತಾನಂದವುಳ್ಳವರಾದ ನಿತ್ಯರಿಗೂ, ಮುಕ್ತರುಗಳಿಗೂ ನಿಯಂತೃವಾದ) ಪರಮಾತ್ಮನಿಗೆ, ಅನ್ನೇನ-ಅನ್ನದಿಂ (ತಿನ್ನಲರ್ಹವಾದ ಪದಾರ್ಥದಿಂ) ದ, ಯತ್-ಯಾವ ಸಂಸಾರಿಮಂಡಲವು, ಅತಿರೋಹತಿ-ಅತಿ ವರ್ಧಿಸುವದೋ, (ದೇವತಿರ್ಯಕ್-ಮನುಷ್ಯ ಸ್ಥಾವರಾದಿ ರೂಪದಿಂದ ಪ್ರಾದುರ್ಭವಿಸುವದೋ, ತತ್ಕಿಯತ್ಇತಿಶೇಷಃ-ಅದು ಎಷ್ಟುಮಾತ್ರದ್ದು.

ತಾತ್ಪರ್ಯ। ಯಆತ್ಮನಿತಿಷ್ಠನ್-ಇತ್ಯಾದಿ ಪೂರ್ವೋದಾಹೃತಶ್ರುತ್ಯನುಸಾರವಾಗಿ ನಿತ್ಯಾತ್ಮರುಗಳಿಗೂ ಮುಕ್ತಾತ್ಮರುಗಳಿಗೂ (ಚತುರ್ಮುಖಾನಂದಕ್ಕಿಂತಲೂ ಉತ್ತರೋತ್ತರ ಶತಗುಣಿತಾನಂದವುಳ್ಳವರಾಗಿ ಅಮೃತ ಶಬ್ದವಾಚ್ಯರಾದ ನಿತ್ಯಮುಕ್ತರುಗಳಿಗೆ) ನಿಯಂತೃವಾದ ಪುರುಷನಿಗೆ, ಅನ್ನದಿಂದ ಕರ್ಮಫಲಾನುಗುಣವಾಗಿ ದೇವಾದಿರೂಪದಿಂದ ವರ್ಧಿಸುವ ಸಂಸಾರಿಮಂಡಲವು ಸ್ವಲ್ಪಮಾತ್ರವಾದುದು.

---

೧ ಸೂರ್ಯಾದಿ ತೇಜಸ್ಸುಗಳೂ, ಲೋಕಗಳೂ, ವನಗಳೂ, ಪರ್ವತಗಳೂ, ದಿಕ್ಕುಗಳೂ, ಸಕಲವೂ ವಿಷ್ಣುವೇ; (ಸಕಲ ಪದಾರ್ಥಗಳೂ ವಿಷ್ಣುವಿನಿಂದಲೇ ಉತ್ಪನ್ನವಾದವುಗಳು) ಇದರಿಂದ ಕಾರ್ಯಕಾರಣಭಾವವು ಹೇಳಲ್ಪಟ್ಟಿರುವದು.

ಅಥವಾ, ಯಾವ ಆತ್ಮಸಮೂಹವು ಅನ್ನದಿಂದಲೇ ಕರ್ಮಾರಾಧ್ಯ ವಸ್ತುಗಳನ್ನ ಅತಿಕ್ರಮಿಸಿ ವರ್ಧಿಸುವದೋ, ಅಂತಹ ಪ್ರಾಣಿಸಮೂಹಕ್ಕೆ ಮೋಕ್ಷಸಾಮ್ರಾಜ್ಯವಂ ಕೊಡುವನು.

ಅಥವಾ, ಯಾವ ಪರಮಪದವು, ಭೋಗ್ಯಪದಾರ್ಥದಿಂದ (ಪರಮಭೋಗ್ಯನಾದ ಪರಮಾತ್ಮನಿಂದ) ಕೂಡಿ ನಿತ್ಯಾಪೂರ್ವವಾದುದೋ ವಾದಿಯಲ್ಲಿ ಲೀಲಾವಿಭೂತಿಯನ್ನತಿಕ್ರಮಿಸಿ ಪ್ರಕಾಶಿಸುವದೋ ಅಂತಹ ಪರಮಪದಕ್ಕೆ ಈ ಸೂಕ್ತಪ್ರತಿಪಾದ್ಯನಾದ ಪರಮಪುರುಷನೇ ಸ್ವಾಮಿಯಾದವನು.

ಹೀಗೆ ಈ ಋಕ್ಕಿನಿಂದ ಪರಮಾತ್ಮನಿಗೆ ಉಭಯವಿಭೂತಿ (ಲೀಲಾವಿಭೂತಿ-ನಿತ್ಯವಿಭೂತಿ) ನಾಯಕತ್ವವು ಹೇಳಲ್ಪಟ್ಟಿತು.

## ತೃತೀಯಾಋಕ್.

ಏತಾವಾನಸ್ಯಮಹಿಮಾ । ಅತೋಜ್ಯಾಯಾಁಶ್ಚಪೂರುಷಃ । ಪಾದೋಽಸ್ಯವಿಶ್ವಾಭೂತಾನಿ । ತ್ರಿಪಾದಸ್ಯಾಮೃತಂದಿವಿ ॥

ಅವತರಣಿಕಾ ॥ ಸಹಸ್ರಶೀರ್ಷಾ ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಅರ್ಥವನ್ನ ಈ ಋಕ್ಕು ಅನುವಾದ ಮಾಡುವದು.

ಅರ್ಥ॥ ಅಸ್ಯ-ಈ ಪರಮಪುರುಷನ, ಮಹಿಮಾ-ವೈಭವವು, ಏತಾವಾನ್-ಇಷ್ಟು, (ಹೀಗೆ ಅಪರಿಚ್ಛಿನ್ನವಾಗಿರುವದು) ಅತಃ-ಅದುಕಾರಣದ್ದೆಸೆಯಿಂದ (ಅಪರಿಚ್ಛಿನ್ನ ಜ್ಞಾನಶಕ್ತ್ಯಾದಿ ಮತ್ತ ಸರ್ವಾಂತರ್ಯಾಮಿತ್ವ, ಉಭಯವಿಭೂತಿ ಮತ್ವರೂಪ ಹೇತುವಿನ ದೆಸೆಯಿಂದ) ಪುರುಷಃ-ನಾರಾಯಣನು, ಜ್ಯಾಯಾನ್-ಸರ್ವಸ್ಮಾತ್ಪರನು (ಶ್ರೇಷ್ಠನು).

ತಥಾಚಾಗಾಯಿ-ಗೀತಾಯಾಂ॥ { ದ್ವಾವಿಮೌಪುರುಷೌಲೋಕೇಕ್ಷರಶ್ಚಾಕ್ಷರಏವಚ। ಕ್ಷರಸ್ಸರ್ವಾಣಿಭೂತಾನಿಕೂಟಸ್ಥೋಽಕ್ಷರಉಚ್ಯತೇ॥ ಉತ್ತಮಃಪುರುಷಸ್ತ್ವನ್ಯಃಪರಮಾತ್ಮೇತ್ಯುದಾಹೃತಃ । ಯೋಲೋಕತ್ರಯಮಾವಿಶ್ಯಬಿಭರ್ತ್ಯವ್ಯಯಈಶ್ವರಃ ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿಚೋತ್ತಮಃ। ಅತೋಽಸ್ಮಿಲೋಕೇವೇದೇಚ ಪ್ರಥಿತಃಪುರುಷೋತ್ತಮಃ॥ ಇತಿ.

ಅವತರಣಿಕಾ॥ ಕುಂತೀಕುಮಾರನಾದ ಅರ್ಜುನನನ್ನು ಕುರಿತು ಶ್ರೀ ಕೃಷ್ಣಪರಮಾತ್ಮನು ಸಕಲವೇದಸಾರವಾದ ಅರ್ಥವನ್ನು ಹೇಳುತ್ತಾನೆ.

ತಾತ್ಪರ್ಯ॥ ಅಚಿತ್ಸಂಸೃಷ್ಟ (ಪ್ರಕೃತಿಯಿಂದ ಕೂಡಿರುವ) ಗಳಾದ ಬ್ರಹ್ಮಾದಿ ಸ್ತಂಬ (ಕ್ರಿಮಿವಿಶೇಷ) ಪರ್ಯಂತ ಜೀವರಾಶಿಗಳು. ಕ್ಷರಣ ಸ್ವಭಾವ (ಸ್ವರೂಪತೋ ವಿಕಾರವುಳ್ಳ) ಪ್ರಕೃತಿ ವಿಶಿಷ್ಟಗಳಾದ ಪ್ರಯುಕ್ತ ಕ್ಷರಶಬ್ದವಾಚ್ಯಗಳು.

ಅಚಿತ್ಸಂಸರ್ಗದಿಂ ಬಿಡಲ್ಪಟ್ಟು ಸ್ವಸ್ವರೂಪದಿಂದಿರುವ ಮುಕ್ತಾತ್ಮರುಗಳು ಕ್ಷರಣಸ್ವಭಾವಪ್ರಕೃತಿ ವಿಶಿಷ್ಟರಾಗದ ಪ್ರಯುಕ್ತ ಅಕ್ಷರಶಬ್ದ ವಾಚ್ಯರು.

ಈ ಮುಕ್ತಾತ್ಮರುಗಳೇ [೧]ಕೂಟಸ್ಥರೆಂದೂ ಹೇಳಲ್ಪಡುವರು. ಹೀಗೆ ಕ್ಷರಾಕ್ಷರ, ಶಬ್ದವಾಚ್ಯರಾದ ಬದ್ಧಮುಕ್ತರುಗಳೆಲ್ಲರೂ ಪುರುಷಶಬ್ದ ವಾಚ್ಯರು.

ಅಚಿತ್ಸಂಸರ್ಗ. ಅಚಿದ್ವಿಯೋಗರೂಪ ಏಕೋಪಾಧಿಯಿಂದ ಮೂಲದಲ್ಲಿ ಏಕತ್ವನಿರ್ದೇಶವೆಂದು ತಿಳಿಯಬೇಕು.

ಬದ್ಧ, ಮುಕ್ತ, ಪುರುಷರುಗಳಿಂದ ಅರ್ಥಾಂತರಭೂತನಾದ (ಬೇರೆಯಾದ) ಉತ್ತಮಪುರುಷನೇ, ಸರ್ವಶೃತಿಗಳಲ್ಲಿಯೂ ಪರಮಾತ್ಮನೆಂದು ಕೊಂಡಾಡಲ್ಪಡುವನು.

ಈ ಪರಮಪುರುಷನೇ, ಲೋಕತ್ರಯ (ಪ್ರಕೃತಿ, ಪ್ರಕೃತಿವಿಶಿಷ್ಟರಾದ ಬದ್ಧಾತ್ಮರು, ಪ್ರಕೃತಿ ವಿಯುಕ್ತ ಮುಕ್ತಾತ್ಮರು.) ವನ್ನೂ ಅಂತರಾತ್ಮನಾಗಿ ಭರಿಸುವನು.

ಪೂರ್ವೋಕ್ತ ಸ್ವಭಾವಗಳುಳ್ಳ, ಕ್ಷರಾಕ್ಷರ ಶಬ್ದವಾಚ್ಯರಾದ ಬದ್ಧಮುಕ್ತಾತ್ಮರುಗಳಿಗೆ ಶ್ರೇಷ್ಠನಾದ ಪ್ರಯುಕ್ತ, ವೇದಗಳಲ್ಲಿಯೂ, ವೇದಾರ್ಥಬೋಧಕವಾದ ಸ್ಮೃತಿಗಳಲ್ಲಿಯೂ ಪುರುಷೋತ್ತಮನೆಂದು ಪ್ರಸಿದ್ಧಿಯು.

---

೧ ಕೂಟ, ಸ್ವರ್ಣ ರಜತಾದಿಗಳನ್ನು, ಯಥೇಚ್ಛೆಯಾಗಿ ತಟ್ಟಿದಾಗ್ಯೂ ನಿಶ್ಚಲವಾಗಿರುವ ಲೋಹವಿಶೇಷ (ಅಡಿಗಲ್ಲು) ಕೂಟವತ್ತಿಷ್ಠತೀತಿ, ಕೂಟಸ್ಥಃ, ಎಂದು, ನಿರ್ವಿಕಾರರಾದವರು, ಎಂದು ಭಾವ.

ಅಥವಾ, ಅಸ್ಯ-ಈ ಪರಿದೃಶ್ಯಮಾನವಾದ ಪ್ರಪಂಚದ, ಮಹಿಮಾ-ವೈಭವವು, ಏತಾವಾನ್-ಪರಿಚ್ಛಿನ್ನವಾದುದು, ಅತಃ-ಈ ಪ್ರಪಂಚದ್ದೆಸೆಯಿಂದ, ಪುರುಷಃ-ನಾರಾಯಣನು, ಜ್ಯಾಯಾನ್-ಶ್ರೇಷ್ಠ (ಅಪರಿಚ್ಛಿನ್ನ) ನು

ತಥಾಚ ಹರಿವಂಶೇ { ಬ್ರಹ್ಮಾಂಡೇಭ್ಯೋಽತೀತೇಭ್ಯಶ್ಚ ಭೂತಜಾತೇಭ್ಯ ಏವ ಚ।
ಬ್ರಹ್ಮಾದಿದೇವಸಂಘೇಭ್ಯೋ ಜ್ಯಾಯಾನೇವ ಜನಾರ್ದನಃ ॥ ಇತಿ.

ತಾತ್ಪರ್ಯ॥ ಬ್ರಹ್ಮಾಂಡಾದಿಗಳಿಗಿಂತಲೂ ನಾರಾಯಣನು ಅಪರಿಚ್ಛಿನ್ನನು.

ಪಾದೋಽಸ್ಯ ವಿಶ್ವಾಭೂತಾನಿ । ತ್ರಿಪಾದಸ್ಯಾಮೃತಂದಿವಿ ॥

ಅವತರಣಿಕಾ॥ ಇದನ್ನೇ ವಿವರಿಸುವದು ಉತ್ತರಾರ್ಧವು.

ಅರ್ಥ॥ ವಿಶ್ವಾಭೂತಾನಿ-ಅಚಿತ್ಸಂಸೃಷ್ಟರಾದ ಸಕಲ ಜೀವರುಗಳೂ, ಅಸ್ಯ-ಈ ಪರಮಪುರುಷನ, ಪಾದಃ-ತುರೀಯಾಂಶ (ಕಸೀ ಒಂದುಭಾಗ) ವು, ದಿವಿ-ಪರಮ ಪದದಲ್ಲಿ, ಅಮೃತಂ-ಜರಾ, ಮರಣಾದಿ ರಹಿತವಾದ ನಿತ್ಯವಸ್ತುವು, ಅಸ್ಯ-ಈ ಪರಮಪುರುಷನ, ತ್ರಿಪಾತ್-ಪಾದತ್ರಯವು (೩ ಭಾಗವು.)

ತಾತ್ಪರ್ಯ॥ ಭೋಗ್ಯ, ಭೋಗೋಪಕರಣ, ಭೋಗಸ್ಥಾನ ರೂಪವಾದ ತ್ರಿವಿಧವಸ್ತುಗಳೂ, ಪರಮಪದ (ವೈಕುಂಠಲೋಕ) ದಲ್ಲಿರುವ ಪ್ರ... ಮುಕ್ತ,, ತ್ರಿಪಾತ್, ಎಂದು ವ್ಯಪದೇಶವು.

ಅಥವಾ, ಜಗದಂತರ್ಗತ (ವಾದ) ವಸ್ತ್ವಭಿಮಾನಿಗಳಾದ ಅಸ್ಮದ್ಭೂದೇವಾದಿಗಳೂ, ನಿತ್ಯರೂ, ಮುಕ್ತರೂ, ಪರಮಪದದಲ್ಲಿರುವ ಪ್ರಯುಕ್ತ... ವರುಗಳಿಗೆ ತ್ರಿಪಾತ್, ಎಂದು ವ್ಯಪದೇಶವು.

ಅಥವಾ, ಅಸ್ಯ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ಚತುರ್ವ್ಯೂಹಾತ್ಮಕನಾದ ಪರಮಪುರುಷನ, ಪಾದಃ-ತುರೀಯಭಾಗವು (ಅನಿರುದ್ಧನು) ವಿಶ್ವಾಭೂತಾನಿ-ಸರ್ವಭೂತಗಳು (ಸರ್ವ

೧ ಈ ಅರ್ಥಗಳನ್ನೆಲ್ಲವನ್ನೂ ಮುಮುಕ್ಷುಪಡಿಯ ಸಂಗ್ರಹದಲ್ಲಿ ವಿವರಿಸಿದೆ.

ಭೂತಾಭಿನ್ನನು) ಈ ಸಾಮಾನಾಧಿಕರಣ್ಯವು ಕಾರ್ಯಕಾರಣ ಭಾವನಿಬಂಧನವಾದುದು

ತಾತ್ಪರ್ಯ ॥ ಸರ್ವಪ್ರಾಣಿಗಳನ್ನೂ ಅನಿರುದ್ಧನೇ ಸೃಷ್ಟಿಸುವನಾದ ಪ್ರಯುಕ್ತ ಈ ಲೀಲಾವಿಭೂತಿಯಲ್ಲಿರುವ ಅನಿರುದ್ಧಮೂರ್ತಿಯನ್ನೇ ಪಾದಾಂಶವು ಎಂದು ಹೇಳುವದು

ಅಸ್ಯ-ಈ ಪರಮಪುರುಷನ, ತ್ರಿಪಾತ್-ವಾಸುದೇವ, ಸಂಕರ್ಷಣ-ಪ್ರದ್ಯುಮ್ನರೆಂಬ ಭಾಗತ್ರಯದಿಂ ಕೂಡಿರುವ, ಅಮೃತಂ-ಶಾಶ್ವತವಾದ ರೂಪವು, ದಿವಿ-ಪರಮಪದದಲ್ಲಿರುವದು.

## ಚತುರ್ಥೀರ್ಋಕ್.

ತ್ರಿಪಾದೂರ್ಧ್ವ ಉದೈತ್ಪುರುಷಃ । ಪಾದೋಸ್ಯೇಹಾಭವಾತ್ಪುನಃ ।
ತತೋವಿಷ್ವಙ್ವ್ಯಕ್ರಾಮತ್ । ಸಾಶನಾನಶನೇಅಭಿ ॥

ಅವತರಿಣಿಕಾ॥ ಹೀಗೆ (ಪೂರ್ವಋಕ್ಕುಗಳಲ್ಲಿ) ವಿಭೂತಿದ್ವಯಯೋಗವನ್ನೂ ಹೇಳಿ, ಅನಂತರ ಸಕಲ ಜಗತ್ಸೃಷ್ಟ್ಯತ್ವರೂಪವಾದ ವಿಶೇಷ ಗುಣಗಳನ್ನ ಹೇಳುವದಕ್ಕೋಸ್ಕರ ಹಿಂದೆ ಹೇಳಲ್ಪಟ್ಟ ಅರ್ಥವನ್ನ ಈ ಋಕ್ಕು ಅನುವಾದ ಮಾಡುವದು.

ಅರ್ಥ॥ ತ್ರಿಪಾತ್-ಅಪರಿಚ್ಛಿನ್ನ ಜ್ಞಾನಶಕ್ತ್ಯಾದಿಗಳಿಂದ ಕೂಡಿರುವ ವಾಸುದೇವ, ಸಂಕರ್ಷಣ, ಪ್ರದ್ಯುಮ್ನರೂಪನಾದ ಪರಮಪುರುಷನು, ಊರ್ಧ್ವ-ಪ್ರಕೃತಿಮಂಡಲಕ್ಕೆ ಮೇಲ್ಭಾಗದಲ್ಲಿರುವ ಪರಮಪದ ಶಬ್ದವಾಚ್ಯವಾದ ವೈಕುಂಠದಲ್ಲಿ.

ಉದೈತ್॥ ದೇಶಕಾಲಾಪರಿಚ್ಛೇದ್ಯನಾಗಿ ಇದ್ದನು.

ಅಸ್ಯ॥ ಚತುರ್ವ್ಯೂಹಾತ್ಮಕನಾದ ಈ ಪರಮಪುರುಷನ, ಪಾದಃ-ಅನಿರುದ್ಧನೆಂಬ ತುರೀಯಾಂಶವು, ಪುನಃ-ವಾಸುದೇವಾದಿಗಳ ಅನಂತರ, ಇಹ-ಈ ಲೀಲಾವಿಭೂತಿಯಲ್ಲಿ, ಅಭವತ್-ಆವಿರ್ಭವಿಸಿತು, (ಅನಿರುದ್ಧಮೂರ್ತಿಯು ಅವತಾರ ಮಾಡಿದನೆಂದು ಭಾವ)

ತಾತ್ಪರ್ಯ॥ ಸರ್ವಪ್ರಕಾರ ಪರಿಪೂರ್ಣನಾಗಿಯೂ, ಸಮಾಭ್ಯಧಿಕ ರಹಿತನಾಗಿಯೂ, ಅಪರಿಚ್ಛಿನ್ನ ಜ್ಞಾನಶಕ್ತ್ಯಾದಿಗಳುಳ್ಳವನಾಗಿ ಅವಾಙ್ಮನಸಗೋಚರನಾಗಿಯೂ ಇರುವ ಪರಮಪುರುಷನು ಪರಮಕೃಪೆಯಿಂದ ಸಕಲ ಜಗದ್ರಕ್ಷಣಾರ್ಥವಾಗಿ ಈ ಲೀಲಾವಿಭೂತಿಯಲ್ಲಿ ಅವತಾರ ಮಾಡಿದನು.

ತದುಕ್ತಂ ಶ್ರೀ ವೈಕುಂಠ ಸಂಹಿತಾಯಾಂ ॥ ಸಚಾದಿಪುರುಷೋಽಪಿ ವಿಷ್ಣುಃ ಸರ್ವವ್ಯಾಪೀ ಸನಾತನಃ॥ ಶಙ್ಕಾತ್ಮನಾತ್ ಜಗತ್ತ್ರಾತುಂ ಸಂಕರ್ಷಣಮಭಾವಯತ್। ಸಚಸಂಕರ್ಷಣೋದೇವಃ ಪ್ರದ್ಯುಮ್ನಂಸಮಭಾವಯತ್ । ಸಚಪ್ರದ್ಯುಮ್ನಸಂಜ್ಞಸ್ಸನ್ನನಿರುದ್ಧಮಭಾವಯತ್॥ ತಸ್ಮಾದ್ಬ್ರಹ್ಮಾಸಮುತ್ಪನ್ನಸ್ಸೋ ಜಗತ್ಸ್ರಷ್ಟುಂಚರಾಚರಂ । ಏವಂಚತುರ್ಧಾಸಂವ್ಯೂಹ್ಯ ಸ್ವಾತ್ಮಾನಂಪುರುಷೋತ್ತಮಃ । ಅಂಡೇಭ್ಯಃಪರತೋಽಸೌತ್ರಿಪಾದೇನವಿರಾಜತೇ।ಜಗತ್ಸೃಷ್ಟ್ಯಾದಿಕರ್ಮಾಣಿಕರ್ತುಕಾಮಸ್ಸ್ವಲೀಲಯಾ ॥ ಇತಿ.

ಅರ್ಥ॥ ಆದಿಪುರುಷನಾದ ವಾಸುದೇವನು ಜಗತ್ತನ್ನು ರಕ್ಷಿಸುವದಕ್ಕೋಸ್ಕರ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾವತಾರಗಳನ್ನು ಸ್ವೀಕರಿಸಿದನು. ಹೀಗೆ ಪರಂಪರೆಯಿಂದ ಅವತರಿಸಿದ ಅನಿರುದ್ಧಮೂರ್ತಿಯಿಂದ ಚತುರ್ಮುಖನು ಜಗತ್ಸೃಷ್ಟಿಗೋಸ್ಕರ ಸೃಷ್ಟಿಸಲ್ಪಟ್ಟನು.

ಈ ಪ್ರಕಾರ, ಪುರುಷೋತ್ತಮನಾದ ವಾಸುದೇವನು ತನ್ನನ್ನ ಚತುರ್ಧಾ (ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧರೆಂಬ ನಾಲ್ಕು ಭೇದವಾಗಿ) ವ್ಯೂಹನಮಾಡಿ[೧], ಅಂಡಕ್ಕೆ ಹೊರಗೆ ಇರುವ ತ್ರಿಪಾದ್ವಿಭೂತಿಯಲ್ಲಿ ಪ್ರಕಾಶಿಸುವನು.

ಅವತರಣಿಕಾ॥ ಅನಿರುದ್ಧಾತ್ಮನಾದ ಆ ಭಗವಂತನು ಜಗತ್ಸೃಷ್ಟಿಗೆ ಅನುಕೂಲವಾದ ಸಂಕಲ್ಪವನ್ನು ಮಾಡಿದನೆಂದು ಹೇಳುವುದು.

---

೧ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧಾವತಾರಗಳೇ, ವ್ಯೂಹಾವತಾರಗಳು.

ತತೋವಿಷ್ವಙ್ ವ್ಯಕ್ರಾಮತ್ । ಸಾಶನಾನಶನೇಅಭಿ ॥

ಅರ್ಥ॥ ಸಃ-ಆ ಅನಿರುದ್ಧಸ್ವಾಮಿಯು, ತತಃ- ಭೋಗಸಿದ್ಧವಸಾನದಲ್ಲಿ ವಿಷ್ವಙ್-ಎಲ್ಲಾಕಡೆಯಲ್ಲಿಯೂ, ವ್ಯಕ್ರಾಮತ್-ಸಂಕಲ್ಪದಿಂದ ಆಕ್ರಮಿಸುವನು.

ಸೋಕಾಮಯತಬಹುಸ್ಯಾಂಪ್ರಜಾಯೇಯೇತಿ.

ತಾತ್ಪರ್ಯ॥ ಇತ್ಯಾದಿ ಪ್ರಮಾಣಾನುಸಾರ ಆ ಅನಿರುದ್ಧಸ್ವಾಮಿಯು ತಾನೇ, ಆಯಾಯಾ ಪದಾರ್ಥರೂಪದಿಂದ ಬಹುಪ್ರಕಾರವಾಗಲು ಸಂಕಲ್ಪ ಮಾಡಿದನು.

ಅವತರಣಿಕಾ॥ ಪರಮಾತ್ಮನಿಂದ ಸಂಕಲ್ಪಿಸಲ್ಪಟ್ಟ ಆ ರೂಪಗಳು ಯಾವವು, ಎಂಬುವದನ್ನು ಉತ್ತರವಾಕ್ಯವು ಸ್ಪಷ್ಟವಾಗಿ ಹೇಳುವುದು.

"ಸಾಶನಾನಶನೇಅಭಿ"

ಅರ್ಥ॥ ಸಾಶನಂ-ದೇವನರ ಮನುಷ್ಯಾದಿ ರೂಪವಾದ ಜಂಗಮವು, ಅನಶನಂ-ವೃಕ್ಷ, ಗುಲ್ಮ,+ಲತಾದಿ ರೂಪವಾದ ಸ್ಥಾವರವು, ಸಾಶನಾನಶನೇ ಅಭಿ-ಸ್ಥಾವರ ಜಂಗಮಂಗಳನ್ನು ಉದ್ದೇಶಿಸಿ, (ವಿಷ್ವಙ್ ವ್ಯಕ್ರಾಮತ್, ಎಂಬ ಪೂರ್ವೇಣ ಅನ್ವಯಃ)

ತಾತ್ಪರ್ಯ॥ ಸ್ಥಾವರ ಜಂಗಮಾತ್ಮಕವಾದ ಪ್ರಪಂಚ ರೂಪವಾಗಿ, ತಾನು ಬಹು ಪ್ರಕಾರವಾಗಲು ಸಂಕಲ್ಪ ಮಾಡಿದನು.

## ಪಂಚಮಋಕ್.

ತಸ್ಮಾದ್ವಿರಾಡಜಾಯತ । ವಿರಾಜೋಅಧಿಪುರುಷಃ । ಸಜಾತೋ ಅತ್ಯರಿಚ್ಯತ । ಪಶ್ಚಾದ್ಭೂಮಿಮಥೋಪುರಃ ॥

---

೧ ಆ ಅನುಪಮಯನಾದ ಪರಮಾತ್ಮನು ದೇವಮನುಷ್ಯಾದಿ ರೂಪದಿಂದ ಬಹುಪ್ರಕಾರವಾಗುವೆನು. ಅದಕ್ಕಾಗಿ ಆಕಾಶಾದಿರೂಪದಿಂದ ಉತ್ಪನ್ನನಾಗುವೆನು. ಎಂದು, ವ್ಯಷ್ಟಿ ಸಮಷ್ಟಿರೂಪ ಚೇತನಾಚೇತನ ವಿಷಯಕವಾದ ಸಂಕಲ್ಪವಂ ಮಾಡಿದನು.

ಅವತರಣಿಕಾ॥ ಇನ್ನು, ಅದ್ವಾರಕ (ಸಾಕ್ಷಾದ್ಭಗವತ್ಸಂಕಲ್ಪಕೃತ
ವಾದ) ಮಹದಾದಿ ಸೃಷ್ಟಿಯನ್ನು ಹೇಳುವದು. ತಸ್ಮಾತ್–ಆ ಭಗವ
ತ್ಸಂಕಲ್ಪಪ್ರೇರಣೆಯಿಂದ, ವಿರಾಟ್–ವಿವಿಧಂ, ರಾಜತೆ, ಎಂಬ ವ್ಯುತ್ಪತ್ತಿಯ
ಪ್ರಕಾರ, ಮಹದಾದಿರೂಪದಿಂದ ಬಹುವಿಧವಾಗಿ ವಿರಾಜಿಸುವ ಪ್ರಕೃತಿ
ಯು, ಅಜಾಯತ–ಮಹದಾದ್ಯಂಡ ಪರ್ಯಂತರೂಪದಿಂದ ಪರಿಣಮಿಸಿತು.

ಅವತರಣಿಕಾ। ಇನ್ನು ಸದ್ವಾರಕಸೃಷ್ಟಿ (ಚತುರ್ಮುಖನ ದ್ವಾರಾ
ಸೃಷ್ಟಿ) ಯನ್ನ ಹೇಳುವದಕ್ಕಾಗಿ ದ್ವಾರಭೂತನಾದ ಚತುರ್ಮುಖನ
ಸೃಷ್ಟಿಯನ್ನು ಹೇಳುವುದು.

ವಿರಾಜೋ ಅಧಿಪೂರುಷಃ॥

ಅರ್ಥ॥ ವಿರಾಜಃ–ಅಂಡಪರ್ಯಂತವಾದ ಪ್ರಕೃತಿ ಮೊದಲದ, ಅಧಿ–
ಅನಂತರ, ಪೂರುಷಃ–ಚತುರ್ಮುಖನು, ಅಜಾಯತ, (ಎಂದು ಅನುಷಂಗ
ವು) ಉತ್ಪನ್ನನಾದನು.

...ಧ್ಯಾಯೇ, ...ಮನುಃ { ಸೋಽಭಿಧ್ಯಾಯ ಶರೀರಾತ್ಸ್ವಾತ್ ಸಿಸೃಕ್ಷುರ್ವಿವಿಧಾಃ ಪ್ರ
ಜಾಃ । ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜ
ತ್ । ತದಂಡಮಭವದ್ಧೈಮಂ ಸಹಸ್ರಾಂಶುಸಮಪ್ರಭಂ ।
ತಸ್ಮಿಞ್ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ॥

...ಸಂಗ್ರಹೇ ಶ್ರುತ / ಪ್ರಕಾಶಿಕಾಯಾಂ / ...ವ್ಯಾಸಾರ್ಯೈಃ } ಅವತರಣಿಕಾ॥ ಹೀಗೆ ಸಂಕ್ಷೇಪವಾಗಿ ಸಮಷ್ಟಿ,
ವ್ಯಷ್ಟಿ ಸೃಷ್ಟಿಯನ್ನ ಹೇಳಿ ಸಮಷ್ಟಿ ಸೃಷ್ಟಿಯನ್ನು,
ಪೃಥಕ್ಕಾಗಿ (ಬೇರೆ) ಹೇಳುತ್ತಾರೆ. ಸೋಽಭಿಧ್ಯಾ
ಯ ಎಂದು.

ಅರ್ಥ॥ ಸಃ–ಆ ಪರಮಪುರುಷನು, ಅಭಿಧ್ಯಾಯ–ಸಂಕಲ್ಪ ಮಾಡಿ,
ಸ್ವಾತ್, ಶರೀರಾತ್–ತನಗೆ ಸ್ವಕೀಯವಾಗಿ [illegible] ಅವ್ಯಕ್ತ
ದ (ಪ್ರಕೃತಿಯ) ದೆಸೆಯಿಂದ, ಸಿಸೃಕ್ಷುಃ ವಿವಿಧಾಃ ಪ್ರಜಾಃ–ಸೃಷ್ಟಿ ಸೃ

---

ಈ ಸೃಷ್ಟಿಕ್ರಮದ ವಿವರಣವು ಮುಮುಕ್ಷುಹಿತಾಯ ಭಾಗದಲ್ಲಿ ವಿವರಿ
ಸಲ್ಪಟ್ಟಿರುತ್ತಾ[illegible] ಇಲ್ಲಿ [illegible], ವಿವರಿಸಲ್ಪಡಲಿಲ್ಲ.

ಷ್ಟಿಮಾಡಲಪೇಕ್ಷೆಯಿಂದ, ಅಪಏವಸಸರ್ಜಾದೌ-(ತಾಃಇವಾಆಪಃತೇ ಹಿರಣ್ಮಯಮಂಡಮಭವತ್ ಇತ್ಯಾದಿ ಶ್ರುತ್ಯನುಸಾರ, ಇಲ್ಲಿ ಅಪ್ ಶಬ್ದವು ಬ್ರಹ್ಮಾಂಡಕಾರಣ ಸಮಸ್ತ ತತ್ವಪ್ರದರ್ಶನಾರ್ಥವಾದುದು) ಪೃಥಿವ್ಯಾದಿ ಭೂತಗಳಿಗೆ ಕಾರಣವಾದ ಮಹದಹಂಕಾರಗಳನ್ನು ಪ್ರಥಮತಃ ಸೃಷ್ಟಿ ಮಾಡಿದನು.

ತಾಸು-ಅವುಗಳಲ್ಲಿ, ವೀರ್ಯಂ-ಅಂಡೋತ್ಪಾದನ ಶಕ್ತಿಯನ್ನು, ಅವಾಸೃಜತ್-ಉತ್ಪಾದನ ಮಾಡಿದನು.

ಅವತರಣಿಕಾ|| ಹೀಗೆ ಸಮಷ್ಟಿ ಸೃಷ್ಟಿಯನ್ನ ಹೇಳಿ ಇನ್ನು ವ್ಯಷ್ಟಿ ಸೃಷ್ಟಿಯನ್ನ ಹೇಳುತ್ತಾರೆ. "ತದಂಡಮಿತಿ"

ತತ್-ಆ ಅಂಡಕಾರಣ ತತ್ವಸಮೂಹವು, ಸಹಸ್ರಾಂಶುಸಮಪ್ರಭಂ, ಹೈಮಮಂಡಮಭವತ್-ಮಹಾಕಾಂತಿಯುಳ್ಳ ಸುವರ್ಣಮಯವಾದ ಬ್ರಹ್ಮಾಂಡವಾಗಿ ಪರಿಣಮಿಸಿತು.

ಅವ|| ಅದರೊಳ್ ಚತುರ್ಮುಖ ಸೃಷ್ಟಿಯಂ ಪೇಳುತ್ತಾರೆ.

ಅರ್ಥ|| ತಸ್ಮಿನ್-ಅ(ಆ ಬ್ರಹ್ಮಾ)ಂಡದಲ್ಲಿ, ಸರ್ವಲೋಕಪಿತಾಮಹಃ-ಸರ್ವಲೋಕ ಪಿತಾಮಹನಾದ, ಬ್ರಹ್ಮಾ-ಚತುರ್ಮುಖ (ನಾಗಿ) ನು ಸ್ವಯಂ-ಭಗವಂತನಾದ ನಾರಾಯಣನೇ, ಜಜ್ಞೇ-ಉತ್ಪನ್ನನಾದನು.

ವಿಷ್ಣುಃಬ್ರಹ್ಮಸ್ವರೂಪೇಣ ಸ್ವಯಮೇವವ್ಯವಸ್ಥಿತಃ ||

ತಾತ್ಪರ್ಯ|| ಎಂಬಂತೆ, ಪರಮ ಕಾರಣಭೂತನಾದ ನಾರಾಯಣನು ತಾನೇ ಚತುರ್ಮುಖ ಶರೀರಕನಾದನು.

ಇದರಿಂದ ಅಂಡಾಂತರ್ಗತವಾದ ವಸ್ತುಸೃಷ್ಟಿಯು ಸದ್ವಾರಕವಾದುದು ಎಂದು ಹೇಳಲ್ಪಟ್ಟದ್ದಾದುದು.

---

೧ ಸರ್ವಲೋಕಪಿತಾಮಹಃ ಎಂಬುವದರಿಂದ, ದೇವ, ಮನುಷ್ಯಾದಿಗಳಿಗೆ ದಕ್ಷಾದಿ (ದಕ್ಷಪ್ರಜಾಪತಿಯೇ ಮೊದಲಾದ ನವಪ್ರಜಾಪತಿಗಳು) ಗಳು ಸೃಷ್ಟಿಕರ್ತೃಗಳು (ತಂದೆಗಳು) ಆ ಸರ್ವಲೋಕ ಪಿತೃಗಳಾದ ದಕ್ಷಾದಿಗಳಿಗೆ ಸೃಷ್ಟಿಕರ್ತೃವು ಚತುರ್ಮುಖನು. ಕಾರಣ ಚತುರ್ಮುಖನು ಸರ್ವಲೋಕಕ್ಕೂ ಪಿತಾಮಹನು (ತಂದೆಯ ತಂದೆ=ಅಜ್ಜ) ಎಂದು ಹೇಳಲ್ಪಟ್ಟಿತು.

ಅಥವಾ, ತಸ್ಮಾತ್-ಆ ಪರಮಪುರುಷನ ದೆಸೆಯಿಂದ, ವಿರಾಟ್-ವಿಶೇಷೇಣ, ರಾಜತೆ-ಇತಿ, ವಿರಾಟ್, ಎಂಬ ವ್ಯುತ್ಪತ್ತಿಯ ಪ್ರಕಾರ ಪ್ರಕಾಶಶಾಲಿಯಾದ ಪರಮಾತ್ಮನು (ಅನಿರುದ್ಧರೂಪಿಯಾಗಿ) ಅಜಾಯತ-ಉತ್ಪನ್ನನಾದನು.

ವಿರಾಜಃ-ವಿರಾಟ್ಪುರುಷನಾದ ಅನಿರುದ್ಧನ ದೆಸೆಯಿಂದ, ಅಧಿಪುರುಷಃ-ಅಧಿಕಾರ ಪುರುಷನಾದ ಚತುರ್ಮುಖನು, ಅಜಾಯತ-ಉತ್ಪನ್ನನಾದನು.

ಸಜಾತೋಽತ್ಯರಿಚ್ಯತ॥

ಸಃ-ಆ ಚತುರ್ಮುಖನು, ಜಾತಃ-ಉತ್ಪನ್ನನಾಗಿ, ಅತ್ಯರಿಚ್ಯತ-ಪ್ರವೃದ್ಧಕಾಯನಾದನು (ಭಗವತ್ಕೃಪೆಯಿಂದ ಸಕಲ ಪದಾರ್ಥಗಳನ್ನು ಸುಖವಾಗಿ ಸೃಷ್ಟಿಸಲು ಶಕ್ತನಾಗಲರ್ಹವಾದ ಕಾಯದಿಂ ಕೂಡಿದವನಾದನು)

ಅವ॥ ಆ ಶರೀರವೃದ್ಧಿಯನ್ನ ಉತ್ತರವಾಕ್ಯವು ಹೇಳುವುದು.

ಪಶ್ಚಾದ್ಭೂಮಿಮಥೋಪುರಃ ॥

ಅರ್ಥ। ಭೂಮಿಯು, ಅಧಃಪ್ರದೇಶವನ್ನೂ, ಊರ್ಧ್ವಪ್ರದೇಶವನ್ನೂಕೂಡ, ಅತ್ಯರಿಚ್ಯತ, (ಎಂದು ಪೂರ್ವೇಣಾನ್ವಯಃ,) ಅತಿಕ್ರಮಿಸಿ ಪ್ರವೃದ್ಧಕಾಯನಾದನು.

ಅಥವಾ, ಸಃ-ಆ ವಿರಾಟ್ಪುರುಷನಾದ ಅನಿರುದ್ಧಸ್ವಾಮಿಯು, ಜಾತಃ-ಪ್ರಾದುರ್ಭೂತನಾಗಿ, ಪಶ್ಚಾದ್ಭೂಮಿಮಥೋಪುರಃ-ಭೂಮಿಯು (ಇದು ಬ್ರಹ್ಮಾಂಡಕ್ಕೆ ಉಪಲಕ್ಷಣವು) ಅಂತಃ-ಬಹಿಃಪ್ರದೇಶಗಳನ್ನ, ಅತ್ಯರಿಚ್ಯತ-ವ್ಯಾಪಿಸಿದನು. (ವ್ಯಾಪಕನಾದನು)

ಷಷ್ಠೀಋಕ್.

ಯತ್ಪುರುಷೇಣಹವಿಷಾ । ದೇವಾಯಜ್ಞಮತನ್ವತ । ವಸಂತೋಅಸ್ಯಾಸೀದಾಜ್ಯಂ । ಗ್ರೀಷ್ಮ ಇಧ್ಮಶ್ಶರದ್ಧವಿಃ ॥

ಅವತರಣಿಕಾ॥ ಹೀಗೆ ಉತ್ಪನ್ನನಾದ ಚತುರ್ಮುಖನು ಸ್ವತಃ ಜಗತ್ಸೃಷ್ಟಿಯನ್ನ ತಿಳಿಯದವನಾಗಿ ಭಗವದುಪದಿಷ್ಟ (ಉಪದೇಶಮಾಡಲ್ಪಟ್ಟ)

ಮಾರ್ಗದಿಂದ ಭಗವಂತನನ್ನು ಆತ್ಮಸಮರ್ಪಣ ರೂಪಮಾನಸಯಾಗ ದಿಂದ ಆರಾಧನ ಮಾಡಿ, ಆ ಭಗವಂತನ ಅನುಗ್ರಹದಿಂದ ಹೊಂದಲ್ಪಟ್ಟ ಜ್ಞಾನವುಳ್ಳವನಾಗಿ ಜಗತ್ಸೃಷ್ಟಿಯಂ ಮಾಡಿದನು. ಎಂದು ಹೇಳಲುದ್ದೇಶಿಸಿ ಪ್ರಥಮತಃ ಬ್ರಹ್ಮನಿಂದ ಮಾಡಲ್ಪಟ್ಟ ಭಗವದಾರಾಧನಾತ್ಮಕವಾದ ಮಾನಸಿಕ ಯಾಗವನ್ನು ಹೇಳಲಾರಂಭಿಸುವದು. ಯತ್ಪುರುಷೇಣ, ಇತ್ಯಾದಿ.

ಅರ್ಥ॥ ಯತ್-ಯಾವಕಾಲದಲ್ಲಿ, ಪುರುಷೇಣ-ಚತುರ್ಮುಖನಾತ್ಮಕನಾದ, ಹವಿಷಾ-ಹವಿಸ್ಸಿನಿಂದ, ದೇವಾಃ-ಅವನ ಇಂದ್ರಿಯಂಗಳು, ಯಜ್ಞಂ-ಧ್ಯಾನರೂಪವಾದ ಮಾನಸ ಯಜ್ಞವನ್ನು, ಅತನ್ವತ-ಮಾಡಿದವೋ, (ಅನುಷ್ಠಿಸಿದವೊ) ತದಾ-ಆಕಾಲದಲ್ಲಿ, ಅಸ್ಯ-ಈ ಧ್ಯಾನಯಜ್ಞಕ್ಕೆ, ವಸಂತಃ-ವಸಂತಕಾಲವು, ಆಜ್ಯಮಾಸೀತ್-ಆಜ್ಯ (ತುಪ್ಪ) ತ್ವೇನ ಧ್ಯಾನಿಸಲ್ಪಟ್ಟಿತು.

ಗ್ರೀಷ್ಮಃ-ಗ್ರೀಷ್ಮಕಾಲವು, ಇಧ್ಮಃ-ಇಧ್ಮ (ಸಮಿತ್ತು) ವಾಗಿ ಎಣಿಸಲ್ಪಟ್ಟಿತು, ಶರತ್-ಶರತ್ಕಾಲವು, ಹವಿಃ-ಪುರೋಡಾಶವೆಂಬ ಹವಿಸ್ಸಾಗಿ ಧ್ಯಾನಿಸಲ್ಪಟ್ಟಿತು.

ಪಾದ್ಮೇ॥ ಹಿಮದಗ್ಧತೃಣಾಭೂಮಿರ್ವಸಂತೇಶೋಭತೇತೃಣೈಃ ।
ಗಾವಶ್ಚತೃಣಭಕ್ಷ್ಯೇಣ ದುಹ್ಯಂತೇಸುತರಾಂತದಾ ॥

ಇತ್ಯಾದಿ ಪ್ರಮಾಣರೀತ್ಯಾ ವಸಂತಕಾಲವು, ಆಜ್ಯಕ್ಕೆ ಮುಖ್ಯಕಾಲವಾದ ಪ್ರಯುಕ್ತ, ಆಜ್ಯತ್ವೇನ ಧ್ಯಾನಮಾಡಲ್ಪಟ್ಟಿತು. ಎಂದು ಭಾವ.

ಗ್ರೀಷ್ಮಕಾಲೇಪಲಾಶೇಧ್ಮಾಃಹವಿಷ ಸ್ಸಂತಿಮುಹುರ್ಮುಹುಃ। ಯೋಽತ
ಸಂವತ್ಸರಂಸತ್ರಂಆಸ್ತೇಭವಶಾಂತಯೇ ॥

ಇತ್ಯಾದಿಗಳಿಂದ ಗ್ರೀಷ್ಮಕಾಲದಲ್ಲಿ ಸಮಿತ್ತಾಪ್ರಾಚುರ್ಯವು ಹೇಳಲ್ಪಟ್ಟದುದರಿಂದ ಗ್ರೀಷ್ಮಕಾಲವು ಸಮಿತ್ತಾಗಿ ಧ್ಯಾನಿಸಲ್ಪಟ್ಟಿತು.

---

೧ ಹಿಮದಿಂದ ಸುಡಲ್ಪಟ್ಟ ಹುಲ್ಲುಗಳುಳ್ಳ ಭೂಮಿಯು ವಸಂತದಲ್ಲಿ ಹುಲ್ಲುಗಳಿಂದ ಕೂಡಿ ಶೋಭಿಸುವುದು. ಆ ವಸಂತಕಾಲದಲ್ಲಿ ಚನ್ನಾಗಿ ಹುಲ್ಲು ಮೇವು ದೊರುವ ಪ್ರಯುಕ್ತ, ಗೋವುಗಳು ಚನ್ನಾಗಿ ಕರೆಯುವವು. ಕಾರಣ, ವಸಂತಕಾಲದಲ್ಲಿ ಆಜ್ಯವು ಅಧಿಕವೆಂದು ಭಾವವು. ಅನ್ಯತ್ರಾಪ್ಯೇವಂ ಹೀಗೆಯೇ ತಿಳಿಯತಕ್ಕದ್ದು.

ಶರತ್ಕಾಲವು ಸಸ್ಯಾದಿಗಳ ಪಾಕಕಾಲವಾದ ಪ್ರಯುಕ್ತ ಹವಿಸ್ಸಾಗಿ ಧ್ಯಾನಿಸಲ್ಪಟ್ಟಿತು.

## ಸಪ್ತವಿಭಾಗಿಕೆ.

ಸಪ್ತಾಸ್ಯಾಸನ್ಪರಿಧಯಃ । ತ್ರಿಸ್ಸಪ್ತಸ್ಸಮಿಧಃಕೃತಾಃ ॥
ದೇವಾಯದ್ಯಜ್ಞಂತನ್ವಾನಾಃಅಬಧ್ನನ್ಪುರುಷಂಪಶುಂ ।

ಅರ್ಥ। ಅಸ್ಯ-ಈ ಯಜ್ಞಕ್ಕೆ, ಪರಿಧಯಃ-ಪರಿಧಿ (ಅಗ್ನಿಯ ದಕ್ಷಿಣ, ಪಶ್ಚಿಮ, ಉತ್ತರದಿಕ್ಕುಗಳಲ್ಲಿ ಇಡಲ್ಪಡುವ ಉದ್ದವಾದ ಸಮಿತ್ತುಗಳು) ಗಳು, ಸಪ್ತ-ಆಸನ್, (ಉತ್ತರವೇದಿಪರಿಧಯಸ್ತ್ರಯಃ, ಆಹವನೀಯಸ್ಯ ತ್ರಯಃ, ಆದಿತ್ಯಸ್ಸಪ್ತಮಃ,) ಎಂದು ಶತಪಥೋಕ್ತಪ್ರಕಾರ ಸಪ್ತಪರಿ ಧಿಗಳೆಂದು ಭಾವ.

ಯದ್ಯಪಿ-ವಸಂತೋಸ್ಯ-ಇತ್ಯಾದಿಗಳಲ್ಲಿ ಆಜ್ಯಾದಿತ್ವೇನ ಧ್ಯಾನಿಸಲ್ಪ ಟ್ಟ ವಸಂತಾದಿಗಳೋಪಾದಿಯಲ್ಲಿ, ಇಲ್ಲಿ ಪರಿಧಿತ್ವೇನ ಇವುಗಳು (ಮುಂದೆ ...ಯಲ್ಪಡುವ ಪೃಥಿವ್ಯಾದಿಗಳು)ಧ್ಯಾನಿಸಲ್ಪಟ್ಟವು ಎಂದು ಕಂಠೋಕ್ತ ...ಾಗಿ ಹೇಳಲ್ಪಡದಿದ್ದಾಗ್ಯೂ ಜಗತ್ಸೃಷ್ಟಿಗೆ ಪೂರ್ವಭಾವಿಗಳಾದ ಸಪ್ತ ...ದಾರ್ಥ (ಪೃಥಿವೀ, ಅಪ್, ತೇಜಸ್, ವಾಯು, ಆಕಾಶ, ಅಹಂಕಾರ, ...ದ್ಧಿಗಳು)ಗಳೇ ಪರಿಧಿರೂಪದಿಂದ ಧ್ಯಾನಿಸಲ್ಪಟ್ಟವೆಂದು ತಿಳಿಯುವುದು.

ಅಸ್ಯ-ಈ ಯಜ್ಞಕ್ಕೆ, ತ್ರಿಸ್ಸಪ್ತ-ತ್ರಿಗುಣಿತ ಸಪ್ತಸಂಖ್ಯಾಕಗಳಾದ ...೨೧) ಸಮಿಧಃ-ಸಮಿತ್ತು, (ಅಗ್ನಿಜ್ವಲನ ಸಾಧನಕಾಷ್ಠ) ಗಳು ಕೃತಾಃ ...ಮಾಡಲ್ಪಟ್ಟವು. (ಧ್ಯಾನಿಸಲ್ಪಟ್ಟವು)

...ಜ್ಞಾನೇಂದ್ರಿಯ (೫) ಕರ್ಮೇಂದ್ರಿಯ (೫) ಮನಸ್ಸು (೧) ತನ್ಮಾತ್ರ ...ಗಳು (೫) ಭೂತಗಳು (೫) ಈ ಏಕವಿಂಶತಿ (೨೧) ಸಂಖ್ಯಾಕಗ ...ದ ಇಂದ್ರಿಯಾದಿಗಳೇ ಪರಮಾತ್ಮನೆಂಬ ಅಗ್ನಿಗೆ ಉದ್ದೀಪನ (ಪ್ರ ...ಲನ) ಹೇತುಗಳಾಗಿ ಧ್ಯಾನಿಸಲ್ಪಟ್ಟವೆಂದು ಭಾವ.

...ಟ್ಟಭಾಸ್ಕರ } ಏವಂ ಇಧ್ಮಾವಯವಾನಾಂ ಏಕವಿಂಶತೇರ್ದಾರೂಣಾಂ
...ವ್ಯೇತು } ಸಂಪಾದನೇನ ಇಧ್ಮನಿರೂಪಣಂ ಕೃತಂ । ಪೂರ್ವಂ

ತುಪೃಥಕ್ತ್ವೇನಪರಿಧಾನಕಾಲೇಪರಿಧಿನಿರೂಪಣಂಕೃ
ತಂ-ಇತಿದ್ರಷ್ಟವ್ಯಂ ಇತಿ ॥

ದೇವಾಯದ್ಯಜ್ಞಂತನ್ವಾನಾ । ಅಬಧ್ನನ್ಪುರುಷಂಪಶುಂ ॥

ಅರ್ಥ॥ ದೇವಾಃ-ಇಂದ್ರಿಯಗಳು, ಯತ್-ಯಾವಕಾಲದಲ್ಲಿ, ಯ
ಜ್ಞಂ-ಯಜ್ಞವ (ದೇವತೋದ್ದೇಶ್ಯದಿಂದ ದ್ರವ್ಯತ್ಯಾಗವೇ ಯಜ್ಞ)
ನ್ನು ತನ್ವಾನಾಃ-ಅನುಷ್ಠಿಸುವರಾಗಿ, ಪುರುಷಂ, ಪಶುಂ-ಪಶುಸ್ಥಾನೀಯ
ನಾದ ಚತುರ್ಮುಖನ (ನೆಂಬ ಪಶುವನ್ನು) ನನ್ನು, ಅಬಧ್ನನ್-ಕಟ್ಟಿದ
ರೋ, ಹೃದಯವೆಂಬ ಯೂಪಸ್ತಂಭಕ್ಕೆ ಅಧ್ಯವಸಾಯ (ಬುದ್ಧಿ)ವೆಂಬ,
ರಶನೆ (ಯಜ್ಞಪಶುವನ್ನ ಕಟ್ಟುವ ಹಗ್ಗ) ಯಿಂದ ಕಟ್ಟಿದರು. (ಅನ
ನ್ಯಗತಿಯನ್ನಾಗಿ ಮಾಡಿದರು) ಎಂದು ಭಾವ.

## ಅಷ್ಟಮಿಾಯಕ್.

ತಂಯಜ್ಞಂಬರ್ಹಿಷಿಪ್ರೌಕ್ಷನ್ । ಪುರುಷಂಜಾತಮಗ್ರತಃ । ತೇನ
ದೇವಾಅಯಜಂತ । ಸಾಧ್ಯಾಋಷಯಶ್ಚಯೇ ॥

ಅರ್ಥ॥ ತದಾ (ಇತಿ ಅಧ್ಯಾಹಾರಃ) ಆ ಕಾಲದೊಳ್, ತಂ-ಆ ಬ್ರ
ಹ್ಮನೆಂಬ, ಯಜ್ಞಂ-ಯಜಂತ್ಯನೇನೇತಿ, ಯಜ್ಞಃ, ಎಂಬ ವ್ಯುತ್ಪತ್ತಿ
ಯ ಪ್ರಕಾರ, ಯಜನೀಯ-ಹವಿಸನ್ನು, ಬರ್ಹಿಷಿ-ಪ್ರಕೃತಿಯಲ್ಲಿ, ನಿಧಾ
ಯ, (ಇದು ಅಧ್ಯಾಹಾರ) ಮಡಗಿ, ಪ್ರೌಕ್ಷನ್-ಪ್ರೋಕ್ಷಣ (ಸಂಸ್ಕಾರ
ವಿಶೇಷ) ವನ್ನ ಮಾಡಿದರು.

ಇದು, ಉಪಸ್ತರಣ, ಅವದಾನ, ಅಭಿಘಾರಣಾದಿಗಳಿಗೆ ಉಪಲಕ್ಷಣವು.
ಪ್ರಕೃತೆ ಅನನ್ಯಾರ್ಹತ್ವಾನುಸಂಧಾನಾದಿಗಳೇ ಪ್ರೋಕ್ಷಣಾದಿ ಸ್ಥಾನೀ
ಯವೆಂದು ತಿಳಿಯಲ್ಪಡತಕ್ಕದ್ದು.

ಅವತರಣಿಕಾ॥ ಆದರೆ ಏತಕ್ಕೋಸ್ಕರ ಈ ಯಜ್ಞದಲ್ಲಿ ಸರ್ವವೂ
ಮಾನಸಿಕವಾಗಿ ಅನುಷ್ಠಿಸಲ್ಪಡುವುದು ಎಂಬ ಆಕಾಂಕ್ಷೆಯನ್ನ ಶಾಂತಿ
ಮಾಡಲು ಪಶುವನ್ನು ವಿವರಿಸುವದು. ಪುರುಷಮಿತ್ಯಾದಿ.

ಅರ್ಥ॥ ಅಗ್ರತಃ-ಪೂರ್ವಕಾಲ (ಅಂಡಾಂತರ್ಗತವಾದ ಸ್ಥಿರಚರಾದಿ

ಸೃಷ್ಟಿಗೆ ಮೊದಲು) ದಲ್ಲಿ, ಜಾತಂ-ಉತ್ಪನ್ನನಾದ, ಪುರುಷಂ-ಪುರುಷನ
ನ್ನು, "ತಂಯಜ್ಞಂಬರ್ಹಿಷಿಪ್ರೌಕ್ಷನ್" ಎಂದು ಪೂರ್ವೇಣ ಸಂಬಂಧವು.

ಯೋಗರತ್ನೇಚ॥ ತಂ, ಅಗ್ರತೋಜಾತಂ, ಪುರುಷಂ, ಯಜ್ಞಂಬ
ರ್ಹಿಷಿ (ನಿಧಾಯ) ಸಾಧ್ಯಾಃಪ್ರೌಕ್ಷನ್-ಇತಿ.

ತಥಾಚ॥ ಯಾವ ಕಾರಣದ್ದೆಸೆಯಿಂದ, ಪಶ್ವಾದಿ ಸೃಷ್ಟಿಗಿಂತಲೂ,
ದಮತಃ ಈ ಯಜ್ಞವು ಪ್ರವೃತ್ತವಾದುದೋ ಅದುಕಾರಣ ಈ
ಯಜ್ಞದಲ್ಲಿ ಸರ್ವವೂ ಮಾನಸಿಕವೆಂದು ಭಾವವು.

ತೇನದೇವಾಅಯಜಂತ । ಸಾಧ್ಯಾಋಷಯಶ್ಚಯೇ ॥

ಅರ್ಥ॥ ತೇನ-ಆ ಬ್ರಹ್ಮರೂಪವಾದ ಹವಿಸ್ಸಿನಿಂದ, ದೇವಾಃ-ಇಂದ್ರಿ
ಯಗಳು, ಅಯಜಂತ-ಯಾಗವನ್ನ ಮಾಡಿದವು.

ಅವ॥ ಇದನ್ನೇ ವಿವರಿಸುವರು.

ಅರ್ಥ॥ ಸಾಧ್ಯಾಃ-ಕರ್ಮಸಾಧನಗಳಾದ ವಾಗಾದಿ ಇಂದ್ರಿಯಗಳೂ,
ಋಷಯಃ-ಜ್ಞಾನಸಾಧನಗಳಾದ, ಚಕ್ಷುರಾದಿ ಇಂದ್ರಿಯಗಳೂ, ತೇನ
ಅಯಜಂತ-ಬ್ರಹ್ಮರೂಪ ಹವಿಸ್ಸಿನಿಂದ ಯಾಗ ಮಾಡಿದವು. (ಯೇ,
ಸಾಧ್ಯಾಋಷಯಶ್ಚದೇವಾತೆ ತೇನ ಅಯಜಂತ) ಎಂದು ಅನ್ವಯವು.

ಓಮಿತ್ಯಾತ್ಮಾನಂಯುಂಜೀತ,

ತಥಾಚ, ಶಾಬಲ್ಯಬ್ರಾಹ್ಮಣೇ ಪ್ರಪಂಚಿತೋಽಯಂಪ್ರಕಾರಃ

ತಾತ್ಪರ್ಯ॥ ಎಂಬಂತೆ ಆತ್ಮಸಮರ್ಪಣರೂಪವಾದ ಯಜ್ಞವನ್ನ
ಋತ್ವಿಕ್ ಸ್ಥಾನೀಯರಾದ ದೇವತೆಗಳು (ಬ್ರಹ್ಮನ ಇಂದ್ರಿಯಗಳು)
ಯಾಗಸದುದ್ದೇಶವಾಗಿ ಜಗತ್ಸೃಷ್ಟ್ಯಪೇಕ್ಷೆಯಿಂದ ಅನುಷ್ಠಿಸಿದರೆಂದು
ಭಾವವು.

ಪುರುಷಸೂಕ್ತ ವ್ಯಾಖ್ಯಾನೇ | ತಸ್ಮಾತ್ಪುನರ್ನಾರಾಯಣಾನ್ಮೂಲಪ್ರಕೃತಿರಜಾಯತ। ಸಾಪ್ರಕೃತಿಃ ಪಾದನಾರಾಯಣಶಾಸನಾತ್ ಮಹದಹಂ ಕಾರಾದೀನ್‌ಸೂಕ್ಷ್ಮಪದಾರ್ಥಾನಜನಯತ್। ಏವಂ ಸೂಕ್ಷ್ಮಾಯಾಂ ಸೃಷ್ಟೌಕೃತಾಯಾಂ ಸಪಾದನಾರಾಯ

೩೬ ಸ್ಥೂಲಸ್ಸೃಷ್ಟ್ಯರ್ಥಂ ಚತುರ್ಮುಖಂ ಪುರುಷಮಭಿ
ದಧ್ಯೌ । ತದಭ್ಯಾನಾತ್ಪಶ್ಚಾತ್ಪುರುಷಶ್ಚತುರ್ಮುಖಾ
ಖ್ಯೋಜಾಯತ । ಸಜಾತೋಭೂಮಿಃಪಶ್ಚಾತ್ಪುರತ
ಶ್ಚಾತ್ಯರಿಚ್ಯತ । ಸರ್ವಕಾರ್ಯಕ್ಷಮೋವೃದ್ಧಕಾಯ
ಸ್ಸನ್ಪುರುಷಸೃಷ್ಟಿಂ ಪ್ರಯಾಸ । ತಮನಿರುದ್ಧ ನಾರಾಯ
ಣೋಪಾಕ್ರೋಶತ್ । ಬ್ರಹ್ಮಂಸ್ಸೃಷ್ಟಿಂ ಭವಸೀತಿ ।
ಅಜ್ಞಾನಾದಿತಿಹೋವಾಚ । ಬ್ರಹ್ಮಂಸ್ತ್ವೇಂದ್ರಿಯಾಣಿ
ದೇವಾನೃತ್ವಿಜಃ ಕೃತ್ವಾತ್ವದೀಯಂಚ ಕಳೇಬರಂ ಹವಿಃ
ಕೃತ್ವಾಮಾಂಹವಿರ್ಭುಜಂ ಧ್ಯಾತ್ವಾಮಯ್ಯಗ್ನೌನಿವೇ
ದಯ । ಮದಂಗಸ್ಪರ್ಶಮಾತ್ರೇಣ ಜಗತ್ಕೋಶಭೂತ
ಸ್ತ್ವತ್ಕಾಯೋ ಬೃಂಹಿಷ್ಯತೇ।ತಸ್ಮಾದುದ್ಭೂತಾನಿಪ್ರಾ
ಣಿಜಾತಾನಿಯಥಾಪುರಂನಿರ್ಮಾಯಸ್ಯಷ್ಟಾಭವಿಷ್ಯಸಿ।
ಯಏವಂಸೃಷ್ಟಿಯಜ್ಞಂ ಜಾನಾತಿಸಜನ್ಮನೀಹ ಮು
ಕ್ತೋಭವತಿ—ಇತಿ.

ಅರ್ಥ॥ ವಾದನಾರಾಯಣಃ-ಅನಿರುದ್ಧಸ್ವಾಮಿಯು, ಅನ್ಯತ್ಸ್ಪಷ್ಟಂ.

## ನವಮಿಾಋಕ್.

ತಸ್ಮಾದ್ಯಜ್ಞಾತ್ಸರ್ವಹುತಃ। ಸಂಭೃತಂಪೃಷದಾಜ್ಯಂ । ಪಶೂಗ್ಂ
ಸ್ತಾಂಶ್ಚಕ್ರೇವಾಯವ್ಯಾನ್ । ಆರಣ್ಯಾನ್ಗ್ರಾಮ್ಯಾಶ್ಚಯೇ ॥

ಅವತರಣಿಕಾ॥ ಪೂರ್ವೋಕ್ತ ಪ್ರಕಾರವಾಗಿ, ಯಜ್ಞದಿಂದ ಆರಾ
ಧಿಸಲ್ಪಟ್ಟ ಪರಮಾತ್ಮನಸೇವೆಯಿಂದ ಹೊಂದಲ್ಪಟ್ಟ ಜ್ಞಾನಶಕ್ತ್ಯಾದಿಗ
ಳುಳ್ಳ ಚತುರ್ಮುಖನು ಪೂರ್ವರೀತ್ಯಾ ಜಗತ್ಸೃಷ್ಟಿ ಮಾಡಿದನೆಂದು
ಹೇಳುವುದು.

ಸರ್ವಹುತಃಸರ್ವಂಜುಹೋತೀತಿಸರ್ವಹುತ್ ॥

ಎಂಬಂತೆ ಸಕಲವನ್ನೂ ಭಗವಂತನಿಗೆ ಸಮರ್ಪಣೆ ಮಾಡಿದಂಥಾ (ಸ್ವ
ಕೀಯವಾದ ಸಕಲ ಭಾರವನ್ನೂ ಭಗವಂತನಲ್ಲಿ ಸಮರ್ಪಿಸಿದವನಾದ ಎಂ
ದು ಭಾವವು.)

ಅರ್ಥ॥ ಅಶ್ವತರ-ಹೇಸರಗತ್ತೆ, ಶ್ವಾಪದಾಃ-ವ್ಯಾಘ್ರಾದಿಗಳು, ದ್ವಿಖುರಾಃ-ಎರಡು ಗೊರಸಲುಳ್ಳ ಗೋವೇವೊದಲಾದವುಗಳು, ಔದಕಾಃ-ವೊಸಳೆ, ಆವೆ, ವೊದಲಾದವುಗಳು. ಸರೀಸೃಪಾಃ-ಸರ್ಪಗೋಧಾ (ಉಡು) ವೊದಲಾದುವುಗಳು, ಅನ್ಯತ್ಸ್ಪಷ್ಟಂ।

ಇಲ್ಲಿ, "ಆರಣ್ಯಾಃಗ್ರಾಮಾಶ್ಚಯೇ" ಎಂದು ಶಾಖಾಂತರದಲ್ಲಿ ಪಾಠವು.

ಆಪಕ್ಷ, ಯೇಆರಣ್ಯಾಃ, ಯೇಚಗ್ರಾಮ್ಯಾಃತಾ೯, ದ್ವಿವಿಧಾನಪಿಪಶೂ೯, ಚಕ್ರೇ, "ಇತ್ಯನ್ವಯಃ"

## ದಶವಿಾಋಕ್.

ತಸ್ಮಾದ್ಯಜ್ಞಾತ್ಸರ್ವಹುತಃ । ಋಚಸ್ಸಾಮಾನಿಜಜ್ಞಿರೆ ॥ ಛಂದಾಗ್‌ಂಸಿಜಜ್ಞಿರೇತಸ್ಮಾತ್ । ಯಜುಸ್ತಸ್ಮಾದಜಾಯತ ।

ಅರ್ಥ॥ ತಸ್ಮಾತ್-ಪೂರ್ವೋಕ್ತ, ಯಜ್ಞಪ್ರತಿಪಾದಿತನಾದ, ಸರ್ವಹುತಃ-ಸರ್ವಂಹೂಯತೇಸ್ಮಾ ಇತಿಸರ್ವಹುತ್ ಎಂಬಂತೆ ಸರ್ವಯಜ್ಞಫಲಭಾಕ್ಕಾದ, ಯಜ್ಞಾತ್-ಪರಮಪುರುಷನ ದೆಶೆಯಿಂದ, ಋಚಃ-ಋಗ್ವೇದಗಳು, ಸಾಮಾನಿ-ಸಾಮವೇದಗಳೂ, ಜಜ್ಞಿರೇ-ಉತ್ಪನ್ನಗಳಾದವು.

ಛಂದಾಂಸಿ-ಗಾಯತ್ರ್ಯಾದಿ ಛಂದಸ್ಸುಗಳೂ, ಜಜ್ಞಿರೆ-ಉತ್ಪನ್ನಗಳಾದವು, ತಸ್ಮಾತ್-ಆ ಪರಮಪುರುಷನ ದೆಸೆಯಿಂದ, ಯಜುಃ-ಯಜುರ್ವೇದವು, ಅಜಾಯತ-ಉತ್ಪನ್ನವಾದುದು.

ಗೀತಾ॥ ಅಹಂಹಿಸರ್ವಯಜ್ಞಾನಾಂಭೋಕ್ತಾಚಪ್ರಭುರೇವಚ ॥

ಎಂಬಂತೆ, ಸರ್ವಹುತ್-ಶಬ್ದವಾಚ್ಯನಾಗಿಯೂ,

ಶ್ರು॥ ಯಜ್ಞೋವೈವಿಷ್ಣುಃ,

ಎಂಬಂತೆ, ಯಜ್ಞಶಬ್ದವಾಚ್ಯನಾಗಿಯೂ,

ಗೀತಾ॥ ಯೆಪ್ಯನ್ಯದೇವತಾಭಕ್ತಾಯಜಂತೇಶ್ರದ್ಧಯಾನ್ವಿತಾಃ।
ತೇಪಿಮಾಮೇವಕೌಂತೇಯಯಜಂತ್ಯವಿಧಿಪೂರ್ವಕಂ ॥

ಎಂಬ ವಾಕ್ಯಾನುಸಾರ, ಸರ್ವಹೂಯತೆ ಇತಿಸರ್ವಹುತ್-ಎಂಬ ವ್ಯುತ್ಪತ್ತಿಯಲ್ಲಿ ಪಶುಪುತ್ರಾದಿ ಸರ್ವವಿಧ ಫಲಾಭಿಲಾಷಿಗಳಿಂದ ಅನುಷ್ಠಿಸ

ಲ್ಪಡುವ ಅಗ್ನೀಂದ್ರಾದಿ ಸರ್ವದೇವತೋದ್ದೇಶ್ಯಕ ಯಜ್ಞಗಳಿಂದಲೂ ಆರಾಧ್ಯನಾದ ಪರಮಪುರುಷನ ದೆಸೆಯಿಂದ, ಸಕಲ ವೇದಗಳೂ ಉತ್ಪನ್ನಗಳಾದವು.

ಏಕವಿಂಶತಿಶಾಖಾಬಹ್ವೃಚಃ ಸಹಸ್ರಂಸಾಮಶಾಖಾಃ ಏಕಶತಂ
ಯಜುಶ್ಶಾಖಾಃ ನವಧಾಥರ್ವಣೋವೇದಃ ॥

ಇತ್ಯಾದ್ಯುಕ್ತಪ್ರಕಾರ (೨೧) ಶಾಖೆಗಳುಳ್ಳ ಋಗ್ವೇದವೂ, (೧೦೦೦) ಸಾವಿರ ಶಾಖೆಗಳುಳ್ಳ ಸಾಮವೇದವೂ, (೧೦೧) ನೂರೊಂದು ಶಾಖೆಗಳುಳ್ಳ ಯಜುರ್ವೇದವೂ, ಕೂಡಾ.

ಶ್ರು॥ ಯೋಬ್ರಹ್ಮಾಣಂವಿದಧಾತಿಪೂರ್ವಂ ಯೋವೈವೇದಾಂಶ್ಚಪ್ರ
ಹಿಣೋತಿತಸ್ಮೈ ॥

ಎಂಬಂತೆ, ಚತುರ್ಮುಖಬ್ರಹ್ಮನಿಗೆ ಪ್ರಥಮತಃ ಉಪದೇಶಿಸಲ್ಪಟ್ಟವು.

ಹೀಗೆ, ಕಲ್ಪಾದಿಯಲ್ಲಿ ಭಗವಂತನಿಂದ ಉತ್ಪನ್ನವಾದ ವೇದಕ್ಕೆ ಅನಾದಿತ್ವವನ್ನೂ, ನಿತ್ಯತ್ವವನ್ನೂ, ಅಪೌರುಷೇಯತ್ವವನ್ನೂ ಹೇಳುವದು ಕೂಡುವದೋ ಎಂದರೆ,

ಪ್ರತಿಕಲ್ಪಾದಿಯಲ್ಲಿಯೂ, ಸಮಾನವಾದ ಆನುಪೂರ್ವಿಯೊಡನೆ ಸಕಲ ವೇದಗಳನ್ನೂ ಕೂಡಾ ಸರ್ವಜ್ಞನಾಗಿಯೂ ಸರ್ವದಾ ಸರ್ವಸಾಕ್ಷಾತ್ಕಾರಿಯಾಗಿಯೂ ಇರುವ ಭಗವಂತನು ಚತುರ್ಮುಖನಿಗೆ ಯಥಾವತ್ತಾಗಿ ಉಪದೇಶಮಾಡುವ ಪ್ರಯುಕ್ತ ಅನಾದಿತ್ವವೂ, ನಿತ್ಯತ್ವವೂ ಸಿದ್ಧವಾಗಿರುವುದು.

ಪೂರ್ವಾನುಪೂರ್ವೀ ವಿಜಾತೀಯಾನುಪೂರ್ವಿಯೊಡನೆ ಯಾವ ಸ್ವತಂತ್ರ ಪುರುಷನಿಂದಲೂ ರಚಿಸಲ್ಪಟ್ಟದ್ದಲ್ಲವಾದಕಾರಣ ಅಪೌರುಷೇಯತ್ವವೂ ಕೂಡುವದೆಂದು ಭಾವ.

ಅತ್ರಭಾಷ್ಯಂ॥ [1] ಏತದೇವವೇದಸ್ಯಾಪೌರುಷೇಯತ್ವಂನಿತ್ಯತ್ವಂ

---

೧ ಈ ವಾಕ್ಯಗಳ ಅರ್ಥವು ಹಿಂದೆಯೇ ವಿವರಿಸಲ್ಪಟ್ಟು ಸಂವಾದಕ್ಕೋಸ್ಕರ ಇಲ್ಲಿ ಪ್ರಮಾಣಗಳು ಬರಿಯಲ್ಪಟ್ಟಿರುವಕಾರಣ ಈ ವಾಕ್ಯಗಳಿಗೆ ಪುನಃ ಅರ್ಥವು ಬರಿಯಲ್ಪಡುವದಿಲ್ಲ, ಸರ್ವತ್ರ ಹೀಗೆಯೇ ಊಹಿಸಲ್ಪಡತಕ್ಕದ್ದು.

ಚ | ಯತ್ಪೂರ್ವಪೂರ್ವಕ್ರಮಜನಿತಸಂಸ್ಕಾರೇಣ ತಥೈವ ಕ್ರಮವಿಶೇಷಸ್ಯ ತಸ್ಯೈವ ಕ್ರಮೇಣೋಚ್ಚಾರ್ಯತ್ವಂ | ತದಸ್ಮತ್ಪಕ್ಷೇಪಿ ಸಮಾನಂ, ಇಯಾಂಸ್ತು ವಿಶೇಷಃ || ಸಂಸ್ಕಾರಾನಪೇಕ್ಷಮೇವಸ್ವಯಮೇವಾನುಸಂಧತ್ತೇಪುರುಷೋತ್ತಮಃ, ಇತಿ,

ಅತ್ರಶ್ರುತಪ್ರಕಾಶಿಕಾ || ಅತೋವೇದನಿತ್ಯತ್ವಂನಾಮಪ್ರತ್ಯುಚ್ಚಾರಣಂಪೂರ್ವಪೂರ್ವಕ್ರಮಸಜಾತೀಯಾನುಪೂರ್ವೀವಿಶಿಷ್ಟತಯೋಚ್ಚಾರ್ಯಮಾಣತ್ವಂ, ಇತಿ,

## ಏಕಾದಶೀ ಋಕ್.

ತಸ್ಮಾದಶ್ವಾಅಜಾಯಂತ | ಏಕೇಚೋಭಯಾದತಃ | ಗಾವೋಹ ಜಜ್ಞಿರೇತಸ್ಮಾತ್ | ತಸ್ಮಾಜ್ಜಾತಾಅಜಾವಯಃ ||

ಅವತರಣಿಕಾ|| ವೇದಸೃಷ್ಟಿಯನ್ನ ಹೇಳಿದ್ದರಿಂದಲೇ ತತ್ಪ್ರತಿಪಾದ್ಯ ಯಜ್ಞಸೃಷ್ಟಿಯೂ ಹೇಳಲ್ಪಟ್ಟಂತೆ ಆದುದೆಂದು ಇನ್ನು ಯಜ್ಞೋಪಯೋಗಿ ಪದಾರ್ಥ ಸೃಷ್ಟಿಯನ್ನ ಹೇಳುವುದು.

ಅರ್ಥ || ತಸ್ಮಾತ್-ಆ ಬ್ರಹ್ಮನದೆಸೆಯಿಂದ, ಅಶ್ವಾಃ-ಕುದುರೆಗಳು, ಅಜಾಯಂತ-ಉತ್ಪನ್ನಗಳಾದವು, ಉಭಯಾದತಃ-ಊರ್ಧ್ವಾಧೋಭಾಗಗಳಲ್ಲಿ ದಂತಗಳುಳ್ಳ, ಯೇ, ಕೇಚ, ವಾನರರಾಸಭಾ (ಕತ್ತೆ) ದಿಗಳು, ಅಜಾಯಂತೆ-ಉತ್ಪನ್ನಗಳಾದವು.

ಅವ|| ಇನ್ನು ಏಕಭಾಗದಲ್ಲಿ ದಂತವುಳ್ಳ ಪ್ರಾಣಿಗಳ ಸೃಷ್ಟಿಯನ್ನ ಹೇಳುವದು.

ಅರ್ಥ|| ತಸ್ಮಾತ್-ಆ ಬ್ರಹ್ಮನದೆಸೆಯಿಂದ, ಗಾವಃ-ಗೋವುಗಳು, ಜಜ್ಞಿರೇ-ಉತ್ಪನ್ನಗಳಾದವು, ಹ-ಶಬ್ದವು ಪಾದಪೂರಣಾರ್ಥವಾದುದು, ತಸ್ಮಾತ್-ಆ ಬ್ರಹ್ಮನದೆಸೆಯಿಂದ, ಅಜಾವಯಃ-ಆಡುಗಳೂ, ಕುರಿಗಳೂ, ಜಾತಾಃ-ಉತ್ಪನ್ನಗಳಾದವು.

ಇಲ್ಲಿ, ಪುನಃಪುನಃ, ತಸ್ಮಾತ್, ಜಜ್ಞಿರೆ, ಜಾತಾಃ, ಅಜಾಯಂತ, ಇತ್ಯಾದಿ ವಾಕ್ಯಗಳನ್ನು ಹೇಳಿರುವದು, ಆಯಾಯಾ ಪದಾರ್ಥೋತ್ಪತ್ತಿ

ಶಾಖೆಗಳ ಅವಾಂತರಭೇದ ಪ್ರದರ್ಶನಕ್ಕಾಗಿ ಎಂದು ತಿಳಿಯುವುದು. ಇವರಲ್ಲಿ, ಋಗ್ವೇದವು, ಗಾಯತ್ರಿಯೂ, ಬ್ರಹ್ಮನ ಪೂರ್ವಮುಖದಿಂದಲೂ, ಸಾಮವೇದವು ಪಶ್ಚಿಮಮುಖದಿಂದಲೂ, ಯಜುರ್ವೇದವು ದಕ್ಷಿಣಮುಖದಿಂದಲೂ. ಅರ್ಥ ಬಲದಂತ, ಅಥರ್ವಣವೇದವು ಉತ್ತರ ಮುಖದಿಂದಲೂ, ಉತ್ಪನ್ನವಾದುದು.

ಅಶ್ವರಾಸಭಾದಿಗಳು ಪಾದಗಳಿಂದಲೂ, ಗೋವುಗಳು ಉದರದಿಂದಲೂ, ಆಡುಗಳು ಮುಖದಿಂದಲೂ ಕುರಿಗಳು ವಕ್ಷಸ್ಥಳಗಳಿಂದಲೂ ಉತ್ಪನ್ನಗಳಾದವು.

...ಥಾತವೈಷ್ಣವೇ| ...ಪುರಾಣೇ, ಪ್ರಥ... ...ಖಂಡೇ, ಪಂಚ... ...ಧ್ಯಾಯೇ||

ಗಾಯತ್ರಂಚರುಚಶ್ಚೈವತ್ರಿವೃತ್ಸೋಮಂ ರಥಂತರಂ | ಅಗ್ನಿಷ್ಟೋಮಂಚಯಜ್ಞಾನಾಂನಿರ್ಮಮೇಪ್ರಥಮಾನ್ಮುಖಾತ್ || ಯಜೂಂಷಿ ತ್ರೈಷ್ಟುಭಂಛಂದಃಸ್ತೋಮಂಪಂಚದಶಂತಥಾ| ಬೃಹತ್ಸಾಮತಥೋಕ್ಥ್ಯಂಚದಕ್ಷಿಣಾದಸೃಜನ್ಮುಖಾತ್||

ಸಾಮಾನಿಜಗತೀಛಂದಃಸ್ತೋಮಂಸಪ್ತದಶಂತಥಾ || ವೈರೂಪಮತಿರಾತ್ರಂಚಪಶ್ಚಿಮಾದಸೃಜನ್ಮುಖಾತ್ | ಏಕವಿಂಶಮಥರ್ವಾಣಂಆಪ್ತೋರ್ಯಾಮಾಣಮೇವಚ | ಅನುಷ್ಟುಭಂಚವೈರಾಜಮುತ್ತರಾದಸೃಜನ್ಮುಖಾತ್ | ಅವಯೋವಕ್ಷಸಶ್ಚಕ್ರೇಮುಖತೋಜಾಸ್ಸೃಷ್ಟವಾನ್ | ಸೃಷ್ಟವಾನುದರಾದ್ಗಾಶ್ಚಪಾರ್ಶ್ವಾಭ್ಯಾಂಚಪ್ರಜಾಪತಿಃ| ಪದ್ಭ್ಯಾಂಚಾಶ್ವಾನ್ಸಮಾತಂಗಾನ್ರಾಸಭಾನ್ಗವಯಾನ್ಮೃಗಾನ್ | ಉಷ್ಟ್ರಾನಶ್ವತರಾಂಶ್ಚೈವನ್ಯಂಕೂನನ್ಯಾಂಶ್ಚಜಾತಯಃ || ಇತಿಚ||

...ಅರ್ಥ|| ತ್ರಿವೃತ್, ಪಂಚದಶ, ಸಪ್ತದಶ, ಏಕವಿಂಶಗಳು, ಸ್ತೋಮಗಳೆಂಬ ಸಾಮಸ್ತೋತ್ರ ವಿಶೇಷಗಳು, ರಥಂತರ, ಬೃಹತ್, ವೈರೂಪ್ಯ

ವೈರಾಜಗಳು ಸಾಮವಿಶೇಷಗಳು, ಅಗ್ನಿಷ್ಟೋಮಾದಿಗಳು ಸೋಮಸ
ಸ್ಥಾನ ವಿಶೇಷಗಳು, ಗಾಯತ್ರವು ಛಂದಸ್ಸು, "ಅನ್ವಾತ್ಸೃಷ್ಟ"

## ದ್ವಾದಶೀಋಕ್.

ಯತ್ಪುರುಷಂವ್ಯದಧುಃ । ಕತಿಧಾವ್ಯಕಲ್ಪಯನ್, ಮುಖಂಕಿಮ
ಸ್ಯಕೌಬಾಹೂ । ಕಾವೂರೂಪಾದಾವುಚ್ಯೇತೇ ॥

ಅವತರಣಿಕಾ॥ ಹೀಗೆಯಜ್ಞಾನುಷ್ಠಾನಸಾಧನ ಪದಾರ್ಥ ಸೃಷ್ಟಿಯ
ನ್ನಹೇಳಿ, ಯಜ್ಞಾನುಷ್ಠಾನವಂ ಮಾಡುವ ಬ್ರಾಹ್ಮಣಾದಿಗಳ ಸೃಷ್ಟಿ
ಯನ್ನು ಹೇಳುವಪಕ್ಕಾಗಿ, ಬ್ರಹ್ಮನ ಏಕೈಕಾವಯವದಿಂದ ಏಕೈಕ
ಣೋತ್ಪತ್ತಿಯು, ಎಂಬ ಅಂಶವನ್ನ ಪ್ರಶ್ನೋತ್ತರ ರೂಪವಾಗಿ ಸ್
ಷ್ಟಪಡಿಸುವದಾಗಿ ಅರ್ಥಾತ್-ಆಯಾಯಾ ವರ್ಣಗಳ ಗುಣ ಭೇ
ವೃತ್ತಿಭೇದಾದಿಗಳನ್ನೂ ಸೂಚಿಸುವದು.

ಅರ್ಥ ॥ ಯತ್-ಯಾವಕಾಲದಲ್ಲಿ, ಪುರುಷಂ-ಚತುರ್ಮುಖನನ್ನು
ವ್ಯದಧುಃ-ಪಶುವನ್ನಾಗಿ ಕಲ್ಪಿಸಿದರೋ, ತತ್-ಆ ಕಾಲದಲ್ಲಿ, ಕತಿಧಾ
ಎಷ್ಟುಪ್ರಕಾರವಾಗಿ, ವ್ಯಕಲ್ಪಯನ್-ಕಲ್ಪಿಸಿದರು.

ಅಥವಾ॥ ಯತ್-ಯಾವಾಗ, ಪುರುಷಂ-ಮನುಷ್ಯನನ್ನು, ವ್ಯದಧುಃ
ಸೃಷ್ಟಿಸಿದನೋ (ಇಲ್ಲಿ ಬಹುವಚನವು ಛಾಂದಸವು) ತತ್-ಆವಾಗ
ಕತಿಧಾ-ಎಷ್ಟುಪ್ರಕಾರವಾಗಿ, ಅಕಲ್ಪಯನ್-ಕಲ್ಪಿಸಿದನು.

ಯಾವ ಯಾವ ಸ್ಥಾನದಿಂದ ಯಾವ ಯಾವ ಪ್ರಕಾರದಿಂದ ಕೂಡಿ
ವರನ್ನ ಸೃಷ್ಟಿಸಿದನೆಂದು ಭಾವ.

ಚತುರ್ಮುಖನ ಏಕಶರೀರ ಭಾಗದಿಂದಲೇ ನಾಲ್ಕುವರ್ಣವೂ ಉ
ತ್ಪನ್ನವಾಗಿರುವ ಪಕ್ಷ ಗುಣಭೇದಗಳು ಕೂಡಲಾರದು ಕಾರಣ ಚತ
ರ್ಮುಖನು ತನ್ನ ಶರೀರವನ್ನ ಎಷ್ಟು ಭಾಗವನ್ನಾಗಿ ಕಲ್ಪಿಸಿದನೆಂ
ಪರಮ ತಾತ್ಪರ್ಯ.

ಅಸ್ಯ-ಈ ಚತುರ್ಮುಖನ, ಮುಖಂ-ಮುಖವು, ಕಿಂ-ಯಾವರೂ
ವಾದುದು, (ಮುಖದಿಂದ ಉತ್ಪನ್ನರಾದವರು ಯಾರೆಂದು ಭಾವ) ಬ

ಹೂ-ಬಾಹುಗಳು, ಕೌ-ಯಾರು (ಇಲ್ಲಿ ದ್ವಿವಚನವು ಛಾಂದಸವು) ಪಾದೌ-ಕಾಲುಗಳು, ಕೌ, ಊರೂ-ತೊಡೆಗಳು, ಕೌ-ಯಾವುಗಳು, (ಬಾಹು, ಊರು, ಪಾದಗಳಿಂದ ಉತ್ಪನ್ನರು ಯಾರೆಂದು ಪ್ರಶ್ನತಾತ್ಪರ್ಯ) ಅಲ್ಲದೇ, ಇಲ್ಲಿ ಉತ್ತರಾನುಗುಣ್ಯವಾಗಿ, ಮನಃಕಿಂ, ಚಕ್ಷುಃಕಿಂ, ಇತ್ಯಾದಿ ಪ್ರಶ್ನಗಳನ್ನೂ ತಿಳಿಯತಕ್ಕದ್ದು.

## ತ್ರಯೋದಶೀಋಕ್

ಬ್ರಾಹ್ಮಣೋಽಸ್ಯಮುಖಮಾಸೀತ್ । ಬಾಹೂರಾಜನ್ಯಃಕೃತಃ।
ಊರೂತದಸ್ಯಯದ್ವೈಶ್ಯಃ । ಪದ್ಭ್ಯಾಗ್ಂಶೂದ್ರೋಽಜಾ
ಯತ ॥

ಅವತರಣಿಕಾ॥ ಪೂರ್ವಪ್ರಶ್ನಗಳಿಗೆ ಉತ್ತರಗಳನ್ನು ಹೇಳುವುದು.

ಅರ್ಥ॥ ಬ್ರಾಹ್ಮಣಃ, ಅಸ್ಯ, ಮುಖಂ, ಆಸೀತ್-ಬ್ರಾಹ್ಮಣನು ಈ ಚತುರ್ಮುಖನ ಮುಖದಿಂದ ಉತ್ಪನ್ನನಾದನು. ರಾಜನ್ಯಃ, ಬಾಹೂ, ಕೃತಃ-ಕ್ಷತ್ರಿಯನು ಬಾಹುವಿನಿಂದ ಉತ್ಪನ್ನನಾದನು.

ವೈಶ್ಯಃ, ಇತಿ, ಯತ್, ತತ್, ಅಸ್ಯ ಊರೂ-ಈ ಚತುರ್ಮುಖನ ತೊಡೆಗಳಿಂದ ವೈಶ್ಯನು ಉತ್ಪನ್ನನಾದನು.

ಪದ್ಭ್ಯಾಂ, ಶೂದ್ರಃ, ಅಜಾಯತ-ಶೂದ್ರನು ಪಾದೋತ್ಪನು.

ತಾತ್ಪರ್ಯ॥ ಇಲ್ಲಿ, ಬ್ರಾಹ್ಮಣನು ಸರ್ವಾವಯವಗಳಲ್ಲಿಯೂ ವುತ್ತಮವಾದ ಮುಖದಿಂದ ಉತ್ಪನ್ನನಾದ ಪ್ರಯುಕ್ತ ಇತರ ವರ್ಣಾಪೇಕ್ಷಯಾ, ಬ್ರಾಹ್ಮಣನಿಗೆ ಉತ್ತಮತ್ವವೂ, ಮುಖವ್ಯಾಪಾರ ಭೂತವಾದ ವೇದಾಧ್ಯಯನಾದಿ ಪ್ರಧಾನತ್ವವೂ, ಮುಖವೀರ್ಯತ್ವವೂ ಸೂಚಿಸಲ್ಪಟ್ಟಿಧೆ.

ಕ್ಷತ್ರಿಯನಿಗೆ, ಬಾಹುಜನಾದ ಪ್ರಯುಕ್ತ ಬ್ರಾಹ್ಮಣಾಪೇಕ್ಷಯಾ ನ್ಯೂನತ್ವವೂ, ಬಾಹು ವ್ಯಾಪಾರ ಭೂತ ಯುದ್ಧಾದಿ ಪ್ರಧಾನತ್ವವೂ, ಬಾಹುವೀರ್ಯತ್ವವೂ, ತೋರಲ್ಪಡುವುದು ವೈಶ್ಯ, ಶೂದ್ರರಲ್ಲಿಯೂ ನ್ಯೂನತ್ವಾದಿಗಳನ್ನ, ಯಥೋಚಿತವಾಗಿ ತಿಳಿಯತಕ್ಕದ್ದು.

## ಚತುರ್ದಶೀಋಕ್.

ಚಂದ್ರಮಾಮನಸೋಜಾತಃ । ಚಕ್ಷೋಃಸೂರ್ಯೋಅಜಾಯತ ।
ಮುಖಾದಿಂದ್ರಶ್ಚಾಗ್ನಿಶ್ಚ । ಪ್ರಾಣಾದ್ವಾಯುರಜಾಯತ ॥

ಅವ॥ ಯಜ್ಞಸಾಧನದ್ರವ್ಯಗಳ ಉತ್ಪತ್ತಿಯನ್ನ ಹೇಳಿ, ಯಜ್ಞಾರಾ
ಧ್ಯ ದೇವತೋತ್ಪತ್ತಿಯನ್ನ ಹೇಳುವರು.

ಅರ್ಥ॥ ಅಸ್ಯ[1]-ಈ ಚತುರ್ಮುಖರೂಪಧರನಾದ ಭಗವಂತನ, ಮನಸಃ-
ಮನಸ್ಸಿನಿಂದ, ಚಂದ್ರಮಾಃ-ಚಂದ್ರನು, ಜಾತಃ-ಉತ್ಪನ್ನನಾದನು.

ಚಕ್ಷೋಃ-ನೇತ್ರದ್ದೆಸೆಯಿಂದ, ಸೂರ್ಯಃ-ಸೂರ್ಯನು, ಅಜಾಯತ-ಉ
ತ್ಪನ್ನನಾದನು, ಇಂದ್ರಶ್ಚ-ಇಂದ್ರನು, ಅಗ್ನಿಶ್ಚ-ಅಗ್ನಿಯೂ, ಮುಖಾ
ತ್-ಮುಖದ್ದೆಸೆಯಿಂದ, ಅಜಾಯೇತಾಂ-ಉತ್ಪನ್ನರಾದರು. ಪ್ರಾಣಾತ್-
ಪ್ರಾಣದ್ದೆಸೆಯಿಂದ, ವಾಯುಃ-ವಾಯುವು, ಅಜಾಯತ-ಉತ್ಪನ್ನನಾ
ದನು

ತಾತ್ಪರ್ಯ॥ ಸರ್ವಭೂತಗಳಿಗೂ ಶುಭವನ್ನಪೇಕ್ಷಿಸುವದರಿಂದ, ಸ್ವಭಾ
ವತಃ-ಅತಿಶೀತಲವಾದ ಭಗವಂತನ ಮನಸ್ಸಿನಿಂದ, ಶೀತಕಾಂತಿಯುಳ್ಳವ
ನಾಗಿಯೂ ಸರ್ವರಿಗೂ ಸುಖವನ್ನುಂಟುಮಾಡುವನಾಗಿಯೂ, ಇರುವ
ಚಂದ್ರನು ಉತ್ಪನ್ನನಾದನು (ಇದು ಉಪಪನ್ನವಾದುದೆಂದು ಭಾವ.)

ಭಗವಂತನ ನೇತ್ರದಿಂದ ಸರ್ವಾರ್ಥ ಪ್ರಕಾಶಕರನಾದ ಸೂರ್ಯನು
ಉತ್ಪನ್ನನಾದನು.

ಶಾಯಮಾನಂಹಿಪ್ರುಷಂಯಂಪಶ್ಯೇನ್ಮಧುಸೂದನಃ । ಸಾತ್ವಿಕ
ಸ್ಸತುವಿಜ್ಞೇಯಃಸವೈಮೋಕ್ಷಾರ್ಥ ಚಿಂತಕಃ ॥

ಎಂಬಂತೆ ಭಗವತ್ಕಟಾಕ್ಷವು ಸತ್ವವಿವರ್ಧನದ್ವಾರಾ ಸರ್ವಾರ್ಥ ಪ್ರಕಾ
ಶಕವಾದದ್ದರಿಂದ, ಅಂತಹ ಕಟಾಕ್ಷ (ನೇತ್ರ) ದಲ್ಲಿ ಉತ್ಪನ್ನನಾದ
ಸೂರ್ಯನಿಗೆ ಸರ್ವಾರ್ಥ ಪ್ರಕಾಶಕತ್ವವು ಉಪಪನ್ನವೆಂದು ಭಾವ.

---

[1] ಪೂರ್ವ (೧೩ನೆ) ಋಕ್ಕಿನಿಂದ ಈ ಪದವನ್ನ (ಅಸ್ಯ) ತೆಗೆದುಕೊಳ್ಳ
ಬೇಕು. ಉತ್ತರತ್ರ ಹೀಗೆಂದೇ ತಿಳಿಯತಕ್ಕದ್ದು.

ಇದಿಪರಮೈಶ್ವರ್ಯೇ, ಎಂಬಂತೆ, ಪರಮೈಶ್ವರ್ಯಶಾಲಿಯಾದ ದೇವತಾ ಸಾರ್ವಭೌಮನಾದ ಶಚೀಪತಿಯೂ, (ಇಂದ್ರನೂ)

ಶು॥ ಅಗ್ನಿಮುಖಾವೈದೇವಾಃ, ಎಂಬಂತೆ ದೇವತೆಗಳಿಗೆ ಮುಖಸ್ಥಾನೀಯನಾದ ಅಗ್ನಿಯೂ ಭಗವನ್ಮುಖದಿಂದ ಉತ್ಪನ್ನರಾದರು.

ಸರ್ವಪ್ರಾಣನಹೇತುವಾದ ಭಗವಂತನ ಪ್ರಾಣದ್ದೆಸೆಯಿಂದ ಸರ್ವಪ್ರಾಣನ ಹೇತುಭೂತನಾದ ವಾಯುವು ಉತ್ಪನ್ನನಾದನು.

## ಪಂಚದಶೀಋಕ್.

ನಾಭ್ಯಾಆಸೀದಂತರಿಕ್ಷಂ । ಶೀರ್ಷ್ಣೋದ್ಯೌಸ್ಸಮವರ್ತತ ।
ಪದ್ಭ್ಯಾಂಭೂಮಿರ್ದಿಶಶ್ಶ್ರೋತ್ರಾತ್ । ತಥಾಲೋಕಾಗ್ಂ ಅಕಲ್ಪಯನ್ ॥

ಅವತರಣಿಕಾ ॥ ಹೀಗೆ, ಉಪಾಸ್ಯದೇವತೆಯನ್ನ ಹೇಳಿ, ಅನಂತರ ಉಪಾಸಕರಿಗೆ ಭೋಗಸ್ಥಾನಗಳಾದ ಅಂತರಿಕ್ಷಾದಿ ಲೋಕಸೃಷ್ಟಿಯು ಹೇಳಲ್ಪಡುವುದು.

ಅರ್ಥ॥ ನಾಭ್ಯಾಃ-ದೇಹಮಧ್ಯಪ್ರದೇಶಭೂತವಾದ, ನಾಭಿಪ್ರದೇಶದ್ದೆಸೆಯಿಂದ, ಅಂತರಿಕ್ಷಂ-ಸೂರ್ಯಾಂಡಗೋಳಗಳಿಗೆ ಮಧ್ಯದೇಶರೂಪವಾದ ಅಂತರಿಕ್ಷಲೋಕವು, ಆಸೀತ್-ಉತ್ಪನ್ನವಾದುದು.

ಶೀರ್ಷ್ಣಃ-ಸರ್ವಾವಯವಗಳಲ್ಲಿ, ಊರ್ಧ್ವಸ್ಥಾನಭೂತವಾದ ಶಿರಸ್ಸಿನದೆಸೆಯಿಂದ, ದ್ಯೌಃ-ದ್ಯುಲೋಕವು, ಇದು ಊರ್ಧ್ವಲೋಕಗಳಿಗೆಲ್ಲಾ ಉಪಲಕ್ಷಣವು. ಸಮವರ್ತತ-ಉತ್ಪನ್ನವಾದುದು.

ಪದ್ಭ್ಯಾಂ-ಚರಣಗಳಿಂದ, ಭೂಮಿಃ-ಭೂಮಂಡಲವು, ಇದು ಅಧೋಲೋಕಗಳಿಗೆಲ್ಲಾ ಉಪಲಕ್ಷಣವು. ಆಸೀತ್-ಆದುದು.

ಶ್ರೋತ್ರಾತ್-ಕರ್ಣದ್ದೆಸೆಯಿಂದ, ದಿಶಃ-ದಿಕ್ಕುಗಳು, ಇದು ಸಪ್ತದ್ವೀಪಗಳಿಗೂ ಉಪಲಕ್ಷಣವು. ಆಸನ್-ಆದವು.

ತಥಾ-ಹಾಗೆ, (ಪೂರ್ವಕಲ್ಪರೀತ್ಯಾ) ಲೋಕಾನ್-ಅಂತರಿಕ್ಷಾದಿ ಚತು

ರ್ದಶ ಲೋಕಗಳನ್ನೂ, ಅಕಲ್ಪಯರ್ತ-ಕಲ್ಪಿಸಿದನು, ಇಲ್ಲಿ ಬಹುವಚನವು. ಕತಿಧಾವ್ಯಕಲ್ಪಯರ್ನ-ಎಂಬ ಪ್ರಶ್ನಾನುರೂಪವಾಗಿರುವುದು.

ಸೂರ್ಯಾಂಡಗೋಳಯೋರ್ಮಧ್ಯೇ ಕೋಟ್ಯಸ್ಯುಃಪಂಚವಿಂಶತಿಃ ॥

ಎಂಬಂತೆ ಅಂತರಿಕ್ಷವನ್ನೂ,

ಶ್ರು॥ ಸೂರ್ಯಾಚಂದ್ರಮಸೌಧಾತಾ ಯಥಾಪೂರ್ವಮಕಲ್ಪಯತ್ ।
ದಿವಂಚಪೃಥಿವೀಂಚಾಂತರಿಕ್ಷಮಥೋಸುವಃ ॥

ತಾತ್ಪರ್ಯ॥ ಇತ್ಯಾದ್ಯುಕ್ತಪ್ರಕಾರ ಪೂರ್ವಕಲ್ಪೀಯಸಂಸ್ಥಾನ ಸಜಾತೀಯಸಂಸ್ಥಾನಾದಿ ವಿಶಿಷ್ಟವಾಗಿಯೇ ಸಕಲವನ್ನೂ ಚತುರ್ಮುಖನು ಸೃಷ್ಟಿಸಿದನೆಂದು ಭಾವ. (೧ ಸಂಸ್ಥಾನಂನಾಮಸ್ವಾಸಾಧಾರಣಂರೂಪಂ)

## ಷೋಡಶೀಋಕ್.

ವೇದಾಹಮೇತಂಪುರುಷಂಮಹಾಂತಂ। ಆದಿತ್ಯವರ್ಣಂತಮಸಸ್ತು ಪಾರೇ ॥ ಸರ್ವಾಣಿರೂಪಾಣಿವಿಚಿತ್ಯಧೀರಃ। ನಾಮಾನಿಕೃತ್ವಾಭಿವದನ್‌ಯದಾಸ್ತೇ ॥

ಅವತಾರಿಕಾ ॥ ಅನಂತರ ಇಂತಹ ಗುಣವಿಶಿಷ್ಟನಾದ ಪರಮಪುರುಷನಾದ ಭಗವಂತನನ್ನ ಶರಣ ಹೊಂದಿದವರಿಗೆ ಪರಮಪುರುಷಪ್ರಾಪ್ತಿ (ಮೋಕ್ಷ) ಯನ್ನೂ, ಭಕ್ತಿ (ವಾ) ಪ್ರಪತ್ತಿರಹಿತರಿಗೆ ತದಭಾವವನ್ನೂ ಹೇಳಿ ನಿಗಮನ (ಉಪಸಂಹಾರ=ಪೂರೈಸುವಿಕೆ) ಮಾಡಲುದ್ದೇಶಿಸಿ, ಉಕ್ತಾ (ಹೇಳಲ್ಪಟ್ಟ) ರ್ಥಗಳಲ್ಲಿ ವಿಶ್ವಾಸದ್ಯೋತನಾರ್ಥವಾಗಿ.

ಅಹಂವೇದ್ಮಿ ಮಹಾತ್ಮಾನಂ ರಾಮಂಸತ್ಯಪರಾಕ್ರಮಂ ।
ವಸಿಷ್ಠೋಪಿಮಹಾತೇಜಾಃಯೇಚೇಮೇತಪಸಿಸ್ಥಿತಾಃ ॥

ಇತ್ಯಾದಿಯೋಪಾದಿಯಲ್ಲಿ ಸ್ವಸಾಕ್ಷಾತ್ಕಾರ (ತನ್ನ ಪ್ರತ್ಯಕ್ಷ) ವಿಷಯತ್ವವನ್ನ ವೇದಪುರುಷನು ಹೇಳುತ್ತಾನೆ.

ಅರ್ಥ ॥ ಅಹಂ-ಭಗವತ್ಸಂಕಲ್ಪದಿಂದ ಸರ್ವಜ್ಞನಾದ ನಾನು,

---

೧ ಘಟಾದಿ ಪದಾರ್ಥಗಳ ರೂಪಲಕ್ಷಣಾದಿಗಳಿಗೆ ಸಮಾನವಾದ ರೂಪಲಕ್ಷಣಾದಿಗಳೊಡನೆ ಎಂದು ಭಾವ. ೨ ಇದು ಭಗವದ್ಭಾಷ್ಯಕಾರೋಕ್ತಿಯು.

ವಿತಂ-ಸರ್ವಜ್ಞನಾಗಿಯೂ, ಸರ್ವಶಕ್ತನಾಗಿಯೂ, ಸರ್ವಜಗದಂತರಾತ್ಮನಾಗಿಯೂ, ಮೋಕ್ಷಪ್ರದನಾಗಿಯೂ, ಉಭಯವಿಭೂತಿ (ಲೀಲಾವಿಭೂತಿ, ನಿತ್ಯವಿಭೂತಿ) ವಿಶಿಷ್ಟನಾಗಿಯೂ ಇರುವ, ಮಹಾಂತಂ-ಅಪರಿಚ್ಛೇದ್ಯಸ್ವರೂಪ, ಗುಣ, ವಿಭೂತಿಕನಾಗಿ ಸರ್ವಸ್ಮಾತ್ಪರನಾದ, ಪುರುಷಂ-ನಾರಾಯಣನನ್ನು, ವೇದ-ತಿಳಿದಿರುವೆನು.

ಅವ॥ ಪರಮಪುರುಷಸ್ವರೂಪವನ್ನು ವಿವರಿಸುವನು. ಆದಿತ್ಯವರ್ಣಂ-ಇತ್ಯಾದಿಗಳಿಂದ.

ಆದಿತ್ಯವರ್ಣಂ[೧], ಧೀರಃ, ಯತ್, ಸರ್ವಾಣಿ, ರೂಪಾಣಿ, ವಿಚಿತ್ಯ, ನಾಮಾನಿ, ಕೃತ್ವಾ, ಅಭಿವದನ್, ತಮಸಃ, ಪಾರೇ, ಆಸ್ತೇ, ಎಂದು ಅನ್ವಯವು. ಇಲ್ಲಿ ನಪುಂಸಕತ್ವವು ಛಾಂದಸವು.

ಆದಿತ್ಯವರ್ಣಂ॥

[೨] ಯ ಏಷೋಂತರಾದಿತ್ಯೇಹಿರಣ್ಮಯಃಪುರುಷಃ।

[೩] ನೀಲತೋಯದಮಧ್ಯಸ್ಥಾವಿದ್ಯುಲ್ಲೇಖೇವಭಾಸ್ವರಾ॥

[೪] ದಿವಿಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ।

ಯದಿಭಾಃಸದೃಶೀಸಾಸ್ಯಾತ್ ಭಾಸಸ್ತಸ್ಯಮಹಾತ್ಮನಃ॥

ಇತ್ಯಾದಿ ಪ್ರಮಾಣೇಭ್ಯಃ, ಮಯೂರ (ನವಿಲು) ಕಂಠಕ್ಕೆ ಸಮಾನವಾದ ಕಾಂತಿಯುಳ್ಳ.

---

೧ ಆದಿತ್ಯವರ್ಣಂಪುರುಷಂ॥ ನೀಲತೋಯದಮಧ್ಯಸ್ಥ ವಿದ್ಯುಲ್ಲೇಖಾಪ್ರಖ್ಯಂ ಅಮಂದಸೌಂದರ್ಯ ಸೌಕುಮಾರ್ಯ ಲಾವಣ್ಯಯೌವನಾದ್ಯಶೇಷ ಮಂಗಳ ಗುಣಾಕರಂ॥ ಇತಿ ಕೂರನಾರಾಯಣೀಯೇ॥

೨ ತಾತ್ಪರ್ಯದಲ್ಲಿ ಈ ವಾಕ್ಯದ ಅರ್ಥವು ಬರೆಯಲ್ಪಡುವದು.

೩ ಮುಮುಕ್ಷೂಪಯೋಗಿ ಸಂಗ್ರಹದಲ್ಲಿ ವಿವರಿಸಲ್ಪಟ್ಟಿದೆ.

೩ ನೀಲತೋಯದ, ಎಂಬ ವಾಕ್ಯದ ಅರ್ಥವು ತಾತ್ಪರ್ಯದಲ್ಲಿ ಬರೆಯಲ್ಪಡುತ್ತೆ.

೪ ದಿವಿಸೂರ್ಯಸಹಸ್ರಸ್ಯ, ಎಂಬ ಶ್ಲೋಕಾರ್ಥವು ಮುಮುಕ್ಷೂಪಯೋಗಿ ಸಂಗ್ರಹದಲ್ಲಿ ವಿವರಿಸಲ್ಪಟ್ಟಿರುತ್ತೆ.

ಧೀರಃ-ಧಿಯಾರಮತಇತಿಧೀರಃ, ಎಂಬಂತೆ ಸಂಕಲ್ಪರೂಪಜ್ಞಾನಮಾತ್ರದಿಂದ ಜಗತ್ಸೃಷ್ಟ್ಯಾದಿಕರ್ತೃವಾದ, ಯತ್-ಯಾವ ಪರಮಪುರುಷನು, ಸರ್ವಾಣಿರೂಪಾಣಿ-ತತ್ತತ್ಕರ್ಮಾನುರೂಪವಾಗಿ ದೇವಮನುಷ್ಯಾದಿ ವಿಚಿತ್ರ ಸಂಸ್ಥಾನಗಳುಳ್ಳ ರೂಪಗಳನ್ನು, (ಶರೀರಗಳನ್ನು) ವಿಚಿತ್ಯ-ಮಾಡಿ, ನಾಮಾನಿ-ತತ್ತತ್ಸಂಸ್ಥಾನ ವಿಶಿಷ್ಟ ವಸ್ತುವಾಚಿಗಳಾ (ಹೇಳುವುದು) ದ ಶಬ್ದಗಳನ್ನು, ಕೃತ್ವಾ-(ಸ್ವಪರ್ಯಂತ=(ಭಗವತ್ಪರ್ಯಂತ)ಗಳನ್ನಾಗಿ) ಮಾಡಿ, ಅಭಿವರ್ದ-ಹೇಳುವನಾಗಿ (ಸಕಲ ಪ್ರಾಣಿಗಳಿಗೂ ಮೋಕ್ಷಪ್ರಾಪ್ತಿ ಪರ್ಯಂತವಾದ ಶ್ರೇಯಸ್ಸನ್ನ ಹೇಳುವನಾಗಿ) ತಮಸಃ-ಮೂಲಪ್ರಕೃತಿಯ, ಪಾರೇ-ಊರ್ಧ್ವದೇಶವಾದ ತ್ರಿಪಾದ್ವಿಭೂತಿಯಲ್ಲಿ, (ವಿರಜಾನದಿಯ ಪಾರದಲ್ಲಿರುವ ವೈಕುಂಠದಲ್ಲಿ) ಆಸ್ತೇ-ಇರುವನೋ, ತಮಹಂವೇದ-ಅವನನ್ನು ತಿಳಿದಿರುವೆನು, ಎಂದು ಪೂರ್ವೇಣಾನ್ವಯವು.

ತಾತ್ಪರ್ಯ॥ ಭಗವದ್ದಿವ್ಯ ಮಂಗಳವಿಗ್ರಹವು, (ಆದಿತ್ಯವರ್ಣಂ)[೧] ಸೂರ್ಯಸಮಾನವರ್ಣವುಳ್ಳದ್ದಾಗಿರುವದು.

(ಮಧ್ಯಸ್ಥನೀಲಮೇಘವಿದ್ಯುಲ್ಲತಾ (ಮಿಂಚು) ಸಮಾನವಾದ ದಿವ್ಯವಿಗ್ರಹವುಳ್ಳ.)

ತಥಾಚಭಾಷ್ಯಂ॥ ನೀಲತೋಯದ—ಭಾಸ್ವರಾ, ನೀಲತೋಯದ ಮಧ್ಯಸ್ಥಾ, ಮಧ್ಯಸ್ಥನೀಲತೋಯದಾ, ವಿದ್ಯುಲ್ಲೇಖಾಯಥಾಪ್ರಕಾಶತೇಆತ್ಮವರ್ಣೇನ, ತೋಯದವರ್ಣೇನಚ, ಏವಂ ಭಾಸ್ವರಾ, ಮಯೂರಗ್ರೀವಾಸದೃಕ್ಷಾ, ಅಭಿಯುಕ್ತಪ್ರಯೋಗಶ್ಚ, ಅತಸೀಪುಷ್ಪಸಂಕಾಶಂ, ಇತಿ.

ಮಧ್ಯಸ್ಥೇತಿನೀಲತೋಯದವಿಶೇಷಣಸ್ಯಪೂರ್ವನಿಪಾತಾಭಾವಃ ಛಾಂದಸಃ, ಇತಿ ರಂಗರಾಮಾನುಜೀಯೇ॥

ಸಂಕಲ್ಪರೂಪಜ್ಞಾನದಿಂದ ಜಗತ್ಸೃಷ್ಟ್ಯಾದಿಗಳನ್ನು ಮಾಡುವನಾಗಿಯೂ ಸರ್ವಾತ್ಮರಿಗೂ ರೂಪ (ಶರೀರ) ನಾಮಗಳನ್ನುಂಟುಮಾಡಿದವನಾಗಿಯೂ ಇರುವ ಪರಮಾತ್ಮನು.

---

೧ ಆದಿತ್ಯವರ್ಣಂ, ಪ್ರಕಾಶಾತ್ಮಾನಂ, ಇತಿಭಟ್ಟಭಾಸ್ಕರಭಾಷ್ಯೇ.

ತಮಿತ್ಯಬ್ದವಾಚ್ಯವಾದ ಪ್ರಕೃತಿಯು ಪಾರದಲ್ಲಿರುವ.

ಶ್ರು॥ "ದೇವಾನಾಂಪೂರಯೋಧ್ಯಾ" ಎಂಬಂತೆ, ಅಯೋಧ್ಯಾಶಬ್ದ ವಾಚ್ಯವಾದ ವೈಕುಂಠಲೋಕದಲ್ಲಿರುವ ಸಹಸ್ರ ಸ್ತಂಭಗಳಿಂದ ರಾಜಿಸುವ ಆನಂದಮಯವೆಂಬ ದಿವ್ಯಾಸ್ಥಾನಮಂಟಪದಲ್ಲಿ.

ನಿರತಿಶಯ ಸೌಗಂಧ್ಯ ಸೌಕುಮಾರ್ಯಾದಿ ವಿಶಿಷ್ಟನಾದ ಅನಂತ, ನೆಂಬ ಸರ್ಪರಾಜನ ಶರೀರವೆಂಬ ಪರ್ಯಂಕದಲ್ಲಿ ಶ್ರೀ ಭೂನೀಳಾದಿಗಳೊಡನೆ ವಿರಾಜಿಸುವನೋ ಅಂತಹ ಪರಮಾತ್ಮನನ್ನ ನಾನು ತಿಳಿದಿರುವೆನೆಂದು ವೇದಪುರುಷನು ಹೇಳುತ್ತಾನೆ.

## ಸಪ್ತದಶೀಋಕ್.

ಧಾತಾಪುರಸ್ತಾದ್ಯಮುದಾಜಹಾರ । ಶಕ್ರಃಪ್ರವಿದ್ವಾನ್ಪ್ರದಿಶಶ್ಚತಸ್ರಃ । ತಮೇವಂವಿದ್ವಾನಮೃತಇಹಭವತಿ । ನಾನ್ಯಃಪಂಥಾ ಅಯನಾಯವಿದ್ಯತೇ ॥

ಅರ್ಥ॥ ಧಾತಾ-ಚತುರ್ಮುಖನು, ಪುರಸ್ತಾತ್-ಪೂರ್ವಕಾಲದಲ್ಲಿ, ಯಂ-ಯಾವ ಪರಮಪುರುಷನನ್ನ, ಉದಾಜಹಾರ-ಉಪದೇಶಿಸಿದನೋ.

ತದ್ಧೈತದ್ಬ್ರಹ್ಮಾಪ್ರಜಾಪತಯಉವಾಚ ಪ್ರಜಾಪತಿರ್ಮನವೇ, ಮನುಃಪ್ರಜಾಭ್ಯಃ ॥

ಎಂಬಂತೆ ಉಪದೇಶಿಸಿದನೋ ಎಂದು ಭಾವ.

ಪ್ರವಿದ್ವಾನ್-ವಾಮದೇವ ಮಹರ್ಷಿಯಿಂದ ತತ್ವೋಪದೇಶವಂ ಹೊಂದಿ, ಪ್ರತರ್ದನಮಹಾರಾಜನಿಗೆ ಬ್ರಹ್ಮವಿದ್ಯೋಪದೇಶವಂ ಮಾಡಿದವನಾದ, ಶಕ್ರಃ-ಶಚೀಪತಿಯಾದ ದೇವೇಂದ್ರನು, ಯಂ, ಉದಾಜಹಾರ-ಯಾವಪರಮಾತ್ಮನನ್ನ ಉಪದೇಶಿಸಿದನೋ.

ಪ್ರದಿಶಶ್ಚತಸ್ರಃ-ಪ್ರಧಾನಭೂತವಾದ ಚತುರ್ದಿಕ್ಕುಗಳು (ಅಂತಹ

೧ ಪ್ರದಿಶಶ್ಚತಸ್ರಃ=ಪ್ರಧಾನವಾದ ನಾಲ್ಕುದಿಕ್ಕುಗಳನ್ನು (ನಾಲ್ಕುದಿಕ್ಕಿನಲ್ಲಿ ವಾಸಮಾಡುವರುಗಳನ್ನು) ಪ್ರವಿದ್ವಾನ್-ತಿಳಿದಿರುವ, ಶಕ್ರಃ-ಇಂದ್ರನು, ಯಂ-ಯಾವವನನ್ನು, ಉದಾಜಹಾರ-ಪ್ರಖ್ಯಾತಿ ಪಡಿಸಿದನೋ, ಎಂದು ಭಟ್ಟಭಾಸ್ಕರ ಭಾಷ್ಯದಲ್ಲಿದೆ.

ದಿಗುಪಲಕ್ಷಿತರಾದ ಏಕತ, ದ್ವಿತ, ತ್ರಿತ, ಸನಕ, ಸನಂದನ, ವಾಲ್ಮೀಕಿ, ಪರಾಶರ, ಪಾರಾಶರ್ಯ, (ವ್ಯಾಸ) ಶುಕ, ಶೌನಕರೇ ಮೊದಲಾದ ಮಹಾನುಭಾವರುಗಳು)

ಯಂ, ಉದಾಜಹ್ರುಃ-ಯಾವಪರಮಾತ್ಮನನ್ನ ಉಪದೇಶಿಸಿದರೋ, ತಂ, ಅಹಂ, ವೇದ, ಇತಿ, ಪೂರ್ವೇಣಾನ್ವಯಃ.

ಮೂ॥ ತಮೇವಂವಿದ್ವಾನಮೃತಇಹಭವತಿ ॥

ತಂ-ಉಕ್ತರೀತ್ಯಾ, ಪರತ್ವ ಸೌಲಭ್ಯಾದಿ ಗುಣವಿಶಿಷ್ಟನಾದ ಪರಮ ಪುರುಷನನ್ನ, ಏವಂ-ಉಕ್ತರೀತಿಯಿಂದ ಜಗತ್ಕಾರಣನು, (ಆದಿತ್ಯವರ್ಣ ದಿವ್ಯ ವಿಗ್ರಹಾದಿ ವಿಶಿಷ್ಟನು ಇತ್ಯಾದಿರೀತ್ಯಾ) ವಿದ್ವಾನ್-ಉಪಾಸನ ಮಾಡಿದವನು, ಅಥವಾ ಶರಣಹೊಂದಿದವನು. (ಅಧಿಕಾರಾನುಗುಣವಾಗಿ, ಭಕ್ತಿ ಪ್ರಪತ್ತಿನಿಷ್ಠರಾದವರೆಂದು ಭಾವ.)

ಇಹ-ಈಲೋಕದಲ್ಲಿಯೇನೆ, ಅಮೃತೋಭವತಿ-ಕೃತಕೃತ್ಯನಾದ ಪ್ರಯುಕ್ತ ಮುಕ್ತತುಲ್ಯ (ಸಮಾನ) ನಾಗುವನು. (ಬ್ರಹ್ಮವಿದ್ಯಾನಿಷ್ಠನಿಗೆ ಬ್ರಹ್ಮಸಾಕ್ಷಾತ್ಕಾರದೊಡನೆ ಬ್ರಹ್ಮಾನುಭವವಿರುವ ಪ್ರಯುಕ್ತ ಮುಕ್ತನೆಂಬುವುದು ಉಪಚಾರವೆಂದು ಭಾವ.)

ತಾತ್ಪರ್ಯ॥ ತಮೇವಂವಿದ್ವಾನ್, ಎಂಬ ಸ್ಥಳದಲ್ಲಿ, ಈ ವಿದ್ವಾನ್, ಎಂಬ ಶಬ್ದವು, ಉಪಾಸನ (ಭಕ್ತಿಯೋಗ) ಪರವಾಗಿಯೂ, ಪ್ರಪದನಪರವಾಗಿಯೂ ಇರುವದು.

ಅತನಿಮ, ಶ್ರೀಭಾಷ್ಯಕಾರರು, ವೇದಾರ್ಥಸಂಗ್ರಹದಲ್ಲಿ ಭಗವತ್ಪ್ರಪತ್ತಿಯನ್ನವಿನಾ ಮೋಕ್ಷಪ್ರಾಪ್ತಿಯಿಲ್ಲವೆಂದೂ, ಶ್ರೀಭಾಷ್ಯದಲ್ಲಿ, ಭಗವಂತನನ್ನ ಸ್ವಾಧೀನಪಡಿಸಿಕೊಳ್ಳಬೇಕಾದರೆ ಅವನ ಶರಣಾಗತಿಯೇ ಮುಖ್ಯವಾದುದೆಂದೂ, ಅಪ್ಪಣೆ ಕೊಡಿಸಿರುತ್ತಾರೆ.

ಶ್ರುತಪ್ರಕಾಶಿಕಾಚಾರ್ಯರವರು, ತಾತ್ಪರ್ಯದೀಪಿಕೆಯಲ್ಲಿ, ವಿದ್ವಾನ್, ಎಂಬ ಪದವು, ಭಕ್ತಿಪ್ರಪತ್ತಿ ಉಭಯಸಾಧಾರಣವಾದುದು ಎಂದು ಅಪ್ಪಣೆ ಕೊಡಿಸಿರುತ್ತಾರೆ.

ನಿಗಮಾಂತಗುರುಗಳು (ದೇಶಿಕರು) ಪ್ರಪನ್ನನಿಗೆವಿನಾ ಭಗವಂತನು ಇತರರಿಗೆ ಮೋಕ್ಷಸಾಮ್ರಾಜ್ಯವನ್ನ ಕೊಡಲಾರನು ಎಂದು ಅಪ್ಪಣೆ ಕೊಡಿಸಿ ಇರುತ್ತಾರೆ. ತಥಾಚ,

ವೇದಾರ್ಥಸಂಗ್ರಹೇ॥ ದೈವೀಹ್ಯೇಷಾಗುಣಮಯೀಮಮಮಾಯಾ ದುರತ್ಯಯಾ । ಮಾಮೇವಯೇಪ್ರಪದ್ಯಂತೇ ಮಾಯಾಮೇ ತಾಂತರಂತಿತೇ ॥

ಇತಿ॥ ತಸ್ಯೈತಸ್ಯಾತ್ಮನಃ ಕರ್ಮಕೃತ ವಿಚಿತ್ರಗುಣಮಯ ಪ್ರಕೃತಿಸಂಸರ್ಗರೂಪಾತ್‌ಸಂಸಾರಾನ್ಮೋಕ್ಷಃ ॥

ಭಗವತ್ಪ್ರಪತ್ತಿಮಂತರೇಣನೋಪಪದ್ಯತೇ, ಇತ್ಯುಕ್ತಂಭವತಿ.

ನಾನ್ಯಃಪಂಥಾಅಯನಾಯವಿದ್ಯತೇ, ಇತ್ಯಾದಿಭಿಃ ಶ್ರುತಿಭಿಶ್ಚ, ಇತಿ.

ಶ್ರೀಭಾಷ್ಯೇಚ, ತಸ್ಯಚವಶೀಕರಣಂ, ತಚ್ಛರಣಾಗತಿರೇವ, ಇತಿ.

ವೇದಾರ್ಥಸಂಗ್ರಹವ್ಯಾಖ್ಯಾಯಾಂ ತಾತ್ಪರ್ಯದೀಪಿಕಾಯಾಂ, ವ್ಯಾಸಾರ್ಯಾಃ॥ ಪ್ರಪತ್ತಿಮಂತರೇಣಮೋಕ್ಷಾಸಿದ್ಧೌಪ್ರಮಾಣಮಾಹ, ದೈವೀ ಇತಿ, ಶ್ರುತಿಮಾಹ, ನಾನ್ಯಃಇತಿ, ಕಥಂ, ತಮೇವಂವಿದ್ವಾನ್, ಇತ್ಯಾದಿವಾಕ್ಯಾನಾಂ ಪ್ರಪತ್ತಿಮಂತರೇಣ ಮೋಕ್ಷಾನುಪ್ರಪತ್ತಿಪರತ್ವಂ, ಉಚ್ಯತೇ, ತಮೇವಂವಿದ್ವಾನ್, ಇತ್ಯಾದಿವಾಕ್ಯಾನಾಂ ಉಪಾಸನವಿಧಿಪರತ್ವಾತ್, ಉಪಾಸನಸ್ಯಚ ಸ್ವನಿಷ್ಪತ್ತ್ಯರ್ಥಂ ಪ್ರಪತ್ತಿನಾಪೇಕ್ಷತ್ವಾಚ್ಚ ಉಕ್ತಾರ್ಥಃಫಲಿತಃ। ಯದ್ವಾ, ವಿದ್ವಾನ್, ಇತಿವೇದನಾವಾಚಿಕಶಬ್ದಃ ಉಪಾಸನ, ಪ್ರಪದನ ಸಾಧಾರಣ ಇತಿಭಾವಃ, ಇತಿ.

ಮೂ॥ ನಾನ್ಯಃಪಂಥಾಅಯನಾಯವಿದ್ಯತೇ ॥

ಅರ್ಥ॥ ಅಯನಾಯ-ಭಗವತ್ಪ್ರಾಪ್ತಿ (ಮೋಕ್ಷ)ಗೆ, ಅನ್ಯಃಪಂಥಾಃ-ಮಾರ್ಗಾಂತರವು (ಉಪಾಯಾಂತರವೆಂದು ಭಾವ) ನವಿದ್ಯತೇ-ಇಲ್ಲವು.

---

೧ ಅಯನಾಯ, ಗಮನಾಯ, ಸಂಸಾರಮುಕ್ತ್ಯಪವರ್ಗಂಗಂತುಂ ...ನಾಮೇವಮಾರ್ಗಃ ॥ ನತ್ವೇತದತಿ‌ಜ್ಞಾನಾದ್ವಿದ್ಯತೇ ಅನ್ಯಃಪಂಥಾವಿದ್ಯತೇ, ಇತಿ ...ಭಾಷ್ಯಕಾರಮಿಶ್ರಾಃ.

ತಾತ್ಪರ್ಯ॥ ಈಯತೆ-ಇತ್ಯಯಃನಂ, ಎಂಬ ವ್ಯುತ್ಪತ್ತಿಯಪ್ರಕಾರ ಅ ಯನ ಶಬ್ದವು ಪ್ರಾಪ್ಯ-(ಹೊಂದತಕ್ಕ ಮೋಕ್ಷ) ಪರವಾಗಿರುವದು.

ತಥಾಚ॥ ಪ್ರಕೃತಿ ಸಂಸರ್ಗ ನಿವೃತ್ತಿಪೂರ್ವಕವಾಗಿ ವೈಕುಂಠದಲ್ಲಿ ಭಗವತ್ಪ್ರಾಪ್ತಿಯು ಭಗವತ್ಪ್ರಪತ್ತಿಯನ್ನ ವಿನಾ ಕೂಡಲಾರದು.

ಭಕ್ತ್ಯಾದಿ ಸಾಧನಾಂತರ ನಿಷ್ಠರಿಗೂ ಕೂಡಾ, ತನ್ನಿಷ್ಪತ್ತಿಯು ಪ್ರ ಪತ್ತಿಯನ್ನ ವಿನಾ ಕೂಡಲಾರದ ಪ್ರಯುಕ್ತ, ಸರ್ವಥಾ ಪ್ರಪತ್ತಿಯೇ ಭಗವತ್ಪ್ರಾಪ್ತಿಸಾಧಕವೆಂದು ಭಾವ.

> ಭರದ್ವಾಜಸಂಹಿತಾಯಾಂ॥ ಅನೇನೈವಹಿಕವರ್ಮದ್ಯಾಃಯೋಗಾ
> ಸ್ಸಿದ್ಧ್ಯಂತಿಯೋಗಿನಾಂ॥ಇತಿ॥ ಅನೇನ, ಪ್ರಪನೇನ, ಪ್ರಪನ್ನಾ
> ದನ್ಯೇಷಾಂನದಿಶತಿಮುಕುಂದೋನಿಜಪದಂ ॥

ಇತ್ಯಾಚಾರ್ಯಾಃ॥ ಇದರ ಅರ್ಥವು ಹಿಂದೆಯೆ ಬರಿಯಲ್ಪಟ್ಟಿರುವುದು.

## ಅಷ್ಟಾದಶೀಋಕ್.

> ಯಜ್ಞೇನಯಜ್ಞಮಯಜಂತದೇವಾಃ । ತಾನಿಧರ್ಮಾಣಿಪ್ರಥ
> ಮಾನ್ಯಾಸನ್ । ತೇಹನಾಕಂಮಹಿಮಾನಸ್ಸಚಂತೆ । ಯತ್ರ
> ಪೂರ್ವೇಸಾಧ್ಯಾಸ್ಸಂತಿದೇವಾಃ॥

ಅವತರಣಿಕಾ॥ ಅನಂತರ, ಇಂತಹ ಯಜ್ಞಾನುಷ್ಠಾನ ಮಾಡುವರುಗಳ ನ್ನೂ, ಅಂತಹವರಿಗೆ ಪರಮಪುರುಷಾರ್ಥ ಪ್ರಾಪ್ತಿಯನ್ನೂ ಹೇಳಿ ನಿಗ ಮನ ಮಾಡುವದು.

ಅರ್ಥ॥ ದೇವಾಃ-ಮುಮುಕ್ಷು (ಮೋಕ್ಷಾಪೇಕ್ಷೆಯುಳ್ಳವರು) ಗಳು, ಯಜ್ಞೇನ-ಮಾನಸಯಜ್ಞ (ಆತ್ಮಸಮರ್ಪಣ ರೂಪಯಜ್ಞ) ದಿಂದ, ಯಜ್ಞಂ-ಭಗವಂತನನ್ನು, ಅಯಜಂತ-ಆರಾಧನ ಮಾಡಿದರು.

ಅವತರಣಿಕಾ॥ ಈ ಅನುಷ್ಠಾನವೇ ಸಮಂಜಸವಾದ ಅನಾದಿ ಧರ್ಮ ವೆಂದು ಹೇಳುವದು.

> ತಾನಿಧರ್ಮಾಣಿಪ್ರಥಮಾನ್ಯಾಸನ್, ಇತಿ.

ಇಲ್ಲಿ, ಲಿಂಗವಚನಗಳ ವ್ಯತ್ಯಾಸವು ಛಾಂದಸವಾಗಿರುವುದು.

ಅರ್ಥ ॥ ತಾನಿಧರ್ಮಾಣಿ॥ ಆ ಧರ್ಮವೇ, ಪ್ರಥಮಾನಿ, ಆರ್ಸ ಪ್ರಧಾನವಾಗಿ ಇತ್ತು. (ಕಲ್ಪಾಂತರದಲ್ಲಿಯೂ ಈ ಆತ್ಮ ಸಮರ್ಪಣ ರೂಪ ಧರ್ಮವೇ ಸರ್ವ ಪ್ರಧಾನವಾದುದು ಎಂದು ಭಾವ).

ಅವತರಣಿಕಾ ॥ ಇನ್ನು, ಇಂತಹ ಪ್ರವದನ ರೂಪ ಯಾಗವನ್ನನುಷ್ಠಿಸಿದವರಿಗೆ ಫಲವನ್ನ ಹೇಳುವುದು. ತೇಹನಾಕಂ+ದೇವಾಃ ಇತಿ.

ಯತ್ರ, ಪೂರ್ವೇ, ಸಾಧ್ಯಾಃ, ದೇವಾಃ; ಸಂತಿ, ತಂ, ನಾಕಂ, ತೇ, ಮಹಿಮಾನಃ, ಸಚಂತೇ. ಇತ್ಯನ್ವಯಃ.

ಅರ್ಥ ॥ ಯತ್ರ, ಯಾವವೈಕುಂಠದಲ್ಲಿ, ಪೂರ್ವೇ, ಪುರಾತನರಾದ, ಸಾಧ್ಯಾಃ, ದೇವಾಃ, ಅನಂತ, ಗರುಡರೇ ಮೊದಲಾದ ನಿತ್ಯ ಸೂರಿಗಳು, ಸಂತಿ-ಇರುವರೋ, ತಂ ನಾಕಂ-ಆ ವೈಕುಂಠವನ್ನು, ತೇ-ಆ ಆತ್ಮ ಸಮರ್ಪಣರೂಪ ಯಜ್ಞಾನುಷ್ಠಾತೃಗಳು, ಮಹಿಮಾನಃ-ಅರ್ಚಿರಾದ್ಯಾತಿ ವಾಹಕಗಣಗಳಿಂದ ಪೂಜ್ಯಮಾನರಾಗಿ, ಸಚಂತೆ-ಹೊಂದುವರು (ನಿತ್ಯ ಸೂರಿಗೋಷ್ಠಿಯಲ್ಲಿ ಏಕೀಭವಿಸುವರು).

ಗೀತಾ ॥ ದ್ವೌಭೂತಸರ್ಗೌಲೋಕೇಸ್ಮಿನ್ದೈವಆಸುರಏವಚ ।
ದೈವೀಸಂಪದ್ವಿಮೋಕ್ಷಾಯನಿಬಂಧಾಯಾಸುರೀಮತಾ ॥

ತಾತ್ಪರ್ಯ ॥ ಎಂಬಂತೆ ಮುಮುಕ್ಷುಗಳು ದೇವಸರ್ಗ (ಸೃಷ್ಟಿ) ತಃ ಪಾತಿಗಳಾದ ಪ್ರಯುಕ್ತ.

ದೇವಶಬ್ದ ವಾಚ್ಯರಾದ, ಮೋಕ್ಷಾರ್ಥಿಗಳು, ಪರಮಪುರುಷೋದ್ದೇಶ್ಯಕವಾಗಿಯೂ, ಪ್ರಣವ (ಓಂ) ಕರಣಕವಾಗಿಯೂ ಇರುವ.

ಶ್ರು ॥ ಅಹಮೇವಾಹಂ ಮಾಂ ಜುಹೋಮಿ ಸ್ವಾಹಾ । ಇದಮಹಂ ಮಾಂ ಅಮೃತಯೋನೌ ಸೂರ್ಯೇ ಜ್ಯೋತಿಷಿ ಜುಹೋಮಿ ಸ್ವಾಹಾ.

"ಓಮಿತ್ಯಾತ್ಮಾನಂ ಯುಂಜೀತ" ಇತ್ಯಾದ್ಯುಕ್ತ ಪ್ರಕಾರವಾ ಆತ್ಮ ಸಮರ್ಪಣರೂಪ ಮಾನಸ ಯಜ್ಞದಿಂದ

ಶ್ರು || ಯಜ್ಞೋವೈ ವಿಷ್ಣುಃ, ಎಂಬಂತೆ, ಯಜ್ಞಶಬ್ದ ವಾಚ್ಯನಾದ ಪರಮಾತ್ಮನನ್ನ ಕುರಿತು ಯಾಗವನ್ನ (ಪಪದನವನ್ನ) ಮಾಡಿದರು.

ಈ ಧರ್ಮವೇ, (ಈ ಆತ್ಮ ಸಮರ್ಪಣ ರೂಪ ಮಾನಸಯಜ್ಞವೇ).

ಶ್ರು || ತಸ್ಮಾನ್ನ್ಯಾಸಮೇಷಾಂ ತಪಸಾಮತಿರಿಕ್ತಮಾಹುಃ.
ಎಂಬಂತೆ ಪರಮ ಧರ್ಮವು.

ಇಂತಹ ಆತ್ಮ ಸಮರ್ಪಣರೂಪ ಯಜ್ಞಾನುಷ್ಠಾತೃಗಳು ಕಂ-ಸುಖಂ-ಅಕಂ-ದುಃಖಂ, ತನ್ನವಿದ್ಯತೆ, ಯತ್ರ ತನ್ನಾಕಂ. ಎಂಬವ್ಯುತ್ಪತ್ತಿಯ ಪ್ರಕಾರವಾಗಿಯೂ,

ಮತ್ತು, ನಾಕೊಂಬರೇರಮಾಸ್ವರ್ಗೇ ಪರಮ

ವ್ಯೋಮ್ನಿಚಸ್ಮೃತಃ|| ಎಂಬ ನಿಘಂಟುಪ್ರಕಾರವಾಗಿಯೂ (ಯೋಗರೂಢಿಗಳಿಂದ ಸಹಾ) ನಿತ್ಯ ನಿರತಿಶಯಾನಂದಾಸ್ಪದವಾಗಿ ನಾಕ ಶಬ್ದ ವಾಚ್ಯವಾದವೈಕುಂಠಲೋಕವನ್ನ ಅರ್ಚಿರಾದ್ಯಾತಿವಾಹಕರಿಂದ ಪೂಜಿಸಲ್ಪಟ್ಟವರಾಗಿ ಹೊಂದಿ.

ಶ್ರು || ತದ್ವಿಪ್ರಾಸೋ ವಿಪನ್ಯವೋಜಾಗೃವಾಂಸಃ ಸಮಿಂಧತೆ, ವಿಷ್ಣೋರ್ಯತ್ಪರಮಂ ಪದಂ.

ಎಂಬಂತೆ (ವಿಪ್ರಾಸಃ, ಮೇಧಾವಿಗಳಾಗಿಯೂ ಜಾಗೃವಾಂಸಃ ಸರ್ವದಾ ಅಸ್ಖಲಿತಜ್ಞಾನವುಳ್ಳವರಾಗಿಯೂ ಇರುವ ನಿತ್ಯಸೂರಿಗಳು ವಿಷ್ಣೋಃ ಯತ್-ಪರಮಂಪದಂ, ತತ್, ವಿಪನ್ಯವಃ. ಪನ-ಪಣ ಸ್ತುತಿವ್ಯವಹಾರಯೋಃ, ಎಂಬಂತೆ ಪರಮಧಾಮವಂ ಸ್ತೋತ್ರಮಾಡುವರಾಗಿ, ಸಮಿಂಧತೆ-ಪ್ರಕಾಶಿಸುವರೋ)

ಸರ್ವದಾ ಭಗವತ್ಸ್ತೋತ್ರ ಪರಾಯಣರಾಗಿಯೂ, ಸರ್ವದ

---

೧ ಈ ಅತಿ ವಾಹಿಕರ ಸ್ವಭಾವಾದಿಗಳು ಮುಮುಕ್ಷೂಪಾಯ ಸಂಗ್ರಹದ ವಿವರಿಸಲ್ಪಡುವುದು.

ಅಜ್ಞಾನಗಂಧ ಶೂನ್ಯರಾಗಿಯೂ ಇರುವ ಅನಂತ ಗರುಡಾದಿ ನಿತ್ಯ ಸೂರಿಗಳೊಡನೆ ಏಕೀಭವಿಸಿ ಭಗವದನುಭವವಂ ಮಾಡುವರು.

ತದೇವಂ ॥ ಸಹಸ್ರಶೀರ್ಷಾ ಪುರುಷಃ ॥ ಇತ್ಯಾರಭ್ಯ, ಯತ್ರ ಪೂರ್ವೇ ಸಾಧ್ಯಾಸ್ಸಂತಿದೇವಾಃ. ಇತ್ಯಂತವಾಕ್ಯಗಳಿಂದ ॥ ಅಪರಿಚ್ಛಿನ್ನ ಜ್ಞಾನಶಕ್ತ್ಯಾದಿಗಳುಳ್ಳವನಾಗಿಯೂ, ಸಕಲಜಗತ್ ಸೃಷ್ಟಿಸ್ಥಿತಿಸಂಹಾರಕಾರಣ ಭೂತನಾಗಿಯೂ ಪರಮದಯಾಳುವಾಗಿಯೂ ಇರುವ ಪರಮಪುರುಷನನ್ನ ಶರಣ ಹೊಂದಿದವರು, ಪರಮಪದ, ಪರಮವ್ಯೋಮ ಇತ್ಯಾದಿ ಶಬ್ದ ವಾಚ್ಯವಾದ ವೈಕುಂಠವನ್ನ ಹೊಂದಿ ನಿತ್ಯ ಸೂರಿಗಳೊಡನೆ ಏಕೀಭವಿಸಿ ಪರಂಬ್ರಹ್ಮಾನುಭವದಿಂದ ಆನಂದ ಪಡುವರು, ಎಂಬ ಪರಮತಾತ್ಪರ್ಯವು ಹೇಳಲ್ಪಟ್ಟಿರುವ ಕಾರಣ ಈ ಪುರುಷ ಸೂಕ್ತವು ಅತ್ಯಾವಶ್ಯಕವಾಗಿ ಸರ್ವರಿಂದಲೂ ಅಧ್ಯಯನ ಮಾಡಲ್ಪಡತಕ್ಕದ್ದು.

## ಅಥ ಉಪನಿಷತ್ಸಮಾಪನ ಮಂತ್ರಾನುವಾಕಃ.

ತಸ್ಯೈವಂ ವಿದುಷೋಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾಪ
ತ್ನೀ ಶರೀರಮಿಧ್ಮಮುರೋವೇದಿರ್ಲೋಮಾನಿ ಬರ್ಹಿರ್ವೇದ
ಶ್ಶಿಖಾಹೃದಯಂಯೂಪಃ ಕಾಮ ಆಜ್ಯಂ ಮನ್ಯುಃ ಪಶುಸ್ತ
ಪೋಗ್ನಿಶ್ಶಮಯಿತಾ ದಕ್ಷಿಣಾವಾಕ್ಹೋತಾಪ್ರಾಣ ಉದ್ಗಾ
ತಾಚಕ್ಷುರಧ್ವರ್ಯುರ್ಮನೋಬ್ರಹ್ಮಾ ಶ್ರೋತ್ರಮಗ್ನೀದ್ಯಾವ
ದ್ಧ್ರಿಯತೆಸಾದೀಕ್ಷಾಯದಶ್ನಾತಿ ಯತ್ಪಿಬತಿತದಸ್ಯ ಸೋಮ
ಪಾನಂಯದ್ರಮತೆತದುಪಸದೋಯತ್ಸಂಚ ರತ್ಯುಪವಿಶತ್ಯು
ತ್ತಿಷ್ಠತೇಚ ಸಪ್ರವರ್ಗ್ಯೋಯನ್ಮುಖಂತದಾ ಹವನೀಯೋ

ಯದಸ್ಯ ವಿಜ್ಞಾನಂತಜ್ಜುಹೋತಿ ಯತ್ಸಾಯಂ ಪ್ರಾತರತ್ತಿ ತ

ತ್ಸಮಿಥೋಯತ್ಸಾಯಂಪ್ರಾತರ್ಮಧ್ಯಂ ದಿನಂಚೆತಾನಿಸವ

ನಾನಿಯೇ ಅಹೋರಾತ್ರೇತೇದರ್ಶಪೂರ್ಣಮಾಸೌ ಯೇರ್ಧ

ಮಾಸಾಶ್ಚಮಾಸಾಶ್ಚತೇ ಚಾತುರ್ಮಾಸ್ಯಾನಿಯ ಋತವಸ್ತೇ

ಪಶುಬಂಧಾಃ ಯೇ ಸಂವತ್ಸರಾಶ್ಚ ಪರಿವತ್ಸರಾಶ್ಚತೇ। ಹರ್ಗ

ಣಾಃ ಸರ್ವವೇದಸಂವಾ ಏತತ್ಸತ್ರಂಯನ್ಮರಣಂತದ ವಭೃಥ

ಏತದ್ವೈ ಜರಾಮರ್ಯ ಮಗ್ನಿಹೋತ್ರಂ (ಸತ್ರಂ) ಯ ಏವಂ

ವಿದ್ವಾನುದಗಯನೇಪ್ರಮೀಯತೆ ದೇವಾನಾಮೇವಮಹಿಮಾ

ನಂಗತ್ವಾ ॥ ದಿತ್ಯಸ್ಯಸಾಯುಜ್ಯಂಗಚ್ಛತ್ಯಥಯೋದಕ್ಷಿಣೇ

ಪ್ರಮೀಯತೆ ಪಿತೃಣಾಮೇವ ಮಹಿಮಾನಂಗತ್ವಾ ಚಂದ್ರಮ

ಸಸ್ಸಾಯುಜ್ಯಂಗಚ್ಛತ್ಯೈತೌವೈಸೂರ್ಯಾ ಚಂದ್ರಮಸೋರ್ಮ

ಹಿಮಾನೌಬ್ರಾಹ್ಮಣೋ ವಿದ್ವಾನಭಿಜಯತಿ ತಸ್ಮಾದ್ಬ್ರಹ್ಮ

ಣೋಮಹಿಮಾ ನಮಾಪ್ನೋತಿತಸ್ಮಾದ್ಬ್ರಹ್ಮಣೋ ಮಹಿ

ಮಾನಮಿತ್ಯುಪನಿಷತ್ ॥

ಅವತರಣಿಕಾ ॥ ಮಹಾಮಹಿಮೆಯುಳ್ಳ ನ್ಯಾಸ (ಪ್ರಪತ್ತಿ) ವೆಂಬ ಪರಮಧರ್ಮದ ಸ್ವರೂಪ ಸ್ವಭಾವವನ್ನು ಯಾವವನು ತಿಳಿತಿರುವನೋ, ಅಂತಹವನೊಡನೆ ಯಾವವನು ಯೇನಕೇನಾಪಿ ಪ್ರಕಾರದಿಂದ ಸಂಬಂಧವುಳ್ಳವನೋ ಅವನು ತಾನುಮಾತ್ರ ಕೇವಲ ಕೃತಾರ್ಥನಲ್ಲವು, ತತ್ಸಂಬಂಧಿಗಳೂಕೂಡಾ ಸರ್ವಥಾ ಕೃತಕೃತ್ಯರು ಎಂದು ತೋರಿಸುವದು. ತಸ್ಯೈವಂ ಇತ್ಯಾದಿ.

ಅರ್ಥ ತಾತ್ಪರ್ಯ ॥ ಪೂರ್ವೋಕ್ತರೀತ್ಯಾ (ಪೂರ್ವಾನುವಾಕಗಳಲ್ಲಿ ಹೇಳಿರುವ ಪ್ರಕಾರ) ನ್ಯಾಸವಿದ್ಯೆಯುಂ ತಿಳಿದವನ ಸ್ವರೂಪ. ಸ್ಥಿತಿ, ಪ್ರವೃತ್ತ್ಯಾದಿಗಳೆಲ್ಲವೂ, ಸರ್ವ ರಕ್ಷಕಯಾಗ ರೂಪವಾದುದು ಎಂದು ಉಪದೇಶಿಸುವದು.

ಇಂತಹ ಪ್ರಪನ್ನನಿಂದ ಸರ್ವದಾ ಅನುಷ್ಠಿಸಲ್ಪಡುವ ಯಜ್ಞಾ (ಈ ಯಜ್ಞಾಂಗಗಳು ಮುಂದೆ ಸ್ಪಷ್ಟವಾಗುವವು) ಕ್ಕೆ ಆತ್ಮನೇ (ನ್ಯಾಸವಿದ್ಯಾ ವಿವೇಕದಿಂದ ಸಮರ್ಪಿಸಲ್ಪಡುವ ಜೀವಾತ್ಮನೆ) ಯಜಮಾನನು. ಇತರ ಜ್ಯೋತಿಷ್ಟೋಮಾದಿ ಯಾಗಗಳಂತೆ ಈ ಯಜ್ಞಾಕ್ಕೆ ಯಜಮಾನ ಧರ್ಮಗಳು ಬೇರೆ ಇಲ್ಲವೆಂದು ಭಾವ ಉತ್ತರತ್ರಸರ್ವತ್ರ ಹೀಗೆಯೇ ಊಹಿಸತಕ್ಕದ್ದು.

(ಶ್ರದ್ಧಾ). ಪ್ರಾಪ್ತಿತ್ವರೆಯೇ (ಪತ್ನೀ) ಸಹಧರ್ಮ ಚಾರಿಣಿಯು (ಶರೀರ ಮಿಧ್ಮ), ತತ್ ಜ್ಞಾನ ದೀಪ್ತವಾದ ಪ್ರಯುಕ್ತ ಶರೀರವೇ ಇಧ್ಮವು, (ಉರೋವೇದಿಃ), ಇಷ್ಟಾರ್ಥಗಳನ್ನ ಧರಿಸಲು ಅರ್ಹವಾದ ಪ್ರಯುಕ್ತ ವಕ್ಷಸ ಳವೇ ವೇದಿಕೆಯು. (ಲೋಮಾನಿಬರ್ಹಿಃ), ವಕ್ಷಸ್ಥಳದಲ್ಲಿ ಹಾಸಲ್ಪಟ್ಟಿರುವ ಪ್ರಯುಕ್ತ ಲೋಮಗಳೇ ಆಸ್ತರಣದರ್ಭಗಳು. (ವೇದಶ್ಶಿಖಾ) ಅವನ ಶಿಖೆಯೇ ವೇದವು, ಇಲ್ಲಿ ಶಿಖೆಯು ವೇದತ್ವೇನ ರೂಪಿಸಲ್ಪಟ್ಟಿರುವದಾದಕಾರಣ, ವಿದ್ವದವಿದ್ವತ್ಸಾಧಾರಣವಾಗಿ ಇಚ್ಛೆಯಿಂದ ಶಿಖಾ ಪರಿತ್ಯಾಗವು ಕೂಡದೆಂದು ತೋರಿಸ

---

೧ ಭಟ್ಟ ಭಾಸ್ಕರೀಯೆ ॥ ತದೀಯಾ, ಶಿಖಾ, ವೇದಃ, ಬದ್ಧತ್ವಾತ್ । ತತ ಏವ ಜ್ಞಾನಯತೆ ಶಿಖಾದಿಕಮಸ್ಯ ಅತ್ಯಾಜ್ಯಮಿತಿ.

ಲ್ಪಟ್ಟಿಗೆ, (ಕಟ್ಟಲ್ಪಟ್ಟ ದರ್ಭ ಮುಷ್ಟಿಯು, ವೇದ, ಶಬ್ದಾರ್ಥವೆಂ
ದು ಹೇಳುವರು). (ಹೃದಯಂಯೂಪಃ) ಹೃದಯವೇ ಯೂಪಸ್ತಂಭ
ವು (ಮುಂದೆ ಬಾಯಲ್ಪಡುವ ಕೋಪವೆಂಬ ಯಜ್ಞ ಪಶುವನ್ನ ಕಟ್ಟು
ವಕಂಭವು).

(ಕಾಮ ಆಜ್ಯಂ) ಪುರುಷೋತ್ತಮ ಭೋಗಕ್ಕೆ ಉಪಸ್ತರಣಾ
ರವಾದಪ್ರಯುಕ್ತ, ಭಗವದನುಭವೇಚ್ಛೆಯೇ ಆಜ್ಯವು. (ಮನ್ಯುಃ
ಪಶುಃ) ಛೇದಿಸಲು (ಬಿಡಲು) ಅರ್ಹವಾದ ಕೋಪವೇ ಯಜ್ಞ ಪಶು
ವು, (ತಪೋಽಗ್ನಿಃ) ಜ್ಞಾನವೇ ಅಗ್ನಿಯು. (ಶಮಯಿತಾದಕ್ಷಿಣಾ)
ಶಾಂತಿಯೇ (ಸರ್ವವೂ ಭಗವತ್ಸಂಬಂಧವಾದ ಕಾರಣ ಮಿತ್ರ, ಶತ್ರು,
ಎಂಬುವದಿಲ್ಲ ಎಂಬ ಅನುಸಂಧಾನವು) ದ್ರವ್ಯ ಸಂಪತ್ತು.

ತದುಕ್ತಂವಿಷ್ಣು ಪುರಾಣೇ } ಸರ್ವ ಭೂತಾತ್ಮಕೇತಾತ ಜಗನ್ನಾಥೇ ಜಗ
ನ್ಮಯೇ। ಪರಮಾತ್ಮನಿ ಗೋವಿಂದೇ ಮಿತ್ರಾಮಿ
ತ್ರಕಥಾಕುತಃ ॥ ಇತಿ

(ವಾಕ್ಹೋತಾ) ಅವನ ವಾಕ್ಯವೇ (ಭಗವದ್ಗುಣ ಕಥನವೇ)
ಹೋತೃ (ಋತ್ವಿಗ್ಭೇದ-ಉತ್ತರತ್ರ ಹೀಗೆಯೇ ತಿಳಿಯತಕ್ಕದ್ದು) ವು.
(ಪ್ರಾಣಃ ಉದ್ಗಾತಾ) ಅವನ ಪ್ರಾಣವೇ ಸಾಮಗಾನವಂ ಮಾಡುವ ಉ
ದ್ಗಾತೃವು. (ಚಕ್ಷುರಧ್ವರ್ಯುಃ) ಚಕ್ಷುಃ ಚಕ್ಷಣಂ, ಜ್ಞಾನ ವಿಶೇ
ವೇ ಅಧ್ವರ್ಯುವು. (ಮನೋಬ್ರಹ್ಮಾ) ಸರ್ವ ಸಾಕ್ಷಿಕವಾಗಿಯೂ ಸ
ರ್ವಪ್ರವೃತ್ತಿ ಹೇತುವಾಗಿಯೂ ಇರುವ ಮನಸ್ಸೇ ಬ್ರಹ್ಮಾ. (ಶ್ರೋ
ತ್ರಮಗ್ನೀತ್) ಭಗವದ್ಗುಣ ಶ್ರವಣ ಮಾಡುವ ಶ್ರೋತ್ರವೇ, ಆಗ್ನಿಧ್ರ
ನು. (ಯಾವದ್ಧ್ರಿಯತೆ ಸಾದೀಕ್ಷಾ) ಯಾವತ್ಪರ್ಯಂತ ಜೀವಿಸುವನೋ
ತಾವತ್ಕಾಲವೂ, ಆತ್ಮಾತ್ಮೀಯಪದಾರ್ಥಗಳನ್ನು ಭಗವದಾರಾಧನಸಾಧನಗ
ಳನ್ನಾಗಿ ತಿಳಿಯುವ ಪ್ರಯುಕ್ತ ಯಾವಜ್ಜೀವವೂ ದೀಕ್ಷೆಯೆಂದು ಭಾವ
(ಯದಶ್ನಾತಿ, ಯತ್ಪಿಬತಿ ತದಸ್ಯ ಸೋಮಪಾನಂ), ಶರೀರಧಾರಣಾ
ವಾಗಿ ಭುಂಜಿಸುವ ಅನ್ನೋದಕಾದಿಗಳೇ ಸೋಮಪಾನವು. (ಯದ್ರ
ಮತೆ ತದುಪಸದಃ) ಭಗವಧ್ಯಾನಾದಿ ಸಂತೋಷವೇ ಉಪಸತ್ತುಗಳು

(ಯತ್ಸಂಚರತ್ಯುಪವಿಶತ್ಯುತ್ತಿಷ್ಠತೇಚ ಸಪ್ರವರ್ಗ್ಯಃ) ಪುಷ್ಪಾದ್ಯಾಹರಣಕ್ಕಾಗಿ ಮಾಡಲ್ಪಡುವ, ಸಂಚಾರವೂ, ಆರಾಧನಾರ್ಥವಾಗಿ ಭಗವತ್ಸಮೀಪದಲ್ಲಿ ಕೂತುಕೊಳ್ಳುವಿಕೆಯೂ ಪ್ರದಕ್ಷಿಣ ನಮಸ್ಕಾರಾದಿಗಳಿಗಾಗಿ ಏಳುವಿಕೆಯೂ, ಈ ಯಜ್ಞಕ್ಕೆ ಪ್ರವರ್ಗ್ಯವು (ಯನ್ಮುಖಂತದಾಹವನೀಯಃ) ಇವನ ಆಸ್ಯವೇ ಹವಿಃ ಪ್ರಕ್ಷೇಪಸ್ಥಾನವಾದ ಆಹವನೀಯಾಗ್ನಿಯು. (ಯದಸ್ಯ ವಿಜ್ಞಾನಂ ತಜ್ಜುಹೋತಿ) ಪ್ರಪನ್ನ ರಕ್ಷಕತ್ವವಿಷಯ, ವಿಶಿಷ್ಟಜ್ಞಾನವೇ, ಪರಮಪಾವನ ಪರಮರಕ್ಷಕವಾದ ಪ್ರಯುಕ್ತ ಹೋಮವು.

(ಯತ್ಸಾಯಂ ಪ್ರಾತರತ್ತಿ ತತ್ಸಮಿಧಃ) ಈ ಪ್ರಪನ್ನನ ಸಾಯಂಪ್ರಾತಃ ಭೋಜನವೇ ಸಮಿತ್ತುಗಳು, (ಯತ್ಸಾಯಂಪ್ರಾತರ್ಮಧ್ಯಂ ದಿನಂಚತಾನಿಸವನಾನಿ) ಈ ಪ್ರಪನ್ನನಿಂದಕಾಲತ್ರಯಗಳಲ್ಲಿ ಏನೇನು ಅನುಷ್ಠಿಸಲ್ಪಡುವದೊ ಅವೇ, ಪ್ರಾತಸ್ಸವನ, ಮಾಧ್ಯಂದಿನ ಸವನ. ಸಾಯಂ ಸವನ (ಗಳು) (ಯೇ ಅಹೋರಾತ್ರೇತೇ ದರ್ಶಪೂರ್ಣಮಾಸೌ) ಅಹೋ ರಾತ್ರಗಳೇ ದರ್ಶ ಪೂರ್ಣಮಾಸ ಸ್ಥಾನೀಯಗಳು. (ಯೇ ಅರ್ಧಮಾಸಾಶ್ಚತೇ ಚಾತುರ್ಮಾಸ್ಯಾನಿ) ಅರ್ಧ ಮಾಸಾದಿಗಳಲ್ಲಿ ಇವನಿಂದ ಮಾಡಲ್ಪಡುವದೆಲ್ಲಾ ಅಕ್ಷಯ ಫಲ ಪ್ರದಗಳಾದ ಪ್ರಯುಕ್ತ ಅವುಗಳೇ ಚಾತುರ್ಮಾಸ್ಯಗಳು. (ಯ ಋತವಸ್ತೇ ಪಶುಬಂಧಾಃ) ವಸಂತಾದಿಗಳಲ್ಲಿ ಇವನಿಂದ ಯಾವುಗಳು ಅನುಷ್ಠಿಸಲ್ಪಡುವವೋ ಅವುಗಳೇ ಪಶುಬಂಧಗಳು. (ಯೇ ಸಂವತ್ಸರಾಶ್ಚ ಪರಿವತ್ಸರಾಶ್ಚತೇ ಹರ್ಗಣಾಃ) ಸಂವತ್ಸರಾದಿಗಳೇ, ದ್ವಿರಾತ್ರ, ತ್ರಿರಾತ್ರ, ಚತೂರಾತ್ರಾದಿಗಳು. (ಸರ್ವವೇದಸಂವಾ ಏತತ್ಸತ್ರಂ) ಈ ಪ್ರಪನ್ನನ, ಸಕಲವಾದ ಧನವೂ, ಶರೀರ, ಶರೀರಾವಯವಗಳೂ, ಸತ್ರಸ್ಥಾನೀಯಗಳು (ಯನ್ಮರಣಂತದವಭೃಥಃ) ಈ ಯಜಮಾನನ ಶರೀರ ಪರಿತ್ಯಾಗವೇನ ಸಮಾಪ್ತಿ ರೂಪವಾದ ಪ್ರಯುಕ್ತ ಅವಭೃಥೇಷ್ಟಿಯು.

(ಏತದ್ವೈಜರಾಮರ್ಯಮಗ್ನಿಹೋತ್ರಂ (ಸತ್ರಂ) ಕಿಂ ಬಹುನಾ ಈ ಆತ್ಮ ಯಾಜೆಯಾದ ಪ್ರಪನ್ನನ ಜೀವನವೇ. ವಯೋಹಾನಿ (ಮರಣ) ಯಿಂದ ಪೂರ್ತಿಮಾಡಲ್ಪಡುವದಾದ ಪ್ರಯುಕ್ತ, ಮರಣಾಂತವಾದ ಅಗ್ನಿಹೋತ್ರವು. (ಸದಾರಕ್ಷಕವಾದ ಪ್ರಯುಕ್ತ ಸತ್ರವು)

ಅವತರಣಿಕಾ ॥ ಇನ್ನು ಇದನ್ನ ತಿಳಿಯುವದರಲ್ಲಿ ಫಲವಂ ಹೇಳುವದು.

(ಯ ಏವಂ ವಿದ್ವಾನ್ + ಇತ್ಯುಪನಿಷತ್.)

ಈ ಆತ್ಮಯಾಗವಂ ತಿಳಿದವನಿಗ ಉತ್ತರಾಯಣದಲ್ಲಿ ಮರಣವಾದರೆ, ದೇವಲೋಕಪ್ರಾಪ್ತಿ ಪೂರ್ವಕವಾದ ಸೂರ್ಯ ಸಾಯುಜ್ಯ ಪೂರ್ವಕವಾಗಿ ಪರಬ್ರಹ್ಮ ಪ್ರಾಪ್ತಿ ಯಾಗುವದು. ದಕ್ಷಿಣಾಯನ ಮರಣದಲ್ಲಿ ಪಿತೃಲೋಕಪ್ರಾಪ್ತಿ ಪೂರ್ವಕವಾದ ಚಂದ್ರ ಸಾಯುಜ್ಯಪ್ರಾಪ್ತಿ ಪೂರ್ವಕವಾಗಿ ಬ್ರಹ್ಮಪ್ರಾಪ್ತಿಯಾಗುವುದು.

ಇಲ್ಲಿ ವಾಕ್ಯಾವೃತ್ತಿಯು ಸಮಾಪ್ತಿ ದ್ಯೋತನ ಮಾಡುವವು. (ಇತ್ಯುಪನಿಷತ್) ಇದುರಹಸ್ಯಾರ್ಥವು.

ಈ ಅನುವಾಕವಲ್ಲಿ ಅನೇಕ ಪದಗಳು, ಯಜ್ಞಪ್ರಕರಣ ಘಟಿತ ಪದಗಳಾದ ಪ್ರಯುಕ್ತ ಭಾಷಾಂತರದಲ್ಲಿ ಬರಿಯಲು ಸಾಧ್ಯವಲ್ಲದಕಾರಣ ಅದೇ ಪದಗಳನ್ನೇ ಕನ್ನಡ ಪ್ರತ್ಯಯಗಳೊಡನೆ ಉಪಯೋಗಿಸಿರುತ್ತಾಗಿ ಚೋದ್ಯಾವಕಾಶವಿಲ್ಲವೆಂದು ತಿಳಿಯುವದು.

---

೧ ದೇವಲೋಕವನ್ನ ಪ್ರಥಮತಃ ಹೊಂದಿ ಅನಂತರ ಸೂರ್ಯ ಸಾಯುಜ್ಯಗಮನ ಪೂರ್ವಕವಾಗಿ ಮೋಕ್ಷವನ್ನು ಹೊಂದುತ್ತಾನೆ, ಉತ್ತರತ್ರವೂ ಹೀಗೆಯೇ ಊಹಿಸುವದು.

## ಅಥ ಸಂವಿಭಾಗವಿಧಿಃ.

ಸ್ಮೃತಿರತ್ನಾಕರೆ ವ್ಯಾಸಃ॥ { ಪಂಚಸೂನಾಗೃಹಸ್ಥಸ್ಯವರ್ತಂತೆಹರಹಸ್ಸದಾ। ಖಂಡನೀಪೇಷಣೀಚುಲ್ಲಿಉದಕುಂಭಉಪಸ್ಕರಃ॥ ಏತಾಸಾಂಪಾವನಾರ್ಥಂತುಪಂಚಯಜ್ಞಾಃಪ್ರ ಕೀರ್ತಿತಾಃ ॥ ಸಾಯಂಪ್ರಾತರ್ವೈಶ್ವದೇವಃಕ ರ್ತವ್ಯೋಬಲಿಕರ್ಮಚ॥

ಆಶ್ವಲಾಯನಃ॥ ಪಂಚಯಜ್ಞಾನ್ಪರಿತ್ಯಜ್ಯಯೋಭುಂಕ್ತೇತುದ್ವಿಜಾ ಧಮಃ । ಸಭವೇದ್ವಿಷ್ಟ್ವರಾಹಶ್ಚಶ್ವಾನಯೋನೌಚ ಜಾಯತೆ ॥ಇತಿ-

ತಾತ್ಪರ್ಯ ॥ ಗೃಹಸ್ಥ (ಗೃಹಸ್ಥಾಶ್ರಮದಲ್ಲಿರುವರು) ನು ಪ್ರತ್ಯಹವ ಲ್ಲಿಯೂ, ಖಂಡನೀ, (ಕುಡುಗೋಲು ಕತ್ತಿ ಮೊದಲಾದ ಕಾಯಿಪಲ್ಯಗಳ ನ್ನು ಕತ್ತರಿಸುವ ಆಯುಧಗಳು) ಪೇಷಣೀ, (ಅರೆಯುವಕಲ್ಲು, ಬರಳು ಕಲ್ಲು ಮೊದಲಾದವುಗಳು) ಚುಲ್ಲೀ, (ಪಾಕಸ್ಥಾನ, ಒಲೆಯುಂಟಾದು ದು) ಉದಕುಂಭ, (ನೀರುತುಂಬುವತಪ್ಪಲೆ ಮೊದಲಾದವುಗಳು) ಉಪ ಸ್ಕರ, (ಮೊರಪೆ ಮೊದಲಾದ ಕೇರುವ ಸಾಮಗ್ರಿಗಳು) ಗಳ ದ್ವಾರಾ ಮಾತಲ್ಪಡುವ, ಕ್ರಿಮಿಕೀಟ ಮೊದಲಾದ ಪ್ರಾಣಿಗಳ ನಾಶದಿಂದ ಉತ್ಪ ನ್ನವಾಗುವ ಪಾಪಪರಿಹಾರಾರ್ಥವಾಗಿ ಪಂಚ ಮಹಾಯಜ್ಞಗಳನ್ನು ಅನುಷ್ಠಿಸತಕ್ಕದ್ದು.

ಸಾಯಂಪ್ರಾತಃ ವೈಶ್ವದೇವವನ್ನೂ, ಬಲಿಕರ್ಮವನ್ನೂ ಮಾಡತ ಕ್ಕದ್ದು.

ಪಂಚಮಹಾಯಜ್ಞಾನುಷ್ಠಾನವಿಹೀನನಾಗಿ ಯಾವನು ಭುಂಜಿಸುವ ನೋ? ಅಂಥ ದ್ವಿಜಾಧಮನು, ವಿಷ್ಟ್ವರಾಹ (ಗ್ರಾಮಸೂಕರ) ವಾಗಿ ಶ್ವಾನ ಯೋನಿಯಲ್ಲಿ ಜನಿಸುವನು.

[illegible] ॥ ಸ್ವಭಾರ್ಯಾ[illegible]ವಿಧಿ[illegible] ಗೃಹಃ । [illegible] ರೇತ್ ॥

ಶಾತಾತಪಃ ॥ ಲೌಕಿಕೇವೈದಿಕೇವಾಪಿ । ವೈಶ್ವದೇವಸ್ತುಕರ್ತ
ವ್ಯಃಪಂಚಸೂನಾಪನುತ್ತಯೆ ॥ ಸೂನಾಪನುತ್ತಯಇತ್ಯಾನು
ಷಂಗಿಕಂಫಲಂ । ಪ್ರತ್ಯವಾಯನಿವೃತ್ತಿರೇವಪ್ರಧಾನತ್ವಾದಿತಿ
ಸಾರ್ವಭೌಮಃ ॥

ತಾತ್ಪರ್ಯ॥ (ಭಾರ್‍ಯಾವಿಶಿಷ್ಟನಾಗಿ) ಗೃಹಸ್ಥಾಶ್ರಮಿಯು, ಶಾಸ್ತ್ರೋ
ಕ್ತಪ್ರಕಾರ ಸ್ನಾನಾಚಮನಾದಿಗಳಿಂದ ಶುದ್ಧನಾಗಿ ಅಗ್ನಿಶಾಲಾಪ್ರವೇಶ
ವಂಮಾಡಿ, ಔಪಾಸನಾಗ್ನಿಯಲ್ಲಿಯೋ, ಲೌಕಿಕಾಗ್ನಿಯಲ್ಲಿಯೋ ವೈಶ್ವ
ದೇವವಂ ಅನುಷ್ಟಿಸತಕ್ಕದ್ದು.

ಇದಕ್ಕೆ ಪ್ರತ್ಯವಾಯ ನಿವೃತ್ತಿಯೆ ಪ್ರಧಾನಫಲವು, ಪಂಚಸೂನಾ
ದೋಷನಾಶವು ಆನುಷಂಗಿಕ (ಅಂತರಾಳಿಕ) ಫಲವೆಂದುಭಾವ.

ಈ ವೈಶ್ವದೇವವು ಸಾಯಂಪ್ರಾತಃ ಅನುಷ್ಟಿಸಲ್ಪಡತಕ್ಕದ್ದು.

ತಥಾಚ, ಆಶ್ವಲಾಯನಃ } ಅಥಸಾಯಂಪ್ರಾತಸ್ಸಿದ್ಧಸ್ಯ ಹವಿಷ್ಯಸ್ಯಜುಹು
ಯಾತ್॥ ಇತಿ

ಪಂಚಮಹಾಯಜ್ಞಗಳುಮಾತ್ರ ಹಗಲಿನಲ್ಲಿಯೇ ಅನುಷ್ಟಿಸಲ್ಪಡತ
ಕ್ಕವುಗಳು.

ತಥಾಚಸ್ಮೃತಿ ॥ ಸಾಯಂಪ್ರಾತಸ್ತುಕುರ್ವೀತವೈಶ್ವದೇವಂಯಥಾ
ವಿಧಿ । ಮಹತಃಪಂಚಯಜ್ಞಾಸ್ತುದಿವೈವೇತ್ಯಾಹಗೌತಮಃ॥
ಇತಿ॥

ಈ ವೈಶ್ವದೇವವು ಪುರುಷಾರ್ಥವಾದುದೇವಿನಾ ಅನ್ನ ಸಂಸ್ಕಾರಾ
ರ್ಥವಾದುದಲ್ಲವು ಕಾರಣ ಪ್ರತಿಪಾಕದಲ್ಲಿಯೂ ಅನುಷ್ಟಿಸತಕ್ಕದ್ದಲ್ಲಾ.

ತಥಾಚವಿಜ್ಞಾನೇಶ್ವರಃ } ಇಹಕೇಚಿತ್‍ವೈಶ್ವದೇವಾಖ್ಯಸ್ಯಕರ್ಮಣಃಪುರು
ಷಾರ್ಥತ್ವಂ ಅನ್ನಸಂಸ್ಕಾರಕರ್ಮತ್ವಂಚೇತ್ಯೂಚಿರೇ
ಇತ್ಯಾರಭ್ಯ, ಪುರುಷಾರ್ಥತ್ವಮೇವ, ಯುಕ್ತಂ, ಪು
ರುಷಾರ್ಥತ್ವೇ, ವೈಶ್ವದೇವಾಖ್ಯಂ ಕರ್ಮನಪ್ರತಿ
ಪಾಕಮಾವರ್ತನೀಯಂ ॥ ಇತಿ

ಸ್ಮೃತಿರತ್ನಾಕರೆ, । ಕರ್ಮಸ್ಮಾರ್ತಂ ವಿವಾಹಾಗ್ನೌ ಕುರ್ವೀತಪ್ರತ್ಯ ಯಾಜ್ಞವಲ್ಕ್ಯ । ಸಂಗ್ರಹಃ ॥

ತಾತ್ಪರ್ಯ ॥ ಇಲ್ಲಿ ಕುರ್ವೀತ, ಎಂದು ಆತ್ಮನೇ ಪದವಿರುವಪ್ರಯು ಕ್ತ ಯಾವಫಲವು ಭಾರ್ಯಾಪತಿಗಳಿಬ್ಬರನ್ನೂ ಹೊಂದುವದೋ ಅಥವಾ ಒಬ್ಬರನ್ನ ಹೊಂದುವದೊ ಅಂತಹ ಶಾಂತಿಕ ಪೌಷ್ಟಿಕ ಕರ್ಮಗಳನ್ನ ವಿವಾಹಾಗ್ನಿಯಲ್ಲಿಯೇ ಮಾಡತಕ್ಕದ್ದು, ಹೀಗೆ ವೈಶ್ವದೇವ ಪಂಚಮಹಾ ಯಜ್ಞಗಳನ್ನ ವಿವಾಹಾಗ್ನಿಯಲ್ಲಿಯೇ ಅನುಷ್ಟಿಸಬೇಕಾದ್ದರಿಂದಲೂ,

ಪಾಣಿಗ್ರಹಣಾದ್ಧಿಗೃಹಮೇಧಿನೋವ್ರತಂ । ಸಭಾರ್ಯಸ್ತ್ರಿಯುಚಿ ಸ್ನಾತಃ ॥

ಇತ್ಯಾದಿವಾಕ್ಯಗಳಿಂದ ಸಪತ್ನೀಕನಿಗೇನೆ ಅಧಿಕಾರಹೇಳಲ್ಪಟ್ಟಿರುವ ದರಿಂದಲೂ,

ಶ್ರು॥ ಅಯಜ್ಞೋವಾಏಷಯೋಽಪತ್ನೀಕಃ,

ಎಂಬ ಶ್ರುತಿಯಿಂದಲೂ ಅಪತ್ನೀಕನಿಗೆ ಅಧಿಕಾರವಿಲ್ಲವು.

ಅನ್ನಾಭಾವಪಕ್ಷದಲ್ಲಿ ಫಲ, ಮೂಲ, ಉದಕಾದಿಗಳಿಂದಲಾದರೂ ಈ ವೈಶ್ವದೇವವನ್ನ ಅನುಷ್ಠಿಸತಕ್ಕದ್ದು.

ತಥಾಚತುರ್ವಿಂಶತಿಮತೆ. } ಅಭಾವೇಯೇನಕೇನಾಪಿಫಲಶಾಕೋದಕಾದಿಭಿಃ । ಪಯೋದಧಿಘೃತೈಃಕುರ್ಯಾದ್ವೈಶ್ವದೇವಂಸ್ತ್ರುವೇಣತು । ಹಸ್ತೇನಾನ್ನಾದಿಭಿಃಕುರ್ಯಾತ್ಅದ್ಭಿರಂಜಲಿನಾಜಲೇ ॥ಇತಿ

ತಾತ್ಪರ್ಯ॥ ಕ್ಷೀರಾದಿ ದ್ರವಪದಾರ್ಥಗಳಿಂದ ವೈಶ್ವದೇವಮಾಡತಕ್ಕ ಸಂದರ್ಭದಲ್ಲಿ ಸ್ರುವದಿಂದಲೂ, ಅನ್ನಾದಿಗಳಿಂದಲೂ ಮಾಡತಕ್ಕ ಸಂದರ್ಭದಲ್ಲಿ ಹಸ್ತದಿಂದಲೂ, ಉದಕದಿಂದಮಾಡತಕ್ಕ ಸಂದರ್ಭದಲ್ಲಿ ಅಂಜಲಿಯಿಂ (ಬೊಗಸೆ) ದ ಉದಕದಲ್ಲಿಯೂ ಅನುಷ್ಠಿಸತಕ್ಕದ್ದು.

ಈ ವೈಶ್ವದೇವವನ್ನ ಔಪಾಸನಾಗ್ನಿಯಲ್ಲಿಯೋ, ಪಚನಾಗ್ನಿಯಲ್ಲಿ ಯೋ ಅನುಷ್ಟಿಸಬಹುದು.

ಆಪಸ್ತಂಬಃ ॥ ಔಪಾಸನೇಪಚನೇವಾ ॥ಇತಿ

ಸಾರ್ವಭೌಮಃ ॥ ಇದಂ ವೈಶ್ವದೇವಕರ್ಮ ವ್ಯಜನಾಕಾರವೇವ ಅಗ್ನಿಸಮಾಪೇಶಿಷ್ಟೈರನುಷ್ಠೀಯತೆ ॥ಇತಿ

ಅತ್ರಕೇಚಿತ್ ॥ ಸಂಧ್ಯಾಸ್ನಾನಂಜಪೋಹೋಮಃದೇವತಾನಾಂಚಪೂಜನಂ । ಆತಿಥ್ಯಂವೈಶ್ವದೈವಂಚಷಟ್ಕರ್ಮಾಣಿದಿನೇದಿನೇ ॥

ಇತ್ಯಾದಿಪ್ರಮಾಣರೀತ್ಯಾ ವೈಶ್ವದೇವಾನುಷ್ಠಾನುಷ್ಠಾನವು ಕರ್ತವ್ಯವಾಗಿದ್ದಾಗ್ಯೂ, ಈ ವೈಶ್ವದೇವವು ಶುದ್ಧಯಾಜಿ (ಪರವೈಕಾಂತಿ) ಗಳಿಂದ ಭಗವದಸಾಧಾರಣ ಮಂತ್ರಗಳಿಂದಲೇ ಅನುಷ್ಠಿಸಲ್ಪಡತಕ್ಕದ್ದಾಗಿರುವದು.

ತಥಾಚಭರದ್ವಾಜಸಂಹಿತಾಯಾಂ. { ಇಜ್ಯಾಮಂತ್ರಜಪಧ್ಯಾನ ಸ್ನಾನದಾನವ್ರತಾದಿಕಂ । ವಿಶುದ್ಧಮೇವಕರ್ತವ್ಯಂಅನನ್ಯೈಸ್ಸರ್ವವಿಮಿಶ್ರಿತಂ । ಸದ್ಬ್ರಹ್ಮವಾಸುದೇವಾದ್ಯೈರ್ವಿವಿಕ್ತೈರ್ಯತ್ರನಾಮಭಿಃ । ಪ್ರೋಚ್ಯತೇಭಗವಾನ್ವಿಷ್ಣುಃತದ್ವಿಶುದ್ಧಮುದಾಹೃತಂ । ಯತ್ರಾವಿವಿಕ್ತೈರ್ಶಬ್ದೈಸ್ತು ಪ್ರೋಚ್ಯತೆ ಪುರುಷೋತ್ತಮಃ । ದೇವಾದೀನಾಮಶುದ್ಧಾನಾಂವ್ಯಾಮಿಶ್ರಂತತ್ಪ್ರಚಕ್ಷತೆ । ಇಜ್ಯಂಚನಿಯತಂಚೇತಿನಿತ್ಯನೈಮಿತ್ತಿಕಂದ್ವಿಧಾ ॥ ಇಜ್ಯಂ ವೈಕಲ್ಪಿಕಂ, ಇತಿ ವ್ಯಾಖ್ಯಾಯಾಂ ॥

ತಾತ್ಪರ್ಯ ॥ ಸ್ನಾನಪೂಜಾದಿ ಸಕಲಕರ್ಮಗಳನ್ನು ಭಗವದಸಾಧಾರಣ ಮಂತ್ರಗಳಿಂದಲೇ ಅನುಷ್ಠಿಸಬೇಕು.

ವಿಕಲ್ಪವಾದ ನಿತ್ಯನೈಮಿತ್ತಿಕ ಕರ್ಮಗಳಲ್ಲಿಯೂ, ವಿಕಲ್ಪವನ್ನು ಪರಿತ್ಯಾಗವಾಡಿ ನಿಯತಕರ್ಮಾನುಷ್ಠಾನವನ್ನೇ ಮಾಡತಕ್ಕದ್ದು, ಎಂದು ಭಾವ.

ತಥಾಚ॥ಸೂತ್ರಕಾರರುಗಳಿಂದ ವೈಶ್ವದೇವದಲ್ಲಿ ಸಾಧಾರಣ ಮಂತ್ರಗಳೇ ಹೇಳಲ್ಪಟ್ಟಿದ್ದಾಗ್ಯೂ,

ಅಧಿಕರಣಸಾರಾವಳ್ಯಾಂ ತ್ರಯ್ಯಂತಗುರುಭಿಃ } ವೇದೋಪಸ್ಕಾರಿವಿಷ್ಣುಸ್ಮೃತಿಪದವಿತಥೇ ಪಂಚರಾತ್ರಾಖ್ಯತಂತ್ರೇ ತತ್ವಂತ್ರಯ್ಯಂತ ಸಿದ್ಧಂಚರಣಮಪಿಸಮಂಗ್ರಹ್ಯಭೇದಾದಿನೀತ್ಯಾ॥

ಎಂಬಂತೆ ಅತಿಪ್ರಸಿದ್ಧವಾದ ಮಾಹಾತ್ಮ್ಯವುಳ್ಳ ವಿಷ್ಣುಸ್ಮೃತಿಯಲ್ಲಿ ಅಸಾಧಾರಣ ಮಂತ್ರಗಳು ಹೇಳಲ್ಪಟ್ಟಿರುವ ಪ್ರಯುಕ್ತ ವಿಕಲ್ಪವಾಗಿ ಅನುಷ್ಠಾನಮಾಡಬಹುದಾದಾಗ್ಯೂ,

ವಿಶುದ್ಧಮೇವಕರ್ತವ್ಯಂಅನನ್ಯೈರ್ವಿಮಿಶ್ರಿತಂ ॥

ಎಂಬ ಪೂರ್ವೋದಾಹೃತವಾಕ್ಯರೀತ್ಯಾ ಭಗವದಸಾಧಾರಣ ಮಂತ್ರಗಳಿಂದಲೇ ಅನುಷ್ಠಿಸತಕ್ಕದ್ದು ಭಗವದಸಾಧಾರಣ ಮಂತ್ರಾಶ್ಚ.

ವಿಷ್ಣುಸ್ಮೃತೌ ॥ ವಾಸುದೇವಾಯ, ಸಂಕರ್ಷಣಾಯ, ಪ್ರದ್ಯುಮ್ನಾಯ, ಅನಿರುದ್ಧಾಯ, ಪುರುಷಾಯ, ಸತ್ಯಾಯ, ಅಚ್ಯುತಾಯ ವಾಸುದೇವಾಯ, ॥ಇತಿ

ತಥಾಚೋಕ್ತಂ॥ ಆವಾಹ್ಯಾಗ್ನೌಜಗನ್ನಾಥಂಮನಸಾಭ್ಯರ್ಚ್ಯಶಕ್ತಿತಃ । ಜುಹುಯಾತ್ಕಾಷ್ಠಪುಷ್ಪಾನ್ನತಿಲಕ್ಷೀರಘೃತಾದಿಕಂ । ಅಷ್ಟಧಾವಿಹಿತೈರ್ಮಂತ್ರೈಃಚಾತುರಾತ್ಮ್ಯಪದಸ್ಥಿತೈಃ ॥

ತಾತ್ಪರ್ಯ ॥ ಅಗ್ನಿಮಧ್ಯದೊಳ್ ಜಗನ್ನಾಥನನ್ನ ಆವಾಹನಮಾಡಿ ಪೂರ್ವೋಕ್ತವಾಸುದೇವಾದಿಮಂತ್ರಪೂರ್ವಕ ಕ್ಷೀರಾದಿ ಹೋಮಪದಾರ್ಥಗಳಿಂದ) ಅರ್ಚಿಸತಕ್ಕದ್ದು.

ಆದಕಾರಣ ಭಗವದಸಾಧಾರಣಮಂತ್ರಗಳಿಂದ ಅನುಷ್ಠಿಸಬೇಕೇವಿನಹಾ ಸಾಧಾರಣಮಂತ್ರಗಳಿಂದ ಅನುಷ್ಠಿಸುವದು ಶಿಷ್ಟಾಚಾರನನು ಗುಣವೆಂದು ಹೇಳುವರು.

ಅನ್ಯೇತು ' ಭಗವತ್ಕೈಂಕರ್ಯಾರ್ಥಗಳಾದ ಔಪಾಸನ ವೈಶ್ವದೇವಾ ದಿಗಳಲ್ಲಿ ಅಗ್ನ್ಯಾದಿಶಬ್ದಗಳನ್ನ,

ಸಾಕ್ಷಾದಪ್ಯವಿರೋಧಂಜೈಮಿನಿಃ ಎಂಬಂತೆ ಯೋಗವ್ಯುತ್ಪತ್ತಿ (ಅಗ್ರಂ-ನಯತೀತ್ಯಗ್ನಿಃ) ಯ ಪ್ರಕಾರ ಭಗವದ್ವಾಚಕಗಳನ್ನಾಗಿ ತಿಳದು ಆಯಾಯ ಮಂತ್ರಗಳಿಂದ ಹೋಮಾದಿಕೈಂಕರ್ಯಗಳನ್ನ ಅನುಷ್ಠಿಸ ತಕ್ಕದ್ದು.

ಯಾವಮಂತ್ರಗಳಲ್ಲಿ ದೇವತಾಂತರಲಿಂಗವೇತೋರುವದೋ ಅಲ್ಲಿ ತತ್ತದ್ದೇವತಾಂತರ್ಯಾಮಿತಯಾ ಪರಮಾತ್ಮನನ್ನ ತಿಳದು ಕರ್ಮಗಳನ್ನ ಅನುಷ್ಠಿಸತಕ್ಕದ್ದು.

ಹೀಗೆ ಭಗವದಾರಾಧನತಯಾ ಕರ್ಮಾನುಷ್ಠಾನುಷ್ಠಾನದಲ್ಲಿ ಪಾರಮ್ಯೈಕಾಂತ್ಯಕ್ಕೆ ಭಂಗವಿಲ್ಲವು ॥ಇತಿ

ತಥಾಚನಿಕ್ಷೇಪಚಿಂತಾಮಣೌದ್ವಿತೀಯಾಧಿಕಾರೇ. { ಭಗವತ್ಕೈಂಕರ್ಯೋಪಚಔಪಾಸನವೈಶ್ವದೇವಾದಿಷುದೇವತಾಂತರಶಬ್ದೇಷ್ವಪಿ, ಸಾಕ್ಷಾದಪ್ಯವಿರೋಧಂಜೈಮಿನಿಃ, ಇತಿನ್ಯಾಯೇನಯೋಗವ್ಯುತ್ಪತ್ತ್ಯಾಪರಮಾತ್ಮೋಪಸ್ಥಿತಿಂ ಸಂಪಾದ್ಯತದಾರಾಧನರೂಪತಯೈವ ಕೈಂಕರ್ಯಮನುಷ್ಠೇಯಂ । ಯಸ್ಮಿನ್ಕರ್ಮಣಿದೇವತಾಂತರಲಿಂಗಸಮಭಿವ್ಯಾಹಾರಃ ತಸ್ಮಿನ್ವೇದಾಂತವ್ಯುತ್ಪತ್ತ್ಯಾ ಪರ್ಯವಸಾನವೃತ್ತ್ಯಾತತ್ತಚ್ಛಬ್ದೈಃ ದೇವತಾಂತರಾಂತರ್ಯಾಮಿತಯಾಪರಮಾತ್ಮೋಪಸ್ಥಿತಿಂಸಂಪಾದ್ಯ ತದಾರಾಧನತಯಾಅನುಷ್ಠೇಯಂ ॥ ಅಸಾಧಾರಣಲಿಂಗಾಭಾವಸ್ಥಲೇಯೋಗವ್ಯುತ್ಪತ್ತಿಂ ವಿಹಾಯಪರ್ಯವಸಾನ ವೃತ್ತ್ಯಾತತ್ತದಂತರ್ಯಾಮಿತಯಾರಾಧನೇ ಪಾರಮ್ಯೈಕಾಂತ್ಯಭಂಗಏವ ॥ಇತಿ

ಇಂತಹ ಅನುಷ್ಠಾನದಿಂದ ಬ್ರಹ್ಮಾದಿಗಳೂ ಕೃತಾರ್ಥರಾಗಿರುವರೆಂದು ಹಸ್ತಿಗಿರಿಮಾಹಾತ್ಮ್ಯದಲ್ಲಿ ಹೇಳಲ್ಪಟ್ಟಿದೆ.

ತಥಾಚಹಸ್ತಿಗಿರಿಮಾಹಾತ್ಮ್ಯೇ ॥ ತತಸ್ಸರ್ವೇಷುಪಶುಷು ಹೂಯಮಾನೇಷುಪದ್ಮಭೂಃ। ಯಜ್ಞಂಯಜ್ಞೇಶ್ವರಂವಿಷ್ಣುಂವರದಂಭಕ್ತವತ್ಸಲಂ । ಅಗ್ನಿಮಧ್ಯೇಸ್ಥಿತಂಧ್ಯಾತ್ವಾತಸ್ಮೈಸರ್ವಂನಿವೇದಯತ್। ಯಜ್ಞಮೂರ್ತಿರನಂತಾತ್ಮಾವೈಕುಂಠಃಪ್ರಿಯತಾಮಿತಿ । ತತ್ಸರ್ವಂಪ್ರತಿಜಗ್ರಾಹಬ್ರಹ್ಮಣಾವಿನಿವೇದಿತಂ। ಸರ್ವಲೋಕಗುರುಸ್ಸಾಕ್ಷಾತ್ಸ್ವರದೋಹವ್ಯಕವ್ಯಭುಕ್। ಯಃಪಶುರ್ಯೇನಮಂತ್ರೇಣಯದ್ದೇವತ್ಯೋಽಭಿಧೀಯತೇ । ಸಪಶುಸ್ತೇನಮಂತ್ರೇಣತದ್ದೇವತ್ಯೋಹಿಹೂಯತೇ । ತಥಾಪಿತ್ರಿದಶೈಃಸ್ವಾಂಶೋಲಭ್ಯತೇನಕದಾಚನ । ಗೃಹೀತಂವಿಷ್ಣುನಾಸರ್ವಂ ದಾತುಃಪ್ರಿಯಚಿಕೀರ್ಷಯಾ ॥ ತತಃಪ್ರಕುಪಿತಾದೇವಾಃಸರ್ವೇ ಯಜ್ಞಾಂಶಭಾಗಿನಃ । ಉಪವಿಷ್ಟಾಬಭೂವುಸ್ತೇಹ್ಯನ್ಯೋನ್ಯಮುಖವೀಕ್ಷಣಾಃ । ಅಸ್ಮಿನ್ಭಾಗೋಯಮಸ್ಮಭ್ಯಂದೀಯತೇ ಽಸ್ಮತ್ಸಮಕ್ಷತಃ । ನಚಾಯಂಲಭ್ಯತೇ ಽಸ್ಮಾಭಿಃಕಿಮೇತದಿತಿಚಾಬ್ರುವನ್ । ಇತಿ॥

ತತ್ರೈವಕಿಂಚಿದೂರ್ಧ್ವೇಬ್ರಹ್ಮಾ॥ ದತ್ತಂಯುಷ್ಮನ್ಮುಖಾದ್ಭುಂಕ್ತೇಹವಿಸ್ಸ್ವರ್ಗಾರ್ಥಿಭಿರ್ಹರಿಃ । ಮುಮುಕ್ಷುಭಿಸ್ತಥಾಭುಂಕ್ತೇಸ್ವಯಮೇವಜನಾರ್ದನಃ । ಫಲಂದದಾತಿಸರ್ವೇಷಾಂಸಏವಪರಮಃಪ್ರಭುಃ ॥ ಇತ್ಯಾದ್ಯಾಹ।

ದೇವಾಃ। ಏಕಾಕ್ರಿಯಾದ್ವಿಧಾಬ್ರಹ್ಮನ್ಕಥಂಸ್ವರ್ಗಾಪವರ್ಗತಃ। ಭವೇದಿತಿಮಹಾನೇಷಸಂಶಯೋನಃಪ್ರಜಾಯತೇ ॥

ಬ್ರಹ್ಮಾ॥ ವಿದ್ಯಾಜ್ಞಾನಮವಿದ್ಯಾತುಕರ್ಮಕೇವಲಮುಚ್ಯತೇ । ಯತ್ಕರ್ಮವಿಷ್ಣುಯಜನಾರ್ಥಂಕ್ರಿಯತೇತದ್ವಿಮುಕ್ತಿದಂ । ತದ್ಯಾವಿರಹಿತಂಯತ್ತುತತ್ಸಂಸಾರಫಲಪ್ರದಂ । ತಮೇವೋದ್ದಿಶ್ಯಯತ್ಕರ್ಮಕ್ರಿಯತೇವೈದಿಕಂನರೈಃ । ತದೇವವಿದ್ಯಾಸ

ಹಿತಂ ಕೀರ್ತಿತಂ ಬ್ರಹ್ಮವಾದಿಭಿಃ ॥ ಅತೋಯತ್ಕ್ರಿಯತೇಕರ್ಮ ಯುಷ್ಮದಾರಾಧನಾತ್ಮಕಂ । ಸ್ವರ್ಗಾದಿಫಲದಂ ತಸ್ಮಾತ್ ಕೇವಲಂ ನಾತ್ರ ಸಂಶಯಃ ॥ ಅತಸ್ತ್ವಂ ಪ್ರಷ್ಟುಕಾಮೋಹಂ ವರದಂ ಪುರುಷೋತ್ತಮಂ । ಅಶ್ವಮೇಧೇನ ಯಕ್ಷ್ಯೇಹಂ ಕ್ಷೇತ್ರೇ ಸತ್ಯವ್ರತೇಧುನಾ । ಅತೋ ವಿಷಾದಂ ಯುಷ್ಮಾಭಿಃ ನ ಕರ್ತವ್ಯೋತ್ರ ಮಾಂಪ್ರತಿ ॥ ಇತ್ಯಾದಿ ॥

ಮುಖ್ಯತಾತ್ಪರ್ಯ॥ ಚತುರ್ಮುಖನು ಸತ್ಯವ್ರತಕ್ಷೇತ್ರದಲ್ಲಿ ಪರಮಾತ್ಮನನ್ನ ಕುರಿತು ಅಶ್ವಮೇಧಯಾಗವನ್ನ ಯಥಾಶಾಸ್ತ್ರವಾಗಿ ಅನುಷ್ಠಿಸುವ ಕಾಲದಲ್ಲಿ ಹವಿರ್ಭಾಗೋದ್ದೇಶ್ಯದಿಂದ ಸಕಲದೇವತೆಗಳು ಯಜ್ಞಮಂಡಪದಲ್ಲಿ ಸನ್ನಿಹಿತರಾಗಿದ್ದರು.

ಆ ಕಾಲದಲ್ಲಿ ಶಾಸ್ತ್ರೋಕ್ತರೀತ್ಯಾ ಅಧ್ವರ್ಯುವೇ ಮೊದಲಾದವರುಗಳಿಂದ ಯಜ್ಞಪಶುಗಳು ತತ್ತನ್ಮಂತ್ರಗಳಿಂದ (ಇಂದ್ರಾದಿದೇವತಾಮಂತ್ರಗಳಿಂದ) ಹೋಮಮಾಡಲ್ಪಟ್ಟವು.

ಯಜಮಾನನಾದ ಚತುರ್ಮುಖನು (ಮಾತ್ರ) ಅಗ್ನಿಮಧ್ಯದಲ್ಲಿ ಭಗವಂತನಾದ ವರದರಾಜನನ್ನೇ ಧ್ಯಾನಿಸಿ ಸಕಲವಾದ ಹವಿಸ್ಸನ್ನೂ ಭಗವಂತನಿಗೇನೆ ಸಮರ್ಪಣೆಮಾಡಿದನು.

ಚತುರ್ಮುಖನಿಂದ ಸಮರ್ಪಿಸಲ್ಪಟ್ಟ (ವೈಕುಂಠಪ್ರಿಯತಾಂ ಎಂದು ಸಮರ್ಪಿಸಲ್ಪಟ್ಟ) ಹವಿಸ್ಸನ್ನೆಲ್ಲವನ್ನೂ ಭಗವಂತನೇ ಸ್ವೀಕರಿಸಿದನು.

ಯಾವಯಾವ ಯಜ್ಞಪಶುವು ಯಾವಯಾವದೇವತಾಕವಾದದೋ ಆ ಪ್ರಕಾರವಾಗಿಯೇ (ತತ್ತದ್ದೇವತಾಕವಾಗಿಯೇ) ಹೋಮಮಾಡಲ್ಪಟ್ಟಾಗ್ಯೂ ಆಯಾಯಾ ದೇವತೆಗಳಿಂದ ಆ ಆ ಅಂಶವು ಹೊಂದಲ್ಪಡುತ್ತಲಿರಲಿಲ್ಲ.

ಆಗ ಯಜ್ಞಾಂಶಭಾಗಿಗಳಾದ ದೇವತೆಗಳೆಲ್ಲರೂ ಪರಸ್ಪರವಾಗಿ ಮುಖಗಳನ್ನು ನೋಡುವರಾಗಿ ಇದೇನಾಶ್ಚರ್ಯವು, ಈ ಯಜ್ಞದಲ್ಲಿ ನಮ್ಮಗಳ ಸಮಕ್ಷಮದಲ್ಲಿಯೇ ನಮ್ಮ ಭಾಗವು ಕೊಡಲ್ಪಟ್ಟಾಗ್ಯೂ ನಮ್ಮ

ಭಾಗವು ನಮಗೆ ಬರುವದಿಲ್ಲವಲ್ಲಾ ಎಂದು ಆಗ್ರಹಪ್ರಳ್ಳವರಾಗಿ, ಯಜ ಮಾನನನ್ನ (ಚತುರ್ಮುಖನನ್ನ) ಕುರಿತು ಸಂಗತಿಯನ್ನ ಪ್ರಶ್ನೆಮಾಡಿ ದರು. ಅದಕ್ಕೆ ಚತುರ್ಮುಖನು ಹೇಳುವನು.

ದೇವತೆಗಳಿರಾ, ತತ್ವಾರ್ಥವನ್ನ ಕೇಳಿ೨. ಸ್ವರ್ಗಾಪೇಕ್ಷೆಯುಳ್ಳವ ರಿಂದ ಕೊಡಲ್ಪಟ್ಟ ಹವಿಸ್ಸನ್ನ ಜಗನ್ನಾಯಕನಾದ ನಾರಾಯಣನು ತನಿಗೆ ಶರೀರಭೂತರಾದ ದೇವತಾದ್ವಾರ ಅಂಗೀಕರಿಸುವನು. ಹಾಗೆಯೇ ಫಲವನ್ನೂ ಕೊಡುವನು.

ಮೋಕ್ಷಾರ್ಥಿಗಳಿಂದ ಕೊಡಲ್ಪಡುವ ಹವಿಸ್ಸನ್ನ ಸಾಕ್ಷಾತ್ತಾಗಿಯೇ ಸ್ವೀಕರಿಸುವನು. ಫಲವನ್ನೂ ಸಾಕ್ಷಾತ್ತಾಗಿಯೇ ಕೊಡುವನು. ದೇವತೆ ಗಳು ಪ್ರಶ್ನೆಮಾಡುತ್ತಾರೆ, ಸ್ವಾಮಿನ್ ಒಂದಾದ ಯಜ್ಞಾದಿ ಕ್ರಿಯೆಯು ಸ್ವರ್ಗ ಮೋಕ್ಷರೂಪವಾಗಿ ಫಲಪ್ರದವಾಗುವದು ಹೇಗೆ (ಎಂದು)

ಚತುರ್ಮುಖನು ಹೇಳುವನು.

ದೇವತೆಗಳಿರಾ, ವಿದ್ಯಾವಿಶಿಷ್ಟ ಕರ್ಮವೆಂಬದಾಗಿಯೂ, ಕೇವಲ ಕ ರ್ಮವೆಂಬದಾಗಿಯೂ, ಕರ್ಮವು ಎರಡು ಪ್ರಕಾರವಾಗಿರುವದು.

ಇದೇ ಜ್ಞಾನವಿಶಿಷ್ಟಕರ್ಮವೆಂದೂ ಕೇವಲಕರ್ಮವೆಂದೂ ಹೇಳಲ್ಪ ಡುವದು.

ಭಗವಂತನನ್ನೇ ಉದ್ದೇಶಿಸಿ ಮಾಡಲ್ಪಡುವ ಕರ್ಮವು ವಿದ್ಯಾಸಹಿತ ಕರ್ಮವೆನಿಸುವದು. ನಿಮ್ಮಗಳನ್ನ ಆರಾಧಿಸುವ (ಇಂದ್ರಾದಿದೇವತಾ ರಾಧನಾತ್ಮಕವಾದ) ಯಜ್ಞಾದಿಕರ್ಮವು ಕೇವಲ ಕರ್ಮವೆನಿಸುವದು.

ಜ್ಞಾನಸಹಿತ ಕರ್ಮವು ಭಗವತ್ಪ್ರಾಪ್ತಿ ಸಾಧಕವಾದುದು ಕೇವಲ ಕರ್ಮವು ಸ್ವರ್ಗಾದಿಪ್ರಾಪ್ತಿಸಾಧಕವಾದುದು. ಆದಕಾರಣ ಆ ಪುರು ಷೋತ್ತಮನನ್ನ ನೋಡಲಪೇಕ್ಷೆಯಿಂದ ಈ ಕಾಂಚೀಕ್ಷೇತ್ರದಲ್ಲಿ ಪರಮಾ ತ್ಮನನ್ನ ಕುರಿತೇ ನಾನು ಯಜ್ಞವನ್ನಮಾಡುತ್ತೇನಾಗಿ ಯಜ್ಞಭಾಗವು

ನಿಮಗೆ ಸಲ್ಲಲಾರದು ವಸ್ತುಸ್ಥಿತಿಯು ಇಂತಹದಾದಪ್ರಯುಕ್ತ ನೀವು ಈ ವಿಷಯದಲ್ಲಿ ನನ್ನನ್ನು ಕುರಿತು ವಿಷಾದಿಸಬೇಡಿರಿ । ಇತಿ॥

ಪರಾಶರಃ॥ ವೈಶ್ವದೇವಕೃತಂಪಾಪಂಭಿಕ್ಷುರೇಕೋವ್ಯಪೋಹತಿ ।
ನಭಿಕ್ಷುಣಾಕೃತಂಪಾಪಂವೈಶ್ವದೇವೋವ್ಯಪೋಹತಿ ॥ಇತಿ॥

ತಾತ್ಪರ್ಯ॥ ವೈಶ್ವದೇವಾತ್ಪೂರ್ವ ಸನ್ಯಾಸಿಯು ಭಿಕ್ಷಕ್ಕೆ ಬಂದಸಂದರ್ಭದಲ್ಲಿ ಭಿಕ್ಷೆಯನ್ನು ಸಮರ್ಪಿಸತಕ್ಕದ್ದು. ಈ ಸಂಭವದಲ್ಲಿ ವೈಶ್ವದೇವವನ್ನು ಅನುಷ್ಠಿಸದಿದ್ದಾಗ್ಯೂ ಬಾಧಕವಲ್ಲವು. ಸನ್ಯಾಸಿಗೆ ಭಿಕ್ಷೆಯನ್ನು ಹಾಕದೇ ವೈಶ್ವದೇವಲೋಭದಿಂದ ವೈಶ್ವದೇವವನ್ನು ಅನುಷ್ಠಿಸಿದರೆ ಈ ವೈಶ್ವದೇವವು ಆ ಪಾಪ (ಭಿಕ್ಷುವನ್ನು ತಳ್ಳಿದಪಾಪ) ವನ್ನು ಹೋಗಲಾಡಿಸಲಾರದು.

ಸಾರ್ವಭೌಮಃ॥ ಏತದೇಕಭಾಂಡಪಕ್ವವಿಷಯಂ ಪೃಥಕ್ಪಾಕೇ
ತುವೈಶ್ವದೇವಃಕಾರ್ಯಃ ॥ಇತಿ॥

ಮಾಧವೀಯೇ॥ ಅತ್ರಭಿಕ್ಷುಶಬ್ದಃ ವಿದ್ಯಾರ್ಥ್ಯಾದೀನಾಮುಪಲಕ್ಷಣಂ॥
ಇತಿ॥

ಅವತರಣಿಕಾ॥ ಭಗವದಾರಾಧನಾನಂತರ ವೈಶ್ವದೇವಾನುಷ್ಠಾನವು ಸರ್ವಸ್ಮೃತಿಚೋದಿತವಾಗಿರುವದು.

ಸಂಹಿತೆಗಳಲ್ಲಿಮಾತ್ರ। ವಹ್ನಿಸಂತರ್ಪಣಂಪಶ್ಚಾತ್ಪಿತೃಯಾಗಂತುಸ
ಪ್ತಮಂ ।

ಎಂಬದಾಗಿ ಇಜ್ಯಾಂಗ (ಆರಾಧನಾಂಗ) ತಯಾ ಹೋಮ ಪಿತೃಯಾಗಾದಿಗಳು ವಿಧಿಸಲ್ಪಟ್ಟಿರುವವು.

ಹೋಮಾದ್ಯಮನುಯಾಗಾಂತಂ ವೈಧಂಕರ್ಮಸಮಾಚರೇತ್.

ಎಂಬ ಉಭಯ ಸಾಧಾರಣವಾಗಿ ಮಂಗಿವಂಗೇಶ್ವರರಿಂದ ಅನುಗ್ರಹಿಸಲ್ಪಟ್ಟಿರುವದು.

ಹೀಗೆ ಉಭಯಥಾ ಅನುಷ್ಠಿಸಬಹುದಾದಾಗ್ಯೂ ಸಂಹಿತೋಕ್ತಾನುಷ್ಠಾನವು ಉಪದೇಶಪರಂಪರಾ ಪ್ರಾಪ್ತವಾಗಿರುವಂತೆ ತೋರುವದಿಲ್ಲವು.

ಆಗ ಮುನಿತ್ರ್ಯಾ ಉಪದೇಶವಿಲ್ಲದ ವಿಷಯುಗಳಲ್ಲಿ ಸೂತ್ರೋಕ್ತರೀತ್ಯ ಅನುಷ್ಠಾನವು ವಿಧಿಸಲ್ಪಟ್ಟಿರುವದು.

ತಥಾಚಪಾಂಚರಾತ್ರ ರಕ್ಷಾಯಾಂನಿಗಮಾಂತ ಗುರುಭಿಃ । } ಭಗವಚ್ಛಾಸ್ತ್ರಸಂಹಿತಾಸ್ವೇವಸ್ವಸೂತ್ರ ಸಂಹಿತಾಚಾರಾಭ್ಯನುಜ್ಞಾನಾತ್ ಪ್ರಥಮಗೃಹೀತಪರಿತ್ಯಾಗೇ ನಿರ್ಬಂಧಾಭಾವಾತ್ ।ಯಥಾಸೂತ್ರಮನುಷ್ಠಾನೇಪಿ ಭಗವತ್ಸಮಾರಾಧನರೂಪತ್ವಸಿದ್ಧೇಃ । ಸ್ವಸೂತ್ರವಿಹಿತಮೇವಸಂಧ್ಯೋಪಸ್ಥಾನಾದಿಕಂಕರ್ತುಮುಚಿತಂ॥

ಉಕ್ತಂಹಿನಾರದೀಯೇ,[೧]ಸ್ವಸೂತ್ರವಿಹಿತಾನ್ವಾಪಿ
ನಿಷೇಕಾದೀನ್ಸಮಾಚರೇತ್ ॥ಇತ್ಯಾದಿ॥

ಈ ಸಂದರ್ಭಗಳಲ್ಲಿ ಹೇಳಲ್ಪಡುವ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳು ಸಂವಿಭಾಗವಿಧಿಯಲ್ಲಿ ಬರಿಯಲ್ಪಟ್ಟಿರುವವು.

ವೈಶ್ವದೇವಪ್ರಯೋಗವು ಉಪದೇಶರೀತ್ಯಾ ಧರ್ಮಶಾಸ್ತ್ರಸೂತ್ರಾದ್ಯನುಗುಣವಾಗಿ ಬರಿಯಲ್ಪಡುವದು.

ಇದಂವೈಶ್ವದೇವಕರ್ಮವ್ಯಜನಾಕಾರಮೇವಲಿಗ್ನಿಸಮಾಪೆಶಿಷ್ಟೈರನುಷ್ಠೀಯತೆ ॥ಇತಿಸಾರ್ವಭೌಮಃ॥

ಪಂಚಮಹಾಯಜ್ಞಾದಿವಿಷಯಗಳ ವಿಚಾರವಾಗಿ ಹೇಳತಕ್ಕ ಸಂಗತಿಗಳು ಅನೇಕವಾಗಿದ್ದಾಗ್ಯೂ ವಿಸ್ತರಭೀತಿಯಿಂದ ದಿಜ್ಮಾತ್ರವು ತೋರಿಸಲ್ಪಟ್ಟಿಧೆ.

---

೧ ನಿಷೇಕಾದಿ ಸಕಲಕರ್ಮಾನುಷ್ಠಾನಗಳನ್ನು ಯಾರು ಸಂಹಿತೋಕ್ತರೀತ್ಯಾ ಅನುಷ್ಠಿಸುವರೋ ಅವರು ವೈಶ್ವದೇವಸ್ಥಾನದಲ್ಲಿ ಬೋಧಿತವಾಗಿರುವ (ಪಂಚಕಾಲಕರ್ಮ ಸಂಪುಟ) ಎಂಬ ಹೋಮವನ್ನು ಅನುಷ್ಠಿಸಬಹುದು ॥ಎಂದು॥

ಧರ್ಮಶಾಸ್ತ್ರರೀತ್ಯಾ ಸಕಲ ಕರ್ಮಗಳನ್ನೂ ಅನುಷ್ಠಿಸುವರು. ಧರ್ಮಶಾಸ್ತ್ರೋಕ್ತವೈಶ್ವದೇವವನ್ನೇ ಅನುಷ್ಠಿಸಬೇಕೆಂದೂ ಹೇಳುವರು. ಸಂಪ್ರದಾಯಾನುಗುಣವಾಗಿ ಅನುಷ್ಠಿಸಬಹುದು.

## ಅಥ ವೈಶ್ವದೇವಕ್ರಮಃ.

ಪಾದೌಪ್ರಕ್ಷಾಳ್ಯ ದ್ವಿರಾಚಮ್ಯ ತ್ರಿಃಪ್ರಾಣಾನಾಯಮ್ಯ ಶ್ರೀಭಗವದಾಜ್ಞಯಾ ಭಗವತ್ಪ್ರೀತ್ಯರ್ಥಂ ಪ್ರಾತಃ ವೈಶ್ವದೇವಂ ಅನ್ನೇನ (ಅದ್ಭಿರ್ವಾ) ಕರಿಷ್ಯೇ ॥ಇತಿಸಂಕಲ್ಪ್ಯ॥

ಕೃತಂಚಕರಿಷ್ಯಾಮಿಭಗವನ್ನಿತ್ಯೇನಭಗವತ್ಪ್ರೀತ್ಯರ್ಥೇನ ಮಹಾವಿಭೂತಿಚಾತುರಾತ್ಮ್ಯಭಗವದ್ವಾಸುದೇವಪಾದಾರವಿಂದಾರ್ಚನೇನಪ್ರಾತರ್ವೈಶ್ವದೇವೇನಭಗವತ್ಕರ್ಮಣಾಭಗವಂತಂವಾಸುದೇವಮರ್ಚಯಿಷ್ಯಾಮಿ ॥ಇತಿಸಂಕಲ್ಪ್ಯ॥

ಭಗವತೋಬಲೇನಭಗವತೋವೀರ್ಯೇಣಭಗವತಸ್ತೇಜಸಾಭಗವತಃಕರ್ಮಣಾಭಗವತಃಕರ್ಮಕರಿಷ್ಯಾಮಿಭಗವತೋವಾಸುದೇವಸ್ಯ॥ ಇತಿಬಲಮಂತ್ರಮನುಸಂಧಾಯ॥

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರಸೇನಮಯಾಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರಯೋಜನಾಯಪರಮಪುರುಷಸ್ಸರ್ವಶೇಷೀಸ್ವಶೇಷಭೂತಮಿದಂಪ್ರಾತಃವೈಶ್ವದೇವಾಖ್ಯಂಕರ್ಮಸ್ವಸ್ಮೈಸ್ವಪ್ರೀತಯೇಸ್ವಯಮೇವಕಾರಯತಿ ॥ಇತಿಸಾತ್ವಿಕತ್ಯಾಗಂಕೃತ್ವಾ॥

ಔಪಾಸನಾಗ್ನಿಂ ವಿಚ್ಛಿನ್ನಾಗ್ನಿಶ್ಚೇತ್ಪಚನಾಗ್ನಿಂ ಪ್ರತಿಷ್ಠಾಪ್ಯತತ್ಪ್ರಕಾರಃ ಸ್ಥಂಡಿಲಂಕಲ್ಪಯಿತ್ವಾ ಪ್ರಾಚೀಪೂರ್ವಮುದಕ್ಸಗ್ ಸ್ಥಂಡಿಲಕ್ಷಿಣಾರಂಭಮಾಲಿಖೇತ್‌ಅಥೋದೀಚೀಪುರಸ್ಸಗ್ ಸ್ಥಂಪಶ್ಚಿಮಾರಂಭಮಾಲಿಖೇತ್ ಅವಾಕ್ಕರೋಭ್ಯುಕ್ಷ್ಯತ್ರಣಂನ್ಯೈರುತ್ಯಾಂ ನಿರಸ್ಯಅಪಉಪಸ್ಪೃಶ್ಯ ಭೂರ್ಭುವಸ್ಸುವರೋಂ॥ಇತ್ಯಗ್ನಿಂಪ್ರತಿಷ್ಠಾಪ್ಯ॥

ಉತ್ಸ್ರಜ್ಯತೇಪ್ರೋಕ್ಷಣಶೇಷತೋಯಂಪ್ರಾಕ್ಸ್ತೋಯಮನ್ಸ್ವನ್ನಿದಧಾತ್ಯುದಗ್ವಾ॥ ಯಥಾಬಹಿಸ್ಸ್ಯಾಚ್ಛ ಪರಿಸ್ತರಾಣಾಂ ಆತ್ಮನಃಪುರತೋದರ್ಭಾಗ್ರಸಂಸ್ತೀರ್ಯತ್ರಮುಪರಿವಾರಿಪಾತ್ರಂನಿಧಾಯ ಜಲಂಪೂರಯಿತ್ವಾಭ್ಯಾಂ ಪಾತ್ರಶ್ಚ್ಯ ವೈಶ್ವದೇವಾ

ರ್ಭಂಸ್ಥಾಪಿತಂಅನ್ನಮಾದಾಯಭೂತಂಇತ್ಯುಕ್ತ್ವಾಯಜಮಾ
ನಾಯದದ್ಯಾತ್.

ತತ್ಸುಭೂತಂ ವಿರಾಡನ್ನಂತನ್ಮಾಕ್ಷಾಯಿಇತ್ಯುಚ್ಚರ್ ಯಜಮಾ
ನೋಗೃಹಿತ್ವಾಅನ್ನಾವಧಿಶ್ರಿತ್ಯಾ ವಾಮಭಾಗೇನಿಕ್ಷಿಪ್ಯ ಪ್ರೋ
ಕ್ಷ್ಯದಕ್ಷಿಣೋತ್ತರತಯಾದ್ವೇಧಾವಿಭಜ್ಯ.

ಉತ್ತರಭಾಗಂಪೂರ್ವಪಶ್ಚಿಮತಯಾತ್ರೇಧಾವಿಭಜ್ಯ ದಕ್ಷಿಣಭಾ
ಗಂಪೂರ್ವಪಶ್ಚಿಮತಯಾನ್ಯೂನಾಧಿಕತ್ವೇನ ದ್ವೇಧಾವಿಭಜ್ಯ
ಓಂಅದಿತೇ ೭ ನುಮನ್ಯಸ್ವ ಓಂಅನುಮತೇ ೭ ನುಮನ್ಯಸ್ವ
ಓಂಸರಸ್ವತೇ ೭ ನುಮನ್ಯಸ್ವ ದೇವಸವಿತಃ ಪ್ರಸುವ.

ಇತ್ಯಗ್ನಿಂಪರಿಷಿಚ್ಯ ಅನ್ನಾವೇಕಾಂಸಮಿಧಂ ದರ್ಭಂವಾಪ್ರಕ್ಷಿಪ್ಯ
ದಕ್ಷಿಣಭಾಗೇಪೂರ್ವಭಾಗಾದಾಮಲಕಪ್ರಮಾಣಮನ್ನಂಸಂಹ
ತಾಂಗುಳಿನಾದಾಯಹವಿಃ ಪಾತ್ರಂವಾಮಹಸ್ತೇನಸ್ಪೃಶ್ಯ ಉ
ತ್ತಾನೇನಪಾಣಿನಾಅಂಗುಷ್ಠಾಗ್ರೇಣಹವಿರ್ನಿಷ್ಪಿಡ್ಯ

ಓಂ ಅಗ್ನಯೇಸ್ವಾಹಾ ಇತಿಹುತ್ವಾ ಅಗ್ನಯಇದಂನಮಮ
ಇತ್ಯುಕ್ತ್ವಾ ಓಂ ವಿಶ್ವೇಭ್ಯೋದೇವೇಭ್ಯಸ್ವಾಹಾ ಇತಿಹು
ತ್ವಾ ವಿಶ್ವೇಭ್ಯೋದೇವೇಭ್ಯಇದಂನಮಮ ಓಂ ಧ್ರುವಾಯ
ಭೂಮಾಯಸ್ವಾಹಾ ಇತಿಹುತ್ವಾ ಧ್ರುವಾಯಭೂಮಾಯೇ
ದಂನಮಮ ಇತ್ಯುಕ್ತ್ವಾ ಓಂ ಧ್ರುವಕ್ಷಿತಯೇಸ್ವಾಹಾ ಇತಿ
ಹುತ್ವಾ ಧ್ರುವಕ್ಷಿತಯಇದಂನಮಮಇತ್ಯುಕ್ತ್ವಾ ಓಂ ಅ

---

೧ ಈ ಪ್ರಕಾರವೆಲ್ಲವೂ ೧ನೇ ಪಿನ ಪ್ರಕರಣದಲ್ಲಿ ವಿವರಿಸಲ್ಪಟ್ಟಿರುವುದು.

ಚ್ಯುತಕ್ಷಿತಯೇಸ್ವಾಹಾ ಇತಿಹುತ್ವಾ ಅಚ್ಯುತಕ್ಷಿತಯಇದಂನ

ಮಮ ಇತ್ಯುಕ್ತ್ವಾ ಓಂಅಗ್ನಯೇಸ್ವಿಷ್ಟಕೃತೇಸ್ವಾಹಾ ಇ

ತಿಪೂರ್ವಾರ್ಧಹುತ್ವಸಂಯುತಂಅಗ್ನಾಈಶಾನ್ಯಾ ಜುಹುಯಾತ್ ಅಗ್ನಯೇಸ್ವಿಷ್ಟಕೃತಇದಂನಮಮಇತ್ಯುಕ್ತ್ವಾ ದರ್ಭಂಪ್ರ ಕ್ಷಿಪ್ಯ.

ಓಂಅದಿತೇನ್ವಮಗ್ಂಸ್ಥಾಃ
ಓಂಅನುಮತೇನ್ವಮಗ್ಂಸ್ಥಾಃ
ಸರಸ್ವತೇನ್ವಮಗ್ಂಸ್ಥಾಃ
ದೇವಸವಿತಃಪ್ರಸಾವೀಃ
ಇತಿಪರಿಷೇಚಯೇತ್

## ಬಲಿಹರಣಕ್ರಮಃ.

ಶ್ರೌತಾಚಮನಂಕೃತ್ವಾ ಪ್ರಾಣಾನಾಯಮ್ಯ ಶ್ರೀಭಗವದಾ ಜ್ಞಯಾಶ್ರೀಮನ್ನಾರಾಯಣಪ್ರೀತ್ಯರ್ಥಂಬಲಿಹರಣಮನ್ನೇ ನ(ಅದ್ಭಿರ್ವಾ) ಕರಿಷ್ಯೇ ಇತಿಸಂಕಲ್ಪ್ಯ ದಕ್ಷಿಣಭಾಗದ್ವಯ ಮನ್ನಮೇಕಕೃತ್ಯ ಅಗ್ನೇಃಪಶ್ಚಾದ್ಭೂಮಿಮದ್ಭಿಸ್ಸಮ್ಮೃಜ್ಯ ವ್ಯಾ ಹೃತಿಭಿಃಪ್ರೋಕ್ಷ್ಯ.

ಓಂಧರ್ಮಾಯಸ್ವಾಹಾ ಇತಿದತ್ವಾಧರ್ಮಾಯೇದಂನಮಮ ಇತ್ಯು

ಕ್ತ್ವಾ ತದುತ್ತರತಃ ಓಂ ಅಧರ್ಮಾಯಸ್ವಾಹಾ ಇತಿದತ್ವಾ

ಅಧರ್ಮಾಯೇದಂನಮಮ ಇತ್ಯುಕ್ತ್ವಾಉಭಯಂಪರಿಷಿಚ್ಯ

ಧರ್ಮಬಲೇಃ ಪಶ್ಚಿಮಾದಾರಭ್ಯ ಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ

ಓಂ ಅದ್ಭ್ಯಸ್ಸ್ವಾಹಾ ಇತಿದತ್ವಾ ಅದ್ಭ್ಯ ಇದಂನಮಮ ಇತ್ಯುಕ್ತ್ವಾ ಪರಿಷಿಚ್ಯ.

ತತ್ಪೂರ್ವತಃ ಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ ಓಂ ಓಷಧಿವನಸ್ಪತಿಭ್ಯಸ್ಸ್ವಾಹಾ ಇತಿದತ್ವಾ.

ಓಷಧಿವನಸ್ಪತಿಭ್ಯಇದಂನಮಮಇತ್ಯುಕ್ತ್ವಾತತ್ಪೂರ್ವತಃಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ.

ಓಂರಕ್ಷೋದೇವಜನೇಭ್ಯಸ್ಸ್ವಾಹಾ ಇತಿದತ್ವಾರಕ್ಷೋದೇವಜನೇಭ್ಯಇದಂನಮಮ ಇತ್ಯುಕ್ತ್ವಾ ಉಭಯಂಪರಿಷಿಚ್ಯ.

ಅಥಸರ್ವಬಲಿಃ ಉತ್ತರತಃ ಪಶ್ಚಿಮಾದಾರಭ್ಯತತ್ಸ್ಥಲಮದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ ಓಂಗೃಹ್ಯಾಭ್ಯ ಸ್ವಾಹಾಇತಿದತ್ವಾ ಗೃಹ್ಯಾಭ್ಯ ಇದಂನಮಮಇತ್ಯುಕ್ತ್ವಾ.

ತತ್ಪುರತಃಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯಓಂಅವಸಾನೇಭ್ಯಸ್ಸ್ವಾಹಾ ಇತಿದತ್ವಾಅವಸಾನೇಭ್ಯಇದಂನಮಮಇತ್ಯುಕ್ತ್ವಾತತ್ಪುರತಃಅದ್ಭಿಃಸಮ್ಮೃಜ್ಯಪ್ರೋಕ್ಷ್ಯ

ಓಂಅವಸಾನಪತಿಭ್ಯಸ್ಸ್ವಾಹಾಇತಿ ದತ್ವಾಅವಸಾನಪತಿಭ್ಯಇದಂನಮಮ ಇತ್ಯುಕ್ತ್ವಾ.

ತತ್ಪುರತ್ಪುರತಃಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯಓಂಸರ್ವಭೂತೇಭ್ಯ

ಸ್ವಾಹಾ ಇತಿದತ್ವಾಸರ್ವಭೂತೇಭ್ಯ ಇದಂನಮಮ ಇತ್ಯು
ಕ್ತ್ವಾಚತುರ್ಣಾಮೇಕಂ ಪರಿಷೇಚನಂಕೃತ್ವಾ ಅಥರ್ವಬ
ಲೇಃ ಪಶ್ಚಿಮಾದಾರಭ್ಯ ಅಬ್ಬಲೇರುತ್ತರತಃಅದ್ಭಿಸ್ಸಮ್ಮೃಜ್ಯ
ಪ್ರೋಕ್ಷ್ಯ.

ಓಂಕಾಮಾಯಸ್ವಾಹಾ ಇತಿದತ್ವಾಕಾಮಾಯೇದಂನಮಮಇತ್ಯು
ಕ್ತ್ವಾ ಪರಿಷಿಚ್ಯ.

ತತ್ಪುರತಃ ಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯಓಂಅಂತರಿಕ್ಷಾಯಸ್ವಾಹಾ
ಇತಿದತ್ವಾ ಅಂತರಿಕ್ಷಾಯೇದಂನಮಮ ಇತ್ಯುಕ್ತ್ವಾ ಪರಿ
ಷಿಚ್ಯ

ತತ್ಪುರತಃಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯಓಂಯದೇಜತಿಜಗತಿಯ
ಚ್ಚಚೇಷ್ಟತಿ ನಾಮ್ನೋಭಾಗೋಯನ್ನಾಮ್ನೇಸ್ವಾಹಾ ಇತಿ
ದತ್ವಾ ನಾಮ್ನ ಇದಂನಮಮ ಇತ್ಯುಕ್ತ್ವಾ ಪರಿಷೇಚಯೇತ್

ಏವಂದತ್ತಾಃ ದ್ವಾದಶಬಲಯಃ ಪೂರ್ವಾದ್ವಾ ಪಶ್ಚಿಮಾದ್ವಾ
ಉತ್ತರಾದ್ವಾ ದಕ್ಷಿಣಾದ್ವಾ ಯಥಾಋಜವೋಭವೇಯುಃ
ತಥಾಕಲ್ಪನೀಯಾಃ.

ದ್ವಾದಶಬಲಿಭ್ಯೋದಕ್ಷಿಣತಃ ಪಶ್ಚಿಮಾದಾರಭ್ಯ ಪ್ರಾಗವಧಿದೀ
ರ್ಘಂಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ ಪಶ್ಚಿಮಾದಾರಭ್ಯ,

ಓಂಪೃಥಿವ್ಯೈಸ್ವಾಹಾ ಇತಿದತ್ವಾಪೃಥಿವ್ಯಾಇದಂನಮಮಇತ್ಯುಕ್ತ್ವಾ

ಓಂ, ಅಂತರಿಕ್ಷಾಯಸ್ವಾಹಾ ಅಂತರಿಕ್ಷಾಯೇದಂನಮಮ.

ಓಂ ದಿವೇಸ್ವಾಹಾ ದಿವಇದಂನಮಮ.

ಓಂ, ಸೂರ್ಯಾಯಸ್ವಾಹಾ ಸೂರ್ಯಾಯೇದಂನಮಮ.

ಓಂ, ಚಂದ್ರಮಸೇಸ್ವಾಹಾ ಚಂದ್ರಮಸಇದಂನಮಮ.

ಓಂ, ನಕ್ಷತ್ರೇಭ್ಯಸ್ವಾಹಾ ನಕ್ಷತ್ರೇಭ್ಯಇದಂನಮಮ.

ಓಂ, ಇಂದ್ರಾಯಸ್ವಾಹಾ ಇಂದ್ರಾಯೇದಂನಮಮ.

ಓಂ, ಬೃಹಸ್ಪತಯೇಸ್ವಾಹಾ ಬೃಹಸ್ಪತಯಇದಂನಮಮ.

ಓಂ, ಪ್ರಜಾಪತಯೇಸ್ವಾಹಾ ಪ್ರಜಾಪತಯಇದಂನಮಮ.

ಓಂ, ಬ್ರಹ್ಮಣೇಸ್ವಾಹಾ ಬ್ರಹ್ಮಣಇದಂನಮಮ.

ಸರ್ವೇಷಾಮೇಕಂಪರಿಷೇಚನಂ.

ಪೃಥಿವ್ಯಾದಿಷು ದಶಬಲಿಷುಆದಿತಃ ಅಬ್ಬಲಿಪರ್ಯಂತ ಚತುಷ್ಟಯಂ. ಮಧ್ಯೇಧರ್ಮಬಲಿಪರ್ಯಂತಚತುಷ್ಟಯಂ, ತತ್ಪುರತೋಬಲಿದ್ವಯಂ ಚ ಕುರ್ಯಾತ್.

ಅಯಮೇವವ್ಯಂಜನಾಕಾರಃ

ಏತದ್ದಕ್ಷಿಣತಃ,

ಪ್ರಾಚೀನಾವೀತಿ, ಭೂಮಿಮದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ

ಓಂ ಸ್ವಧಾಪಿತೃಭ್ಯಃ

ಇತಿ ಪಿತೃತೀರ್ಥೇನಬಲಿಂದತ್ವಾ ಪಿತೃಭ್ಯಇದಂನಮಮ. ಇತ್ಯುಕ್ತ್ವಾ ಅಪ್ರದಕ್ಷಿಣಂಪರಿಷಿಚ್ಯ.

ಉಪವೀತೀ; ತದುತ್ತರತಃ, ಭೂಮಿಮದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ

ಓಂ ನಮೋರುದ್ರಾಯಪಶುಪತಯೇಸ್ವಾಹಾ.[1]

ಇತಿದತ್ವಾ ರುದ್ರಾಯಪಶುಪತಯಇದಂನಮಮ

ಇತ್ಯುಕ್ತ್ವಾ ಅಪಉಪಸ್ಪೃಶ್ಯ ಪರಿಷಿಚ್ಯ

ಅವಶಿಷ್ಟಾನ್ನೇಮುಷ್ಟಿತ್ರಯಂ ಪಾತ್ರಾಂತರೇಗೃಹೀತ್ವಾ ಬಹಿರ್ಗತ್ವಾ ಅದ್ಭಿಃಭೂಮಿಂಸಮ್ಮೃಜ್ಯ, ಪ್ರೋಕ್ಷ್ಯ

ಯೇಭೂತಾಃಪ್ರಚರಂತಿದಿವಾಬಲಿಮಿಚ್ಛಂತೋವಿತುದಸ್ಯ

ಪ್ರೇಷ್ಯಾಃತೇಭ್ಯೋಬಲಿಂಪುಷ್ಟಿಕಾಮೋಹರಾಮಿಮಯಿಪು

ಷ್ಟಿಂಪುಷ್ಟಿಪತಿರ್ದಧಾತುಸ್ವಾಹಾ,[1]

ಇತಿದತ್ವಾ, ದಿವಾಚರೇಭ್ಯೋಭೂತೇಭ್ಯಇದಂನಮಮ, ಇತ್ಯುಕ್ತ್ವಾ ಪರಿಷಿಚ್ಯ, ತತ್ಪುರತಃ.

ಐಂದ್ರವಾರುಣವಾಯವ್ಯಾಸ್ಸೌಮ್ಯಾಯಾಮ್ಯಾಶ್ಚ ನೈರುತಾಃ। ವಾಯಸಾಃಪ್ರತಿಗೃಹ್ಣಂತುಬಲಿಂಭೂಮೌಮಯಾರ್ಪಿತಂ, ಇತಿ ದತ್ವಾ,

ವಾಯಸೇಭ್ಯಇದಂ, ನಮಮ; ಇತ್ಯುಕ್ತ್ವಾ, ಪರಿಷಿಚ್ಯ, ತತ್ಪುರತಃ

ಯೌಶ್ವಾನೌಶ್ಯಾಮಶಬಳೌ

---

೧ ೨ } ಸಂಪ್ರದಾಯೇಸತಿದದ್ಯಾತ್.

ವೈವಸ್ವತಕುಲೋದ್ಭವೌ । ತಾಭ್ಯಾಂಬಲಿಂಪ್ರದಾಸ್ಯಾಮಿ
ಸ್ಯಾತಾಮೇತಾವಹಿಂಸಕೌ ॥ ಇತಿದತ್ವಾ.

ಶ್ವಭ್ಯಾಮಿದಂನಮಮ, ಇತ್ಯುಕ್ತ್ವಾ

ಪರಿಷಿಚ್ಯ ಪಾದೌಪ್ರಕ್ಷಾಳ್ಯ ಆಚಮ್ಯ,

ಭಾರ್ಯಾದಿನಾಧರ್ಮಾದಿದ್ವಾವಿಂಶತಿಬಲೀನ್ ಅನ್ಯತ್ರಾಪನೀ
ಯಪಿತೃಬಲಿಂ ರುದ್ರಬಲಿಂ ಬಹಿಃಪ್ರಕ್ಷಿಪ್ಯ ಅಗ್ನಿಸಮೀಪ
ಮಾಗತ್ಯಪ್ರಾಣಾನಾಯಮ್ಯ

ಶ್ರೀಭಗವದಾಜ್ಞಯಾ ಶ್ರೀಮನ್ನಾರಾಯಣಪ್ರೀತ್ಯರ್ಥಂ ಅಗ್ರದಾನಂ
ಕರಿಷ್ಯೇ, ಇತಿ ಸಂಕಲ್ಪ್ಯ.

ಅಗ್ನೇರುತ್ತರತಃ ಭೂಮಿಮದ್ಭಿಃ ಸಮ್ಮೃಜ್ಯಪ್ರೋಕ್ಷ್ಯ, ಅನ್ನಸ್ಯ
ಉತ್ತರಭಾಗತ್ರಯೇ ಪೂರ್ವಭಾಗೇ ಅನ್ನಮುಷ್ಟಿಮಾದಾಯ

ಅಕಾಮೋಪಹತಾಯಶ್ರೋತ್ರಿಯಾಯಾಗ್ರಂದದಾಮಿ, ಇತಿ ಭೂ
ಮೌ ನಿಧಾಯ, ಅಕಾಮೋಪಹತಾಯಶ್ರೋತ್ರಿಯಾಯೇದಂನಮಮ,
ಇತ್ಯುಕ್ತ್ವಾ–ಪರಿಷೇಚಯೇತ್.

## ಪಂಚಮಹಾ ಯಜ್ಞಕ್ರಮಃ

ಶ್ರೋತಾಚಮನಂಕೃತ್ವಾ, ಪ್ರಾಣಾನಾಯಮ್ಯ, ಶ್ರೀಭಗವದಾ
ಜ್ಞಯಾ ಶ್ರೀಮನ್ನಾರಾಯಣಪ್ರೀತ್ಯರ್ಥಂ ದೇವಯಜ್ಞೇನಯಕ್ಷ್ಯೇ,
ಇತಿ ಸಂಕಲ್ಪ್ಯ.

ವಿಷ್ಯಸಿವಿಶ್ವೇಮಾಪಾಸ್ಮಾನವ್ರತಾತ್ಸತ್ಯಮುಸ್ಯೈಮಿ,

ಇತಿ ದಕ್ಷಿಣಕರತಲೇನಅಪಉಪಸ್ಪೃಶ್ಯ ವಾಮಕರತಲಂಸಮ್ಮೃಜ್ಯ.

ಓಂ, ಅದಿತೇನುಮನ್ಯಸ್ವ,

ಓಂ, ಅನುಮತೇನುಮನ್ಯಸ್ವ,

ಓಂ, ಸರಸ್ವತೇನುಮನ್ಯಸ್ವ,
ದೇವಸವಿತಃಪ್ರಸುವ,

ಇತ್ಯಗ್ನಿಂಪರಿಷಿಚ್ಯ, ಅಗ್ನಾದರ್ಭಂಪ್ರಕ್ಷಿಪ್ಯ, ಉತ್ತರಭಾಗದ್ವಯೇ ಪಶ್ಚಿಮಭಾಗಾತ್ ಹವಿರ್ಗೃಹೀತ್ವಾ,

ಓಂ ದೇವೇಭ್ಯಸ್ಸ್ವಾಹಾ

ಇತ್ಯಾಗ್ನೌಹುತ್ವಾದೇವೇಭ್ಯಇದಂನಮಮ, ಇತ್ಯುಕ್ತ್ವಾ ದರ್ಭಂ ಪ್ರಕ್ಷಿಪ್ಯ,

ಓಂ ಅದಿತೇನ್ವಮಗ್ಂಸ್ಥಾಃ
ಅನುಮತೇನ್ವಮಗ್ಂಸ್ಥಾಃ
ಸರಸ್ವತೇನ್ವಮಗ್ಂಸ್ಥಾಃ
ದೇವಸವಿತಃಪ್ರಾಸಾವೀಃ

ಇತಿ ಪುನಃಪರಿಷಿಚ್ಯ,

ವೃಷ್ಟಿರಸಿವೃಶ್ಚಮೇಪಾಪ್ಮಾನಮೃತಾತ್ಸತ್ಯಮುಪಾಗಾಂ

ಇತಿ ದಕ್ಷಿಣಕರತಲೇನ ಅಪಉಪಸ್ಪೃಶ್ಯ ವಾಮಕರತಲಂಸಮ್ಮೃಜ್ಯ.

ಶ್ರೋತ್ರಾಚಮನಂಕೃತ್ವಾ, ಪ್ರಾಚೀನಾವೀತಿ, ಶ್ರೀಭಗವದಾಜ್ಞಯಾ ಶ್ರೀಮನ್ನಾರಾಯಣಪ್ರೀತ್ಯರ್ಥಂ ಪಿತೃಯಜ್ಞೇನಯಕ್ಷ್ಯೇ ಇತಿ ಸಂಕಲ್ಪ್ಯ.

ವಿದ್ಯುದಸಿವಿದ್ಯಮೇಪಾಪ್ಮಾನಮೃತಾತ್ಸತ್ಯಮುಪೈಮಿ

ಇತಿ ದಕ್ಷಿಣಕರತಲೇನ ಅಪಉಪಸ್ಪೃಶ್ಯ ವಾಮಕರತಲಂಸಮ್ಮೃ

ಜ್ಯ ಅಗ್ನೇರ್ದಕ್ಷಿಣತೋಭೂಮಿಮದ್ಭಿಸಮ್ಮೃಜ್ಯ, ಪ್ರೋಕ್ಷ್ಯ, ದೇವಯಜ್ಞಶೇಷಾದ್ಧವಿರ್ಗೃಹೀತ್ವಾ

ಓಂ ಪಿತೃಭ್ಯಸ್ಸ್ವಧಾನಮಸ್ಕರೋಮಿ

ಇತಿ ಪಿತೃತೀರ್ಥೇನಬಲಿಂನಿಧಾಯ

ಪಿತೃಭ್ಯ ಇದಂನಮಮ, ಇತ್ಯುಕ್ತ್ವಾ

ಅಪ್ರದಕ್ಷಿಣಂಪರಿಷಿಚ್ಯ.

ವೃಷ್ಟಿರಸಿವೃಶ್ಚಮೇಪಾಪ್ಮಾನಮೃತಾತ್ಸತ್ಯಮುಪಾಗಾಂ

ಇತಿ ದಕ್ಷಿಣಕರತಲೇನಅಪಉಪಸ್ಪೃಶ್ಯ, ವಾಮಕರತಲಂಸಮ್ಮೃಜ್ಯ, ಉಪವೀತಿ.

---

ಶ್ರೋತ್ರಾಚಮನಂಕೃತ್ವಾ, ಪ್ರಾಣಾನಾಯಮ್ಯ, ಶ್ರೀಭಗವದಾಜ್ಞಯಾ ಶ್ರೀಮನ್ನಾರಾಯಣಪ್ರೀತ್ಯರ್ಥಂ ಭೂತಯಜ್ಞೇನಯಕ್ಷ್ಯೇ, ಇತಿ ಸಂಕಲಪ್ಯ

ವಿದ್ಯುದಸಿವಿದ್ಯಮೇಪಾಪ್ಮಾನಮೃತಾತ್ಸತ್ಯಮುಪೈಮಿ

ಇತಿ ದಕ್ಷಿಣಕರತಲೇನ, ಅಪಉಪಸ್ಪೃಶ್ಯ, ವಾಮಕರತಲಂಸಮ್ಮೃಜ್ಯ, ಅಗ್ರದಾನಾತ್ಪಶ್ಚಿಮಭಾಗೇ ಅದ್ಭಿಸ್ಸಮ್ಮೃಜ್ಯಪ್ರೋಕ್ಷ್ಯ, ದೇವಪಿತೃಯಜ್ಞಶಿಷ್ಟಂಹವಿರ್ಗೃಹೀತ್ವಾ

ಓಂ ಭೂತೇಭ್ಯೋಬಲಿಗ್ಂಹರಾಮಿ

ಇತಿ ದೇವತೀರ್ಥೇನಭೂತಬಲಿಂದತ್ವಾ, ಭೂತೇಭ್ಯ ಇದಂನಮಮ, ಇತ್ಯುಕ್ತ್ವಾ, ಪರಿಷಿಚ್ಯ,

ವೃಷ್ಟಿರಸಿವೃಶ್ಚಮೇಪಾಪ್ಮಾನಮೃತಾತ್ಸತ್ಯಮುಪಾಗಾಂ

ಇತಿ ದಕ್ಷಿಣಕರತಲೇನ ಅಪಉಪಸ್ಪೃಶ್ಯ, ವಾಮಕರತಲಂಸಮ್ಮೃಜ್ಯ

---

ಶ್ರೋತಾಚಮನಂಕೃತ್ವಾ, ಪ್ರಾಣಾನಾಯಮ್ಯ, ಶ್ರೀಭಗವದಾ
ಜ್ಞಯಾ, ಶ್ರೀಮನ್ನಾರಾಯಣಪ್ರೀತ್ಯರ್ಥಂ ಮನುಷ್ಯಯಜ್ಞೇನ ಯ
ಕ್ಷ್ಯೇ ಇತಿಸಂಕಲ್ಪ್ಯ

ವಿದ್ಯುದಸಿವಿದ್ಯಮೇಪಾಪ್ಮಾನಮೃತಾತ್ಸತ್ಯಮುಪೈಮಿ

ಇತಿ ದಕ್ಷಿಣಕರತಲೇನ ಅಪಉಪಸ್ಪೃಶ್ಯ, ವಾಮಕರತಲಂಸಮ್ಮೃಜ್ಯ,
ಮಧ್ಯಮಭಾಗಾದಗ್ರದಾನಾನ್ನ ದ್ವಿಗುಣಂಗೃಹೀತ್ವಾ ಅಗ್ರಭೂತಬ
ಲ್ಯೋರ್ಮಧ್ಯೇ

ಮನುಷ್ಯೇಭ್ಯೋನ್ನಂದದಾಮಿಹಂತಾ

ಇತಿ ದೇವತೀರ್ಥೇನಭೂಮಾಬಲಿಂನಿಧಾಯ, ಮನುಷ್ಯೇಭ್ಯಇದಂನಮ
ಮ, ಇತ್ಯುಕ್ತ್ವಾ, ಪರಿಷಿಚ್ಯ,

ವೃಷ್ಟಿರಸಿವೃಶ್ಚಮೇಪಾಪ್ಮಾನಮೃತಾತ್ಸತ್ಯಮುಪಾಗಾಂ

ಇತಿ ದಕ್ಷಿಣಕರತಲೇನ ಅಪಉಪಸ್ಪೃಶ್ಯ, ವಾಮಕರತಲಂಸಮ್ಮೃಜ್ಯ

---

ಶ್ರೋತಾಚಮನಂಕೃತ್ವಾ, ಓಂ ವಿಷ್ಣವೇಸ್ವಾಹಾ, ಇತ್ಯಗ್ನಿ
ದರ್ಭಂಪ್ರಕ್ಷಿಪ್ಯ, ಶ್ರೀವಿಷ್ಣವೇಪರಮಾತ್ಮನೇ, ಇದಂನಮಮ, ಇತ್ಯು
ಕ್ತ್ವಾ ಉತ್ಥಾಯ

ಅಗ್ನೇನಯಸುಪಥಾರಾಯೇ ಅಸ್ಮಾನ್ವಿಶ್ವಾನಿದೇವವಯು

ನಾನಿವಿದ್ವಾನ್ಯುಯೋಧ್ಯಸ್ಮಜ್ಜುಹುರಾಣಮೇನೋಭೂಯಿ

ಷ್ಠಾಂತೇನಮಉಕ್ತಿಂವಿಧೇಮ,

ಓಂ ಅಗ್ನಯೇ ನಮಃ, ಮಂತ್ರಹೀನಂಕ್ರಿಯಾಹೀನಂಭಕ್ತಿ
ಹೀನಂಹುತಾಶನ । ಯದ್ಧುತಂತುಮಯಾದೇವಪರಿಪೂ
ರ್ಣಂತದಸ್ತುತೇ । ಪ್ರಾಯಶ್ಚಿತ್ತಾನ್ಯಶೇಷಾಣಿತಪಃಕ
ರ್ಮಾತ್ಮಕಾನಿವೈ । ಯಾನಿತೇಷಾಮಶೇಷಾಣಾಂಕೃಷ್ಣಾ
ನುಸ್ಮರಣಂಪರಂ । ಇತ್ಯುಪಸ್ಥಾಯ, ಪ್ರಣಮ್ಯ ಅಭಿವಾ
ದಯೇತ್.

ಬಹಿರ್ನಿರ್ಗತ್ಯ ಆಚಮ್ಯ ಪಿತೃಬಲಿಮನ್ಯೇನಬಹಿಃಪ್ರಕ್ಷಿಪ್ಯ, ಪಾತ್ರಸ್ಥಂಉತ್ತರಭಾಗಾವಶಿಷ್ಟಾನ್ನಂ ಭೋಜನಾರ್ಥೇನಸಂಯೋಜಯೇತ್ ದಕ್ಷಿಣಭಾಗಾವಶಿಷ್ಟಾನ್ನಂಪರಿಹರೇತ್.

ಭಗವಾನೇವಸ್ವನಿಯಾಮ್ಯಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತೈಕರಸೇನ ಮಯಾಸ್ವಕೀಯೈಶ್ಚೋಪಕರಣೈಃ ಸ್ವಾರಾಧನೈಕಪ್ರಯೋಜನಾಯ ಪರಮಪುರುಷಸ್ಸರ್ವಶೇಷೀಸ್ವಶೇಷಭೂತಮಿದಂ ವೈಶ್ವದೇವಾಖ್ಯಂ ಕರ್ಮಸ್ವಸ್ಮೈಸ್ವಪ್ರೀತಯೇಸ್ವಯಮೇವಕಾರಿತವಾನ್. ಇತಿ ಸಾತ್ವಿಕತ್ಯಾಗಂಕೃತ್ವಾ ಅನೇನ ವೈಶ್ವದೇವಾಖ್ಯೇನಕರ್ಮಣಾ ಭಗವಾನ್ಪ್ರೀಯತಾಂ, ವಾಸುದೇವಃ ಇತಿವೈಶ್ವದೇವಂಸಮಾಪಯೇತ್.

ತತೋಯತಿಭ್ಯಃಬ್ರಹ್ಮಚಾರಿಭ್ಯಃ ಭಿಕ್ಷಾಂದದ್ಯಾತ್, ವೈಶ್ವದೇವಾತ್ಪೂರ್ವಂ ಯತಯೋಭಿಕ್ಷಾರ್ಥಮಾಗತಾಶ್ಚೇತ್ ವೈಶ್ವದೇವಾರ್ಥಮನ್ನಮುದ್ಧೃತ್ಯ ಪಾತ್ರಾಂತರೇನಿಧಾಯ ಯತಿಭ್ಯೋಭಿಕ್ಷಾಂದದ್ಯಾತ್ ಉದ್ಧೃತಾನ್ನೇನವೈಶ್ವದೇವಂಕುರ್ಯಾತ್.

---

ತತಃ [1]ಅತಿಥಿಮಾಕಾಂಕ್ಷನ್ಗೋದೋಹನಮಾತ್ರಾದಿಸ್ಪೃಕ್ಷಸ್ಥಿತ್ವಾ ಅತಿಥೀನ್ ಅಭ್ಯಾಗತಾನ್ ಬಾಲಾನ್ ವೃದ್ಧಾನ್ ರೋಗಿಣಃ ಗರ್ಭಿಣೀಃ ಪರಿಚಾರಕಾಂಶ್ಚ ಪ್ರಥಮಂಭೋಜಯೇತ್.

---

೧ ಏಕರಾತ್ರಂಪರಗೃಹೇವಸನ್ ಅಜ್ಞಾತೋಬ್ರಾಹ್ಮಣಃ ಅತಿಥಿಃಜ್ಞಾತಸ
ಅಭ್ಯಾಗತಃ

ನಾಡಿಕಾಯಾಶ್ಚತುರ್ಭಾಗಃ ಗೋದೋಹನಮಾತ್ರಂ.

## ಅಥ ಭೋಜನವಿಧಿಃ

ಆಪಸ್ತಂಬಃ॥ ಭೋಕ್ಷ್ಯಮಾಣಸ್ತುಪ್ರಯತೋಽಪಿದ್ವಿರಾಚಾಮೇತ್॥

ತಾತ್ಪರ್ಯ॥ ಪರಿಶುದ್ಧನಾಗಿದ್ದಾಗ್ಯೂ ಭೋಜನಕ್ಕೆ ಪೂರ್ವ ದ್ವಿರಾವೃತ್ತಿ ಆಚಮನವಂ ಮಾಡತಕ್ಕದ್ದು.

ಮನುಃ॥ ಸಾಯಂಪ್ರಾತರ್ದ್ವಿಜಾತೀನಾಂ ಅಶನಂಶ್ರುತಿಚೋದಿತಂ । ನಾಂತರಾಭೋಜನಂಕುರ್ಯ್ಯಾದಗ್ನಿಹೋತ್ರಸಮೋ ವಿಧಿಃ ॥

ತಾತ್ಪರ್ಯ॥ ಸಾಯಂಪ್ರಾತಃ ಭೋಜನವು ಶ್ರುತಿವಿಹಿತವಾಗಿರುವ ಪ್ರಯುಕ್ತ ಮಧ್ಯೇ ಭೋಜನಮಾಡಕೂಡದು. ಈ ನಿಯಮದೊಡನೆ ಮಾಡಲ್ಪಡುವ ಸಾಯಂಪ್ರಾತರ್ಭೋಜನವು ಅಗ್ನಿಹೋತ್ರಕ್ಕೆ ಸಮಾನವಾದುದು.

ಅಖಂಡಾದರ್ಶೇ॥ ಚತುರಶ್ರಂತ್ರಿಕೋಣಂಚ ವರ್ತುಲಂಚಾರ್ಧಚಂದ್ರಕಂ। ಕರ್ತವ್ಯಮಾನುಪೂರ್ವ್ಯೇಣ ಬ್ರಾಹ್ಮಣಾದಿಷುಮಂಡಲಂ ॥

ಆತ್ರೇಯಃ॥ ಪಾತ್ರಾವಸ್ಥಾನತೋನ್ಯೂನಂ ಅಧಿಕಂವಾನಕಾರಯೇತ್ । ಶೂದ್ರಸ್ಯಾಭ್ಯುಕ್ಷಣಂಸ್ಮೃತಂ ॥

ತಾತ್ಪರ್ಯ॥ ಭೋಜನಮಾಡುವಪಾತ್ರ (ಎಲೆ) ಕ್ಕೆ ಸರಿಯಾಗಿ ಸ್ಥಳಶುದ್ಧಿಯನ್ನ ಮಾಡಬೇಕು. ಆ ಕ್ರಮವು ಹೇಗೆಂದರೆ—

ಬ್ರಾಹ್ಮಣರಿಗೆ ಚತುರಶ್ರ (ಚೌಕ) ವಾಗಿಯೂ, ಕ್ಷತ್ರಿಯರಿಗೆ ತ್ರಿಕೋಣವಾಗಿಯೂ, ವೈಶ್ಯರಿಗೆ ವರ್ತುಲ (ದುಂಡು) ವಾಗಿಯೂ, ಶೂದ್ರರಿಗೆ ಅರ್ಧಚಂದ್ರಾಕಾರವಾಗಿಯೂ ಮಾಡತಕ್ಕದ್ದು.

ವ್ಯಾಸಃ॥ ಪ್ರಾಙ್ಮುಖೋನ್ನಾನಿಭುಂಜೀತ
ಸೂರ್ಯಾಭಿಮುಖಏವವಾ ॥

ತಾತ್ಪರ್ಯ॥ ಪೂರ್ವಾಭಿಮುಖನಾಗಿಯೇ ಭೋಜನಮಾಡತಕ್ಕದ್ದು ಇದು ನಿಯಮವಿಧಿಯು.

ಕಾಮ್ಯವಿಷಯೇಮನುಃ॥ ಆಯುಷ್ಯಂಪ್ರಾಙ್ಮುಖೋಭುಂಕ್ತೇ
ಯಶಸ್ಯಂದಕ್ಷಿಣಾಮುಖಃ। ಶ್ರಿಯಂಪ್ರತ್ಯಙ್ಮುಖೋಭುಂ
ಕ್ತೇ ಋತಂಭುಂಕ್ತ್ಯುದಙ್ಮುಖಃ॥ ಇತಿ

ಸ್ಮೃತ್ಯಂತರೇ॥ ಪನಸಾಮ್ರನಾರಿಕೇಳಕದಳೀಬಿಲ್ವಪತ್ರಕೇ।

ಸ್ಮೃತಿಮಾಧವೀಯೇ॥ ಸೌವರ್ಣೇರಾಜತೇಕಾಂಸ್ಯೇ ಪದ್ಮ
ಪತ್ರಪಲಾಶಯೋಃ॥

ತಾತ್ಪರ್ಯ॥ ಹಲಸು, ಮಾವು, ತೆಂಗು, ಬಾಳೆ, ಬಿಲ್ವ, ಕಮಲ, ಪಲಾಶ (ಮುತ್ತುಗ) ಪತ್ರಗಳಲ್ಲಿಯೂ, ಸ್ವರ್ಣ, ರಜತ, (ಬೆಳ್ಳಿ) ಕಾಂಸ್ಯ ಪಾತ್ರ (ತಟ್ಟೆ) ಗಳಲ್ಲಿಯೂ ಭೋಜನಮಾಡಬಹುದು.

ಸ್ಮೃತಿಸಂಗ್ರಹೇ॥ ಕರೇಕರ್ಪಟಕೇಚೈವಪಾಷಾಣೇತಾ
ಮ್ರಭಾಜನೇ। ವಟಾಶ್ವತ್ಥಾರ್ಕಪರ್ಣೇಷುಭುಕ್ತ್ವಾಚಾಂ
ದ್ರಾಯಣಂಚರೇತ್॥

ತಾತ್ಪರ್ಯ॥ ಹಸ್ತದಲ್ಲಿಯೂ, ವಸ್ತ್ರದಲ್ಲಿಯೂ, ಶಿಲೆಯಲ್ಲಿಯೂ, ತಾಮ್ರಪಾತ್ರದಲ್ಲಿಯೂ, ಆಲದಯಲೆಯಲ್ಲಿಯೂ, ಅಶ್ವತ್ಥಪರ್ಣದಲ್ಲಿಯೂ, ಆರ್ಕಪತ್ರದಲ್ಲಿಯೂ, ಭೋಜನಮಾಡಬಾರದು. ಈ ನಿಷಿದ್ಧ ಪಾತ್ರಗಳಲ್ಲಿ ಬಹುಕಾಲ ಭೋಜನಮಾಡಿದರೆ ಚಾಂದ್ರಾಯಣವ್ರತವಂ ಮಾಡಬೇಕು.

## ಪರಿಷೇಚನವಿಧಿಃ

ಸುಮಂತುಃ॥ ಅನ್ನಂನಿಧಾಯದ್ರವ್ಯತುನಹಸ್ತೇನಕದಾಚನ।
ಪರಾಶರಃ॥ ತತೋಮಹಾವ್ಯಾಹೃತಿಭಿಃಪಾತ್ರಂತತ್ಪರಿಷಿಚ್ಯಚ।
ಸತ್ಯಂತ್ವರ್ತೇನಚಾದ್ಭಿಶ್ಚ ಹಸ್ತಂಪ್ರಕ್ಷಾಳಯೇತ್ತತಃ॥

ಅನ್ಯತ್ರ॥ ಆಸೀನಶ್ಚಾಸನೇಭೋಕ್ತುಂಪಾದೌಭೂಮೌಪ್ರತಿಷ್ಠಿತೌ॥

ತಾತ್ಪರ್ಯ॥ ಭೋಜನಾಸನದಲ್ಲಿ ಕುಳಿತು ಭೋಜನಮಾಡತಕ್ಕ ಸಂದರ್ಭದಲ್ಲಿ ಪಾದಗಳು ಭೂಮಿಯಲ್ಲಿ ಸ್ಪರ್ಶವಾಗಿರುವಂತೆ ಕೂತು ಕೊಳ್ಳಬೇಕು.

ಪಾತ್ರದಲ್ಲಿ ಅನ್ನವನ್ನ ದರ್ವಿ (ಸೌಟು) ಯಿಂದಲೇ ಪರಿವೇಷಣ ಮಾಡತಕ್ಕದ್ದು (ಬಡಿಸತಕ್ಕದ್ದು).

ಅನಂತರ ಮಹಾವ್ಯಾಹೃತಿಗಳಿಂದ ಪಾತ್ರಪರಿಷೇಚನ (ಎಲೆಯ ಸುತ್ತಲೂ ಉದಕವನ್ನ ಧಾರೆಯಾಗಿಬಿಡುವದು) ವಂ ಮಾಡಿ, ಪುನಃ ಸತ್ಯಂತ್ವರ್ತೇನ ಎಂಬ ಮಂತ್ರದಿಂದ ದ್ವಿತೀಯ ಪರಿಷೇಚನವಂಮಾಡಿ ಹಸ್ತಪ್ರಕ್ಷಾಳನವಂ ಮಾಡಿಕೊಳ್ಳತಕ್ಕದ್ದು.

ಬೋಧಾಯನಃ॥ ಮಹಾವ್ಯಾಹೃತಿಭಿಃಪ್ರದಕ್ಷಿಣಮನ್ನಮುದ
ಕಂಪರಿಷಿಚ್ಯ ಸವ್ಯೇನಾಮುಂಚರ್ನ ॥

ಉಶನಾಪಿ॥ ಸತ್ಯಂತ್ವರ್ತೇನೇತ್ಯನೇನೋದಕಂಪರಿಷಿಚ್ಯ
ಅಮೃತೋಪಸ್ತರಣಮಸೀತಿಪ್ರಾಶಯೇತ್ ॥

ತಾತ್ಪರ್ಯ॥ ಮಹಾವ್ಯಾಹೃತಿಗಳಿಂದಲೂ, ಸತ್ಯಂ, ಎಂಬ ಮಂತ್ರ ದಿಂದಲೂ ಪರಿಷೇಚನಗಳಂಮಾಡಿ (ಅನ್ನವನ್ನ ಲಂಘನಮಾಡದೇ ಪರಿ ಷೇಚನವಂ ಮಾಡಬೇಕು) ಎಡಹಸ್ತದಿಂದ ಪಾತ್ರಸ್ಪರ್ಶವಂ ಮಾಡಿ ಕೊಂಡು ಆಪೋಶನವಂ ಮಾಡತಕ್ಕದ್ದು.

## ಆಪೋಶನವಿಧಿಃ.

ಸ್ಮೃತ್ಯರ್ಥಸಾರೆ॥ ಆಪೋಶನಂ ವಾಮಭಾಗೇ ಸುರಾಪಾನಸ
ಮಂಭವೇತ್ । ತದೇವದಕ್ಷಿಣೇಭಾಗೇಸೋಮಪಾನ
ಸಮಂಭವೇತ್ ॥

ಮಾರ್ಕಂಡೇಯಃ॥ ಹಸ್ತೇನಲಂಘಿತಂಚಾನ್ನಂಅಭೋಜ್ಯಂ
ಮನುರಬ್ರವೀತ್ ॥

ತಾತ್ಪರ್ಯ॥ ಆಪೋಶನವನ್ನು ಎಡಭಾಗದಲ್ಲಿಮಾಡಿದರೆ ಅದು ಸುರಾಪಾನದಂತೆ ನಿಷಿದ್ಧವಾದದ್ದರಿಂದ ಬಲಭಾಗದಲ್ಲಿ ಆಪೋಶನಮಾಡಬೇಕು. ಇದು ಅಮೃತಪಾನಕ್ಕೆ ಸಮಾನವಾದುದು.

ಅನ್ನವನ್ನು ಹಸ್ತದಿಂದ ದಾಟಬಾರದು. ಅಂತಹ (ದಾಟಿದ) ಅನ್ನವು ಭೋಜನಾರ್ಹವಾದುದಲ್ಲ.

ಪುರಾಣೇ॥ ಆಪೋಶನಂಚಾಸನಂಚತೈಲಾಭ್ಯಂಗಂತಥೈವಚ ।
ಸ್ವಯಂಕರಕೃತಂಪ್ರೋಕ್ತಂಆಯುಃಶ್ರೀಪುತ್ರಹಾನಿದಂ ॥

ತಾತ್ಪರ್ಯ। ಆಪೋಶನವನ್ನು ತಾನೇ ತನ್ನಹಸ್ತದಿಂದ ತೆಗದುಕೊಳ್ಳಬಾರದು. ಅದರಂತೆ ಆಸನವನ್ನು ತಾನೇಹಾಕಿಕೊಳ್ಳಬಾರದು. ತನಗೆ ತಾನೇ ಎಣ್ಣೆಯನ್ನು ಪೊತ್ತಿಕೊಳ್ಳಬಾರದು. ಈ ನಿಯಮವನ್ನು ಉಲ್ಲಂಘಿಸಿದ್ದಾದರೆ ಕ್ರಮವಾಗಿ ಆಯುರೈಶ್ವರ್ಯ ಪುತ್ರಹಾನಿಯಾಗುವುದು.

ಶಾಂಡಿಲ್ಯಃ॥ ಭೋಜನಾದ್ಯಂತಯೋರ್ದಿವ್ಯಪಾದಾಂಬ್ವೇಕಂ
ಸಮಂತ್ರಕಂ । ಪಿಬೇದಪ್ಯಂಸದ್ಭಕ್ತೋವಿಮಿಶ್ರಿತಂವಾರ್ಘ್ಯ
ಣಾದಿಭಿಃ ॥

ತಾತ್ಪರ್ಯ॥ ಪೂರ್ವಾಪೋಶನ ಉತ್ತರಾಪೋಶನಗಳಲ್ಲಿ ಭಗವತ್ಪಾದೋದಕವನ್ನೇ ಸ್ವೀಕರಿಸಬೇಕು. ಅಥವಾ ಅರ್ಘ್ಯಾದಿಮಿಶ್ರಿತವಾದ ಪಾದೋದಕವನ್ನಾದರೂ ವಿನಿಯೋಗಿಸಬಹುದು.

ಆಪಸ್ತಂಬಃ॥ ನಾಪಜಹೀತಾಪಜಹೀತಾವಾ।

ತಾತ್ಪರ್ಯ॥ ಭೋಜನಪರ್ಯಂತ ವಾಮಹಸ್ತದಿಂದ ಪಾತ್ರ (ಭೋಜನಮಾಡುವ ಎಲೆ) ವನ್ನು ಸ್ಪರ್ಶಿಸಿಕೊಂಡೇ ಇರತಕ್ಕದ್ದು. ಅಥವಾ ಪ್ರಾಣಾಹುತ್ಯನಂತರ ಬಿಟ್ಟರೂಬಿಡಬಹುದು.

## ಪ್ರಾಣಾಹುತಿ ನಿಯಮಃ.

ಸ್ಮೃತ್ಯರ್ಥಸಾರೇ॥ ಆಸ್ಯೇಪಾನ್ನಸ್ಯನಿಕ್ಷೇಪೋಮಂತ್ರೈಃಪ್ರಾ
ಣಾದಿಸಂಜ್ಞಕೈಃ । ತದೇವಭೋಜನಂಜ್ಞೇಯಂತತ್ರೈ

ಪನಿಯಮಸ್ಮೃತಾಃ ॥ ಸಮುತ್ಥಿತಸ್ತುಯೋಭುಂಕ್ತೆಯೋ
ಭುಂಕ್ತೆಮುಕ್ತಭಾಜನೇ । ಏವಂವೈವಸ್ವತಃಪ್ರಾಹಭು
ಕ್ತ್ವಾಸಾಂತಪನಂಚರೇತ್-ಇತಿ ಪ್ರಾಯಶ್ಚಿತ್ತಸ್ಮೃತೇಃ
ಅವಶ್ಯಂಪಾತ್ರಸ್ಪರ್ಶಃಕಾರ್ಯಃ, ಇತಿ ಸಾರ್ವಭೌಮಾಃ ॥

ತಾತ್ಪರ್ಯ॥ ಪಂಚಪ್ರಾಣಾಹುತಿಯೇ ಭೋಜನಶಬ್ದವಾಚ್ಯವಾದ ಪ್ರಯುಕ್ತ ನಿಯಮದೊಡನೆಯೇ ಪ್ರಾಣಾಗ್ನಿಹೋತ್ರವು ಅನುಷ್ಠಿಸಲ್ಪಡತಕ್ಕದ್ದು.

ಉತ್ತರಾಪೋಶನಾತ್ಪೂರ್ವ (ಮಧ್ಯೆ) ಎದ್ದುಹೋಗಿ ಪುನಃ ಬಂದು ಕುಳಿತುಕೊಂಡು ಭೋಜನಮಾಡಿದರೂ, ವಾಮಹಸ್ತದಿಂದಪಾತ್ರಸ್ಪರ್ಶನವಿಲ್ಲದೇಭೋಜನಮಾಡಿದರೂ ಸಾಂತಪನಕೃಚ್ಛ್ರವನ್ನ ಪ್ರಾಯಶ್ಚಿತ್ತವಾಗಿ ಅನುಷ್ಠಿಸಬೇಕು.

ಸ್ಮೃತ್ಯಂತರೆ॥ ಕಾರ್ಯೇಹಸ್ತಮಪೋಶಾನೇಪ್ರಕ್ಷಾಳ್ಯವಸ
ಮಂತ್ರಕಂ । ಜಲಂಪೀತ್ವಾತತಃಪಂಚಪುತ್ವಾ ಭುಂಜೀತ
ಚಾಹುತೀಃ ॥

ತಾತ್ಪರ್ಯ॥ ಪರಿಶೇಚನಾನಂತರ ದಕ್ಷಿಣಹಸ್ತವಂ ತೊಳೆದುಕೊಂಡು ಅನಂತರ ಸಮಂತ್ರಕವಾಗಿ ಆಪೋಶನವಂಮಾಡಿ ಪಂಚಪ್ರಾಣಾಹುತಿಯಂ ಮಾಡತಕ್ಕದ್ದು.

ಆಗಮಪ್ರಮಾಣ್ಯೆ॥ ಹೃದಿಧ್ಯಾಯರ್ಹರಿಂತಸ್ಮೈನಿವೇದ್ಯಾ
ನ್ನಂಸಮಾಹಿತಃ । ಮಧ್ಯಮಾನಾಮಿಕಾಂಗುಷ್ಟೈರ್ಜು
ಹುಯಾದಾಹುತೀಃಕ್ರಮಾತ್ ॥

ತಾತ್ಪರ್ಯ। ಹೃದಯಾಂತರ್ವರ್ತಿಯಾದ ನಾರಾಯಣನಿಗೆ ಅನ್ನವನ್ನ ಪ್ರಥಮತಃ ನಿವೇದನಮಾಡಿ, ಮಧ್ಯಮ, ಅನಾಮಿಕ, ಅಂಗುಷ್ಠ ಬೆರಳುಗಳಿಂದ ಪಂಚಪ್ರಾಣಾಹುತಿಗಳನ್ನ ಮಾಡತಕ್ಕದ್ದು.

ಸುಮಂತುಃ ॥ ದಂತಚರ್ವಣಮಾಹುತೀನಾಂವರ್ಜಯೇತ್
ಅಂತರೇನಿಸಿರೇತ್॥

ತಾತ್ಪರ್ಯ॥ ಪಂಚಪ್ರಾಣಾಹುತ್ಯನ್ನವನ್ನ ದಂತಗಳಿಂದ ಅಗಿಯ
ಬಾರದು ಸುಮ್ಮನೇ ನುಂಗಬೇಕು.

ಹಾರೀತಃ॥ ಪಂಚಪ್ರಾಣಾಹುತೀಃಕುರ್ಯಾತ್ಶುದ್ಧಾನ್ನೈರಭಿ
ಘಾರಿತೈಃ । ಉಚ್ಛಿಷ್ಟೇನಘೃತಂದದ್ಯಾತ್ಪ್ರಾಗ್ಘೃತೇಲವ
ಣಾನ್ವಿತಂ ॥

ತಾತ್ಪರ್ಯ॥ ಪಂಚಪ್ರಾಣಾಹುತಿಗಳನ್ನು, ಅಭಿಘಾರಿತವಾದ ಶು
ದ್ಧಾನ್ನಗಳಿಂದಲೇ ಅನುಷ್ಠಿಸಬೇಕು. ಪ್ರಾಣಾಗ್ನಿಹೋತ್ರಕ್ಕೆ ಪೂರ್ವ
ಲವಣಮಿಶ್ರವಾದ ಪದಾರ್ಥಗಳನ್ನು ಬಡಿಸಬಾರದು. ಉಚ್ಛಿಷ್ಟದಲ್ಲಿ
ತುಪ್ಪವನ್ನ ಬಿಡಬಾರದು.

ಪರಾಶರಃ ॥ ಪ್ರಾಣಾಹುತೇಸ್ತುಯಃಪೂರ್ವಂಲವಣಾನಿತ್ವ
ವಿಹಾಕ್ಷತಿ । ತದನ್ನಂವರ್ಜಯೇದ್ವಿದ್ವಾನ್ಭಕ್ಷಯನ್ಸರ್ವ
ದೋಷಭಾಕ್ ॥

ತಾತ್ಪರ್ಯ॥ ಪ್ರಾಣಾಹುತಿಗಿಂತಲೂಪೂರ್ವ ಪಾತ್ರೆ (ಎಲೆ) ಯ
ಲ್ಲಿ ಲವಣಮಿಶ್ರವಾದ ಪದಾರ್ಥವನ್ನ ಪರಿವೇಷಣಮಾಡಿದ್ದರೆ ಆ ಅನ್ನ
ವನ್ನ ವರ್ಜಿಸಬೇಕು. ಭೋಜನಮಾಡಿದ್ದಾದರೆ ಸಕಲದೋಷಕ್ಕೂ
ಪಾತ್ರನಾಗುವನು.

ಅತ್ರಿಃ। ಶಬ್ದೇನಾಪಃಪಯಃಪೀತ್ವಾಶಬ್ದೇನಘೃತಪಾಯಸಂ।
ಶಬ್ದೇನಾಪೋಶನಂಕೃತ್ವಾಸುರಾಪಾನಸಮಂಭವೇತ್ ॥

ತಾತ್ಪರ್ಯ॥ ಕ್ಷೀರ, ಘೃತ, ಪಾಯಸಾದಿಗಳನ್ನ ಶಬ್ದವಾಗುವಂತೆ
ಪಾನಮಾಡಬಾರದು.

ಸಚ್ಚರಿತ್ರಸುಧಾನಿಧೌ ॥ ಪ್ರಾಣಾಹುತೇಃಪೂರ್ವಮನ್ನೇಘೃತೇನಾನಭಿಘಾರಿತೇ । ಯದ್ಯುಚ್ಛಿಷ್ಟೇಽಪತ್ತ್ವಮಾಜ್ಯಂತದನ್ನಂಪರಿವರ್ಜಯೇತ್ ॥

ತಾತ್ಪರ್ಯ॥ ಪ್ರಾಣಾಹುತಿಗೆಪೂರ್ವ ಅನ್ನವು ಘೃತಾಭ್ಯಕ್ತವಾಗದೇ ಯಿರುವಪಕ್ಷ, ಉಚ್ಛಿಷ್ಟದಲ್ಲಿ ಘೃತವನ್ನ ಉಪಯೋಗಿಸಬಾರದು (ಪಂಚಪ್ರಾಣಾಹುತಿಗೆ ತುಪ್ಪವನ್ನ ಉಪಯೋಗಿಸಿ ಇದ್ದರೆ ಉಚ್ಛಿಷ್ಟದಲ್ಲಿ ಘೃತವನ್ನ ಉಪಯೋಗಿಸಬಹುದು ಎಂದು ಭಾವ).

ಪರಾಶರಃ ॥ ಏಕಪಂಕ್ತ್ಯುಪವಿಷ್ಟಾನಾಂದುಷ್ಕೃತಂಯದುದ್ಧರಾತ್ಮನಾಂ । ಸರ್ವೇಷಾಂತತ್ಸಮಾನಂಸ್ಯಾತ್ಯದಿಪಂಕ್ತಿರ್ನಭಿದ್ಯತೇ ॥ ಅಗ್ನಿನಾಭಸ್ಮನಾವಾಪಿಸ್ತಂಭೇನಸಲಿಲೇನವಾ । ದರ್ಭಾದಿನಾಚಮಾರ್ಗೇಣಪಂಕ್ತಿಭೇದೋವಿಧೀಯತೇ ॥

ತಾತ್ಪರ್ಯ॥ ಏಕಪಂಕ್ತಿಯಲ್ಲಿ ಭೋಜನಮಾಡುವವರ ಮಧ್ಯದಲ್ಲಿ ಯಾವನಾದರೂ ದೋಷಿಯಿರುಪಕ್ಷ, ಆವನೊಡನೆ ಏಕಪಂಕ್ತಿಯಲ್ಲಿ ಭೋಜನಮಾಡಿದವರೆಲ್ಲಾ ಅವನಂತೆಯೇ ದೋಷಿಗಳಾಗುವವು ಯುಕ್ತ ಪಂಕ್ತಿಭೇದದಿಂದ ಭೋಜನಮಾಡಬೇಕು.

ಅಗ್ನಿಯಿಂದಲೋ, ಉದಕದಿಂದಲೋ, ಕಂಬದಿಂದಲೋ, ಭಸ್ಮದಿಂದಲೋ, ಮಾರ್ಗದಿಂದಲೋ, ದರ್ಭಾದಿಗಳಿಂದಲೋ ಪಂಕ್ತಿಭೇದವಂ ಮಾಡಿಕೊಂಡು ಭೋಜನಮಾಡಬೇಕು.

ಸ್ಮೃತಿರತ್ನಾಕರೇ॥ ಅಪ್ಯೇಕಪಂಕ್ತ್ಯಾಂನಾಶ್ನೀಯಾತ್ಬ್ರಾಹ್ಮಣಃಸ್ವಜನೈರಪಿ । ಕೋಹಿಜಾನಾತಿಕಿಂಕಸ್ಯಪ್ರಚ್ಛನ್ನಂಪಾತಕಂಭವೇತ್ ॥

ತಾತ್ಪರ್ಯ॥ ಬ್ರಾಹ್ಮಣನು ಸ್ವಜನಗಳೊಡನೆ ಕೂಡಾ ಏಕಪಂಕ್ತಿಯಲ್ಲಿ ಬೋಜನಮಾಡಬಾರದು. ಪ್ರಚ್ಛನ್ನವಾಗಿ ಇತರರಿಂದ ಮಾಡಲ್ಪಟ್ಟರುವ ಪಾಪವನ್ನು ಯಾರುತಾನೇ ತಿಳಿದಿರುವರು.

# ಅಥ ಭೋಜನ ಪ್ರಯೋಗ.

ಪಾದೌಪ್ರಕ್ಷಾಳ್ಯ, ದ್ವಿರಾಚಮ್ಯ, ಪ್ರಣವೋಚ್ಚಾರಣವಂಗೈದು ಗೋಮಯೋದಕದಿಂದ ನ್ಯೂನಾಧಿಕವಾಗದಂತೆ ಚತುರಶ್ರವಾಗಿ ಸ್ಥಳ ಶುದ್ಧಿಯಂಮಾಡಿ ನೇರ್ಲೆ, ಹಲಸು, ಮಾವು, ತೆಂಗು, ಮುತ್ತುಗ, ಬಾಳೆ ಲೆಗಳನ್ನಾಗಲೀ, ಸುವರ್ಣ, ರಜತ, ಭಾಜನ (ತಟ್ಟೆ) ಗಳನ್ನಾಗಲಿ ಹಾಕಿ, ಪಾನಪಾತ್ರ (ಪಂಚಪಾತ್ರೆ ಮೊದಲಾದುದು) ವಂ ಬಲಭಾಗದಲ್ಲಿಟ್ಟು ಕೊಂಡು ಪೂರ್ವಾಭಿಮುಖನಾಗಿ ಪಂಚಾರ್ದ್ರನಾಗಿ ಕುಕ್ಕುಟಾಸನದಲ್ಲಿ ಕುಳಿತುಕೊಳ್ಳುವದು.

ವರ್ತುಲ ಪವಿತ್ರವನ್ನ ಅನಾಮಿಕಾ ಬೆರಳಿನಲ್ಲಿ ಧರಿಸಿ ಪತ್ನ್ಯಾದಿಗಳಿಂದ ಪರಿವೇಷಣ ಮಾಡಲ್ಪಟ್ಟ (ಬಡಿಸಲ್ಪಟ್ಟ) ಆಜ್ಯಸಿಕ್ತವಾದ ಅನ್ನವನ್ನ ನೋಡಿ, ಕೈಮುಗಿದು ಭಗವದನುಗ್ರಹದಿಂದ ನಿತ್ಯವೂ ಹೀಗೆ ಸಿದ್ಧಸಲಿ ಎಂದು ಹೇಳಿ.

ಭಗವತ್ಪಾದೋದಕದಿಂದಲೋ, ಅಥವಾ ಶುದ್ಧೋದಕದಿಂದಲೋ ವ್ಯಾಹೃತಿಗಳಿಂದ ಪ್ರೋಕ್ಷಿಸಿ ಶೋಷಣಾದಿಗಳಿಂದ ವಿಶೋಧಿಸಿ ವ್ಯಾಹೃತಿಗಳಿಂದಲೂ ಇತರ ಮಂತ್ರಗಳಿಂದಲೂ ಅಭಿಮಂತ್ರಣ ಮಾಡಿ ಅಂತರ್ಯಾಮಿಯಾದ ಭಗವಂತನಿಗೆ ನಿವೇದನ ಮಾಡಿ, (ಪರಗೃಹದಲ್ಲಿ ಭೋಜನ ಸಂದರ್ಭದಲ್ಲಿ ತನ್ನ ಆರಾಧ್ಯ ಅರ್ಚಾವಿಗ್ರಹಕ್ಕೂ ಅಂತರ್ಯಾಮಿಗೂ ನಿವೇದನ ಮಾಡುವದು) ಪ್ರಣವ ವ್ಯಾಹೃತಿಗಳಿಂದ (ಓಂ ಭೂರ್ಭುವಸ್ಸುವಃ) ಪ್ರಥಮ ಪರಿಷೇಚನವಂ ಮಾಡಿ ಅನಂತರ ಭಾರ್ಯಾದಿಗಳಿಂದ ಕೊಡಲ್ಪಟ್ಟ ಅರ್ಘ್ಯಜಲದಿಂದ, "ಸತ್ಯಂತ್ವರ್ತೇನ ಪರಿಷಿಂಚಾಮಿ" ಎಂದುದ್ವಿತೀಯ ಪರಿಷೇಚನವಂ ಮಾಡಿ.

---

೧ ಕಾಲುಗಳನ್ನು ತೊಳೆದುಕೊಂಡು ಆಚಮನವಂ ಮಾಡಿ ಎಂದು ಭಾವ.

೨ ರಾತ್ರಿ ಭೋಜನದಲ್ಲಿ "ಋತಂತ್ವಾ ಸತ್ಯೇನ ಪರಿಷಿಂಚಾಮಿ" ಎಂದು ಹೇಳುವದು ಪರಿಷೇಚನಗಳಲ್ಲಿ ಅನ್ನವನ್ನ ಹಸ್ತದಿಂದ ದಾಟಬಾರದು.

ಕುಕ್ಕುಟಾಸನ (ಕುಕ್ಕರಗಾಲು) ದಲ್ಲಿ ಕುಳಿತು ಪಾದಗಳಿಂದಲೋ ಅಥವಾ ಒಂದು ಪಾದದಿಂದಲೋ ಭೂಮಿಯನ್ನ ಸ್ಪರ್ಶ ಮಾಡಿಕೊಂಡು ವಾಮಹಸ್ತದ ಅಂಗುಷ್ಠ ತರ್ಜನೀ ಮಧ್ಯಮ ಬೆರಳುಗಳಿಂದ ಎಡಭಾಗ ದಲ್ಲಿ ಭೋಜನ ಪಾತ್ರವನ್ನ ಸ್ಪರ್ಶ ಮಾಡಿಕೊಂಡು ಅನ್ನದ ದಕ್ಷಿಣಭಾಗ ದಲ್ಲಿ ಇತರರಿಂದ ಕೊಡಲ್ಪಟ್ಟ ಭಗವತ್ಪಾದೋದಕ (ತೀರ್ಥ) ವನ್ನ ತೆಗೆ ದುಕೊಂಡು,–

ಅಮೃತೋಪಸ್ತರಣಮಸಿ,

ಎಂಬ ಮಂತ್ರದಿಂದ ನಿಶ್ಶಬ್ದವಾಗಿ ಆಪೋಶನ ಮಾಡುವದು (ಪಾನ ಮಾಡುವದು) ಆಪೋಶನಾರ್ಥವಾಗಿ ಉದಕವನ್ನ ಪುನಃಪುನಃ ಹಸ್ತದಲ್ಲಿ ತೆಗೆದುಕೊಳ್ಳಬಾರದು.

ಅಂಗುಷ್ಠ ಸಹಿತ ಮಧ್ಯಮ ಅನಾಮಿಕಾ ಬೆರಳುಗಳಿಂದ ಆಮಲಕ (ನೆಲ್ಲೀಕಾಯಿ) ಪ್ರಮಾಣವಾಗಿ ಅನ್ನವನ್ನ ತೆಗೆದುಕೊಂಡು,

ಓಂ ಪ್ರಾಣಾಯಸ್ವಾಹಾ, ಓಂ ಅಪಾನಾಯಸ್ವಾಹಾ,

ಓಂ ವ್ಯಾನಾಯಸ್ವಾಹಾ, ಓಂ ಉದಾನಾಯಸ್ವಾಹಾ,

ಓಂ ಸಮಾನಾಯಸ್ವಾಹಾ,

ಎಂದು ಕ್ರಮವಾಗಿ ಪ್ರಾಣಾಹುತಿಯಂಮಾಡಿ, (ಪ್ರಾಣಾಹುತಿ ಕಾಲಗಳಲ್ಲಿಯೇ ಮನಸ್ಸಿನಲ್ಲಿ, ಪ್ರಾಣಾಯೇದಂನಮಮ ಇತ್ಯಾದಿ ಉ ದ್ದೇಶತ್ಯಾಗವಂ ಮಾಡಬೇಕು) ಅನಂತರ ವಾಮಹಸ್ತವಂ ತೊಳೆದು ಕೊಳ್ಳುವದು. ಪಂಚಪ್ರಾಣಾಹುತಿಪರ್ಯಂತ ಮೌನವ್ರತವನ್ನ ಆಶ್ರಯಿ ಸಬೇಕು.

ಅನಂತರ ಭಾರ್ಯಾದಿಗಳು ಶಾಸ್ತ್ರವಿರುದ್ಧವಾಗಿಯೂ, ಭಗವನ್ನಿವೇ ದಿತಗಳಾಗಿಯೂ ಇರುವ ಪದಾರ್ಥಗಳನ್ನು ಪರಿವೇಷಣ ಮಾಡಬಹುದು.

---

೧ ಪ್ರಾಣಾಹುತಿಯಲ್ಲಿ, ದಂತಸ್ಪರ್ಶವಾಗದಂತೆ ಬೇರೆಬೇರೆ ನುಂಗಬೇಕು.

ಶಾಸ್ತ್ರವಿರುದ್ಧಗಳಾದ ಭೋಜನಪದಾರ್ಥಗಳು ಆರುಪ್ರಕಾರವಾಗಿರುವವು.

೧ನೇದು,–ಜಾತಿ ದುಷ್ಟವಾದವುಗಳು.

ಉಳ್ಳಿ, ಮೂಲಂಗಿ, ಬಿಳಬದನೆ, ತಾಳೇಹಣ್ಣು, ಹೀರೇಕಾಯಿ, ಚೌಳುಪ್ಪು, ಕೆಂಪುಹಿಂಗು, ನಾಯಿಕೊಡೆ, ಜೋಳ, ಎಳ್ಳು ಉದ್ದು ವಿನಾ ಇತರವಾದ ಕೃಷ್ಣಧಾನ್ಯಗಳು ಇತ್ಯಾದಿ.

೨ನೇದು–ಕ್ರಿಯಾದುಷ್ಟವಾದವುಗಳು.

ಋತುಸ್ನಾನ ದಿವಸದಲ್ಲಿ ಸ್ತ್ರೀಯಿಂದ ಸ್ಪರ್ಶಮಾಡಲ್ಪಟ್ಟ ಪದಾರ್ಥಗಳೂ, ಪಂಚಸಂಸ್ಕಾರವಿಲ್ಲದವರಿಂದ ಪಕ್ವಮಾಡಲ್ಪಟ್ಟ ಪದಾರ್ಥಗಳೂ, ಹಸ್ತದಿಂದ ಘರ್ಷಣಮಾಡಲ್ಪಟ್ಟ ಮೊಸರೂ, ವಸ್ತ್ರದಿಂದ ಶೋಧನ ಮಾಡದಿರುವ ಉದಕವೂ, ಮಜ್ಜಿಗೆಯನ್ನ ವಿನಾ ಸಾರವನ್ನ ತೆಗೆದಿರುವ ಇತರ ನಿಸ್ಸಾರವಾದ ಪದಾರ್ಥಗಳು, ರಾತ್ರಿಯಲ್ಲಿ ದೀಪವಿಲ್ಲದೇ, ಬೆಳದಿಂಗಳು ಕೊಳ್ಳಿ ಇವುಗಳ ಬೆಳಕಿನಲ್ಲಿ ಭೋಜನ ಮಾಡಲ್ಪಟ್ಟ ಅನ್ನವೂ, ಭೋಜನಮಧ್ಯದಲ್ಲಿ ಬಿಡಲ್ಪಡುವ ತುಪ್ಪವೂ, ಉಗುರುಗಳಿಂದ ಕತ್ತರಿಸಲ್ಪಡುವ ಪದಾರ್ಥಗಳೂ, ಗುರ್ವಾದ್ಯುಚ್ಛಿಷ್ಟವನ್ನ ವಿನಾ ಇತರ ಉಚ್ಛಿಷ್ಟಗಳೂ ಕಾಸಿದ ಎಳನೀರು ಇತ್ಯಾದಿ.

೩ನೇದು–ಕಾಲದುಷ್ಟವಾದವುಗಳು.

ಮೂರು ವರುಷಕ್ಕಿಂತಲೂ ಮೇಲ್ಪಟ್ಟು ಇಟ್ಟುಕೊಳ್ಳುವ ಭತ್ತ ಮೊದಲಾದ ಧಾನ್ಯಗಳೂ, ಒಂದು ತಿಂಗಳಗಿಂತಲೂ ಮೇಲೆ ಇಡಲ್ಪಡುವ ಅಕ್ಕಿ, ಹದಿನೈದು ದಿವಸಕ್ಕಿಂತಲೂ ಮೇಲೆ ಇಡಲ್ಪಡುವ ಹಳೆಯದಾದ ತುಪ್ಪ, ಎಣ್ಣೆ, ಹೆಸರುಬೇಳೆ, ಪಾಕಕ್ಕೆ ಉಪಯೋಗಿಸಲ್ಪಟ್ಟ ಮಡಿಕೆಗಳು, ಅವುಗಳಲ್ಲಿ ಪಕ್ವವಾದ ಪದಾರ್ಥಗಳು, ಒಂದುದಿವಸಕ್ಕಿಂತಲೂ

---

೧ ವಿಸ್ತಾರ ಭೀತಿಯಿಂದ ಪ್ರಮಾಣ ಶ್ಲೋಕಗಳನ್ನ ಬರಿಯದೇ ತಾತ್ಪರ್ಯಮಾತ್ರ ಬರಿಯಲ್ಪಟ್ಟಿರುತ್ತೆ.

೨ ಅಗ್ನಿಹೋತ್ರದಲ್ಲಿ ತುಪ್ಪವಿಲ್ಲದಿದ್ದರೆ ಮಧ್ವ ಕೊಡವೆಂದು ಹೇಳುವರು.

ಮೇಲೆ ಇಡಲ್ಪಟ್ಟ ಉದಕ, ಒಂದು ರಾತ್ರೆಗೆ ಮೇಲ್ಪಟ್ಟು ಇಡಲ್ಪಡುವ ಪರ್ಯುಷಿ ತತ್ವದೋಷವುಳ್ಳ ಪಕ್ವಪದಾರ್ಥಗಳು.

(ಈ ಮುಂದೆ ಬರಿಯಲ್ಪಡುವ ಪದಾರ್ಥಗಳಿಗೆ ಪರ್ಯುಷಿ ತತ್ವ ದೋಷವಿಲ್ಲವು. ಹಾಲು, ಉಪ್ಪು, ಅಡಿಕೆ, ಅರಿಸಿನ, ಸಂಡಿಗೆ, ಹುರಿದ ಅಕ್ಕಿ, ತೊಗರಿ, ಹೆಸರು, ಮೊದಲಾದವುಗಳು, ಸುಣ್ಣ, ಮೆಣಸು, ಉಪ್ಪಿನ ಕಾಯಿಗಳು, ಅವಲಕ್ಕಿ, ಕ್ಷೀರಾನ್ನ, ಅರಳು, ನೀರಿನಲ್ಲಿ ಹಾಕಲ್ಪಟ್ಟ ಅನ್ನ, ಎಣ್ಣೆ, ತುಪ್ಪ, ಮೊಸರುಗಳಿಂದ ಕೂಡಿ ಕಲಸಿದ ಅನ್ನ, ಹಣ್ಣುಗಳು, ಔಷಧಗಳು, ಪುನಃ ಪಾಕಮಾಡಿದ ಪದಾರ್ಥಗಳು, ಇತ್ಯಾದಿ) ಪಾಡ್ಯದಲ್ಲಿ ಸೋರೇಕಾಯಿ, ಬಿದಿಗೆಯಲ್ಲಿ ಬದನೇಕಾಯಿ, ಅಷ್ಟಮಿಯಲ್ಲಿ ತೆಂಗಿನಕಾಯಿ, ದಶಮಿಯಲ್ಲಿ ಪಡವಲಗಾಯಿ, ಏಕಾದಶಿಯಲ್ಲಿ ಅವರೇಕಾಯಿ, ತ್ರಯೋದಶಿಯಲ್ಲಿ ಎಳ್ಳು, ಚತುರ್ದಶಿಯಲ್ಲಿ ಹುರಳಿ, ಸಪ್ತಮಿ ಭಾನುವಾರಗಳಲ್ಲಿ ನೆಲ್ಲೀಕಾಯಿ, ಹಗಲಿನಲ್ಲಿ ಹಾಲು, ಬೇಲದಹಣ್ಣು, ಅರಳು, ರಾತ್ರಿಕಾಲದಲ್ಲಿ ಯಳ್ಳು ಮಿಶ್ರವಾದ ಪದಾರ್ಥಗಳು, ಮೊಸರು, ಮಾವು, ಜೇನು, ವೊಳ್ಳೆಣ್ಣೆ, ಇಂಜಿ, ಪಿತೃದಿನಗಳಲ್ಲಿ ಸೋರೇಕಾಯಿ, ಬದನೇಕಾಯಿ, ಹಸರುಮೆಣಸಿನಕಾಯಿ, ಪಡವಲಗಾಯಿ, ಸಂಬಾರ, ಹಿಂಗು, (ಇದು ವಿಕಲ್ಪವು) ನಿಂಬೇಹಣ್ಣು, ಯಮ್ಮೆಯಹಾಲು, ತೊಗರೀಬೇಳೆ, ಸಾಸುವೆ, ಕಡಲೆ, ತಡುಗುಣಿ, ಹುರಳಿ, ಬಿಳಿ ಅವರೆ, ದ್ವಾದಶಿಯಲ್ಲಿ ಹುಳಿ, ಸಾಸುವೆ, ಉದ್ದು, ಹೆಸರುಬೇಳೆ, ವೊಳ್ಳೆಣ್ಣೆ, ಬದನೇಕಾಯಿ, ಬಾಳೆಯೆಲೆ, ಇತ್ಯಾದಿ.

೪ನೇದು-ಸಂಸರ್ಗ ದುಷ್ಟಪದಾರ್ಥಗಳು.

ಉಪ್ಪಿನಿಂದೊಡಗೂಡಿದ ತುಪ್ಪ, ಉಪ್ಪಿನಿಂದ ಕೂಡಿದ ಹಾಲು, ಕ್ರಿಮಿಗಳಿಂದಲೂ, ನೊಣದಿಂದಲೂ, ನೂಲಿನಿಂದಲೂ, ಕೂದಲಿನಿಂದಲೂ, ಉಗುರುಗಳಿಂದಲೂ ಕೂಡಿದ ಅನ್ನವೂ.

(ಇಂತಹ ಅನ್ನವನ್ನೇ ಉಪಯೋಗಿಸಬೇಕಾದ ಸಂದರ್ಭದಲ್ಲಿ ಕ್ರಿಮ್ಯಾದಿಗಳಿಂದ ಕೂಡಿರುವ ಪ್ರದೇಶದಲ್ಲಿ ಅನ್ನವನ್ನ ಸ್ವಲ್ಪ ತೆಗೆದು ಹಾಕಿ ಮಿಕ್ಕ ಅನ್ನವನ್ನ ಉದಕದಿಂದ ಪ್ರೋಕ್ಷಿಸಿ ಮೃದ್ಧೂಳಿಯನ್ನೋ ಭಸ್ಮಧೂಳಿಯನ್ನೋ ಹಾಕಿ ಸ್ವೀಕರಿಸಬಹುದು.)

ಸನ್ಯಾಸಿಗಳ ಭಿಕ್ಷಾಪಾತ್ರದಲ್ಲಿ ಸ್ಪರ್ಶವಾದ ಅನ್ನವೂ, ಸನ್ಯಾಸಿಗಳಿಂದ ಕೊಡಲ್ಪಡುವ ಅನ್ನವೂ, ಇತ್ಯಾದಿ.

೫ನೇದು-ಆಶ್ರಯ ದುಷ್ಟವಾದುದು.

ಕಾಂಸ್ಯ (ಕಂಚು) ಪಾತ್ರದಲ್ಲಿ ಇಡಲ್ಪಟ್ಟ ಎಳನೀರು ತಾಮ್ರ ಪಾತ್ರದಲ್ಲಿ ಇಡಲ್ಪಟ್ಟ ಜೇನು, ತುಪ್ಪ, ಹಾಲು, ಕಬ್ಬಿಣದ ಪಾತ್ರದಲ್ಲಿ ಪರಿವೇಷಣ (ಬಡಿಸುವದು) ಮಾಡಲ್ಪಟ್ಟ ಪದಾರ್ಥಗಳು, ಕಬ್ಬಿಣ ಪಾತ್ರೆಯಲ್ಲಿ ಇಡಲ್ಪಟ್ಟ ಉದಕವು, ಕರುಹಾಕಿದ ಹತ್ತುದಿವಸಗಳೊಳಗಿನ ಹಸುವಿನಹಾಲು, ಮಜ್ಜಿಗೆಯಿಂದ ಕೂಡಿದಹಾಲು, ಕರುಸತ್ತ ಹಸುವಿನ ಹಾಲು, ಬೇರೆ ಹಸುವಿನ ಕರುವಿನಿಂದ ಕರೆಯಲ್ಪಟ್ಟ ಹಾಲು, ಎರಡು ಕರುವನ್ನ ಪ್ರಸುವಿಸಿರುವ ಹಸುವಿನ ಹಾಲು, ಇತ್ಯಾದಿ.

೬ನೇದು-ನಿಮಿತ್ತ ದುಷ್ಟವಾದುದು.

ಬ್ರಾಹ್ಮಣರುಗಳಿಂದ ವಿಕ್ರಯಿಸಲ್ಪಟ್ಟ ಹಾಲು, ನಾಯಿ, ಕಾಗೆ, ಕೋಳಿ, ಇಲಿ, ಬೆಕ್ಕು, ಇತ್ಯಾದಿಗಳಿಂದ ಮುಟ್ಟಲ್ಪಟ್ಟ ಅನ್ನ ವ್ಯಂಜನಾದಿಗಳೂ, ಪಾದಪ್ರಕ್ಷಾಳನ ಶೇಷೋದಕವೂ, ಪಾದಸ್ಪರ್ಶವಾದ ಅನ್ನಾದಿಗಳೂ, ಸತ್ರದಲ್ಲಿ ಹಾಕಲ್ಪಡುವ ಅನ್ನವೂ, ಅರವಟ್ಟಿಗೆಯಲ್ಲಿ ಕೊಡಲ್ಪಡುವ ಉದಕಾದಿಗಳೂ, ನೊಂದುಕೊಂಡು ಹಾಕಲ್ಪಡುವ ಅನ್ನವೂ, ಕಳ್ಳಗಂಡಿಯಲ್ಲಿ ತರಲ್ಪಡುವ ಅನ್ನವೂ, ನಾಲ್ಕಾವರ್ತಿ ತೊಳೆಯಲ್ಪಡದಿರುವ ಅಕ್ಕಿಯೂ, ಬೇಳೆಯೂ, ಶಾಕಾದಿಗಳೂ, ಫಲಗಳೂ, ಹೆಸರು ತಿಳಿಯದೇ ಇರುವ ಪದಾರ್ಥಗಳೂ, ಧರ್ಮಶಾಸ್ತ್ರಗಳಲ್ಲಿ ಗ್ರಾಹ್ಯವೆಂದೂ, ಅಥವಾ ಅಗ್ರಾಹ್ಯವೆಂದೂ, ಹೇಳಲ್ಪಡದಿರುವ ಪದಾರ್ಥಗಳೂ, ಸ್ವಾರ್ಥವಾಗಿ ಪ್ರತ್ಯೇಕಿಸಿ ಪಾಕ ಮಾಡಲ್ಪಟ್ಟಿರುವ ಪದಾರ್ಥಗಳೂ, ಭೂಮಿಯಲ್ಲಿ ಬೀಳದ ಮಳೆನೀರು ಇತ್ಯಾದಿ.

ಭೋಜನಕಾಲದಲ್ಲಿ ಇತರ ವಾಕ್ಯ (ಅನ್ನಾದಿಗಳು ಅವಶ್ಯಕವು, ಅಥವಾ ಅನವಶ್ಯಕವು ಇತ್ಯಾದಿ ವಾಕ್ಯಗಳನ್ನ ವಿನಾ ಇತರ ವಾಕ್ಯಗಳ ನ್ನಾಡಬಾರದು) ಗಳನ್ನು ಆಡಬಾರದು.

ಅತಿಥಿಗಳಿಗೆ ಸಂತೋಷವಾಗುವಂತೆ ಸ್ವದಾರಿದ್ರ್ಯಾದಿ ಸೂಚಕವಾ (ನಾನು ದರಿದ್ರನು ಮಹನೀಯರಾದ ತಮಗಳಿಗೆ ಅರ್ಹವಾದ ಪದಾ

ರ್ಥವನ್ನ ಸಂಪಾದಿಸಲು ಯೋಗ್ಯತೆ ಇಲ್ಲವು ಕೃಪೆಯಿಂದ ಭೋಜನ ಮಾಡಬೇಕು ಇತ್ಯಾದಿ) ವಾಕ್ಯಗಳನ್ನ ಹೇಳುವದು.

ಕಬಳಶೇಷವನ್ನ ಪುನಃ ಭಕ್ಷಿಸಬಾರದು, ಪಾತ್ರ (ಯೆಲೆ) ದಲ್ಲಿ ವಿಶ್ರಮಾಡಲೂ ಬಾರದು, ಭೋಜನ ಮಧ್ಯದಲ್ಲಿ ಬಲಹಸ್ತದಿಂದ ಜಲಾದಿಗಳನ್ನ ಪಾನ ಮಾಡಬಾರದು, ಫಲಶಾಕಾದಿಗಳನ್ನ ಹಸ್ತದಿಂದಲೇ ಮುರಿದು ಭೋಜನ ಮಾಡಬೇಕು. ದಂತಗಳಿಂದ ಕತ್ತರಿಸಿ ಕತ್ತರಿಸಿ ಭಕ್ಷಿಸಬಾರದು, ಪ್ರತ್ಯಕ್ಷವಾಗಿ ಲವಣವನ್ನ ವರ್ಜಿಸತಕ್ಕದ್ದು.

ತೈಲ ಪಕ್ವವಾದ ಪದಾರ್ಥಗಳನ್ನೂ, ಅಪಕ್ವ ಪದಾರ್ಥಗಳನ್ನೂ, ದರ್ವಿ (ಸಾಟು ಮೊದಲಾದದು) ಯಿಂದ ಪರಿವೇಷಣ ಮಾಡಬಾರದು. ಅನ್ನ, ವ್ಯಂಜನ, ಪಾನೀಯ, (ಉದಕ, ಪಾನಕ ಇತ್ಯಾದಿ) ದಧಿ, ಕ್ಷೀರ, ಘೃತಾದಿಗಳನ್ನ ಪಾತ್ರಾದಿಗಳಿಂದ ಪರಿವೇಷಣ ಮಾಡಬೇಕೇ ವಿನಾ ಹಸ್ತದಿಂದ ಬಿಡಬಾರದು. ಭಗವದರ್ಪಿತವಾದ ಅನ್ನ ವ್ಯಂಜನಾದಿಗಳಲ್ಲಿ ದೋಷೋಕ್ತಿಗಳನ್ನ ಹೇಳಬಾರದು.

ದೇವಗೃಹದಲ್ಲಿ, ಅಂಧಕಾರದಲ್ಲಿ, ಬಯಲಿನಲ್ಲಿ, ಮಹಡಿಯಲ್ಲಿ, ನೆಲದಲ್ಲಿ, ಯಾರೂ ಇಲ್ಲದಿರುವ (ಶೂನ್ಯ) ಗೃಹದಲ್ಲಿ ಭೋಜನ ಮಾಡಬಾರದು. ದಿವಾರಾತ್ರಿಗಳಲ್ಲಿ ದ್ವಿರಾವೃತ್ತಿ ಭೋಜನ ಮಾಡಬಾರದು. ಅರ್ಧರಾತ್ರ್ಯಾದಿ ಕಾಲಗಳಲ್ಲಿ ಭೋಜನ ಮಾಡಬಾರದು.

ಆಚಮನವಂಮಾಡದೆ, ಏಕವಸ್ತ್ರಧರನಾಗಿ, ತಲೆಗೆ ಹೊದ್ದುಕೊಂಡು, ಇತರನನ್ನ ಸ್ಪರ್ಶ ಮಾಡಿಕೊಂಡು, ಚಂಡಾಲ, ರಜಸ್ವಲಾ ಶೂದ್ರಾದಿ ಶಬ್ದವಂ ಕೇಳುವನಾಗಿ ಭೋಜನ ಮಾಡಬಾರದು.

ಯೆಲೆಯ ಹಿಂಭಾಗದಲ್ಲಿ, ಮಣ್ಣಿನ ಶರಾವಾದಿಗಳಲ್ಲಿ, ವಸ್ತ್ರದಲ್ಲಿ ಭೋಜನ ಮಾಡಬಾರದು.

ಏಕಪಜ್ತಿಯಲ್ಲಿ ಇತರರು ಭೋಜನ ಮಾಡಿಕ್ಕೊಂಡಿರುವ ಕಾಲದಲ್ಲಿ ಮಧ್ಯೆ ಎದ್ದು ಹೋಗಬಾರದು. ಅಸಂದರ್ಭವಾಗಿ ಏಳಬೇಕಾದ ಪಕ್ಷ ಉದಕಾದಿಗಳಿಂದ ಪಜ್ತಿಭೇದವಂ ಮಾಡಬೇಕು.

ಭೋಜನಕಾಲದಲ್ಲಿ, ಭಾರ್ಯಾ ಪುತ್ರಾದಿಗಳಲ್ಲಿ ಕಲಹಾದಿಗಳನ್ನ ಮಾಡಬಾರದು.

ಪಾಯಸ, ದಧಿ, ಕ್ಷೀರಾದಿಗಳನ್ನ ನಿಶ್ಶಬ್ದವಾಗಿ ಪಾನ ಮಾಡ ಬೇಕು. ಪಾತ್ರಸ್ಥವಾದ ಉದಕವನ್ನ ಪಾನಮಾಡಿದ ತರುವಾಯು ಪುನಃ ಪಾನಮಾಡುವದಕ್ಕೆ ಸ್ವಲ್ಪ ಉದಕವನ್ನ ಭೂಮಿಯಲ್ಲಿ ಚಲ್ಲಿ ಪಾನ ಮಾಡುವದು.

ದಧಿ, ಕ್ಷೀರ, ಆಜ್ಯಾದಿಗಳನ್ನ ಶೇಷವಿಲ್ಲದಂತೆ ಭಕ್ಷಿಸಿ ಇತರವಾದ ಪದಾರ್ಥಗಳನ್ನ ಸಶೇಷವಾಗಿ ಭೋಜನ ಮಾಡಬೇಕು.

ಭೋಜನಮಧ್ಯದಲ್ಲಿ ದೀಪನಾಶವಾದರೆ, ಸೂರ್ಯನನ್ನ ಸ್ಮರಿಸುವ ನಾಗಿ ಹಸ್ತಗಳಿಂದ ಪಾತ್ರವಂ ಸ್ಪರ್ಶಮಾಡಿಕೊಂಡು ಪುನಃ ದೀಪ ಬರುವ ಪರ್ಯಂತ ಭೋಜನ ಮಾಡಬಾರದು. ಪುನಃ ದೀಪ ಬಂದನಂತರ ಪಾತ್ರಸ್ಥವಾದ ಅನ್ನವನ್ನ ಮಾತ್ರ ಭೋಜನ ಮಾಡಬಹುದು. ಪುನಃ ಅನ್ನವನ್ನ ಹಾಕಿಸಿಕೊಳ್ಳಕೂಡದು. ಗೋವಿಂದಾಯನಮಃ ಎಂದು ಪ್ರತಿ ಗ್ರಾಸದಲ್ಲಿಯೂ ಗೋವಿಂದನನ್ನ ಸ್ಮರಿಸುವದು. ಅನಂತರ ವರ್ತುಲ ಪವಿತ್ರವನ್ನ ಬಿಚ್ಚಿ ಅನಾಮಿಕಾ ಬೆರಳಿನಲ್ಲಿ ಧರಿಸಿ ಇತರರಿಂದ ಕೊಡಲ್ಪಟ್ಟ ಪಾದ್ಯತೀರ್ಥದಿಂದ ಅಮೃತಾಪಿಧಾನಮಸಿ, ಎಂದು ಸಶೇಷವಾಗಿ ಉತ್ತರಾಪೋಶನವಂ ಮಾಡಿ, ಉತ್ತರಾಪೋಶನ ಶೇಷೋದಕವನ್ನ,

> ರೌರವೇಪುಣ್ಯನಿಲಯೇಪದ್ಮಾರ್ಬುದನಿವಾಸಿನಾಂ । ಅರ್ಥಿನಾ ಮುದಕಂದತ್ತಮಕ್ಷಯ್ಯಮುಪತಿಷ್ಠತು ॥

ಇತಿ ಮಂತ್ರೇಣ, ಭೋಜನಪಾತ್ರದ ವಾಮಭಾಗದಲ್ಲಿ ದೇವತೀರ್ಥದಿಂದ ಬಿಟ್ಟು, ಪವಿತ್ರದರ್ಭವನ್ನ ಚತುರಶ್ರಮಂಡಲದಲ್ಲಿಯೇ ಬಿಡುವದು.

ಉತ್ತರಾಪೋಶನಾತ್ಪೂರ್ವ ಹಸ್ತವನ್ನ ತೊಳೆದುಕೊಂಡು ಉತ್ತರಾಪೋಶನವಂ ಸ್ವೀಕರಿಸಬಾರದು.

---

೧ ಭುಕ್ತಪಾತ್ರಸ್ಯೋತ್ತರೇ ದಕ್ಷಿಣೇವಾ ದೇವತೀರ್ಥೇನ ನಿನಯ ಇತಿ ಶ್ರೀಮತ್ಪ್ರಂಗನಾಥಮುನೀಂದ್ರ ಕೃತಾಹ್ನಿಕೇ.

ಉತ್ತರಾಪೋಶನಾನಂತರ ಪಾತ್ರವಂ ಸ್ಪರ್ಶ ಮಾಡಬಾರದು. ಅನಂತರ ಎದ್ದು ಹೊರಗೆಬಂದು ಕುಳಿತುಕೊಂಡು ಎಡಭಾಗದಲ್ಲಿ ಮೂರು ಗಂಡೂಷಗಳಂಮಾಡಿ, ಮಾಷಾದಿ ಚೂರ್ಣಗಳಿಂದಲೋ, ಮಣ್ಣಿನಿಂದಲೋ, ಚನ್ನಾಗಿ ಲೇಪವು ಹೋಗುವಂತೆ ಕೈಗಳಂ ತೊಳೆದುಕೊಂಡು ಪುನಃ ಹದಿಮೂರು ಗಂಡೂಷಗಳಂಮಾಡಿ ದಂತಗಳಂ ಶೋಧಿಸುವದು. ಅಥವಾ ಪ್ರಥಮತಃ ಹದಿನಾರು ಗಂಡೂಷಗಳಂ ಮಾಡಬಹುದು.

ಅನಂತರ ಪಾದಗಳನ್ನ ತೊಳೆದುಕೊಂಡು ಭೋಜನಾಸನವನ್ನ ಹೊರಗೆತಂದು ಅಲ್ಲಿ ಕುಳಿತುಕೊಂಡು ದ್ವಿರಾಚಮನವಂ ಮಾಡುವದು. ಈ ಆಚಮನಕ್ಕೆ ಪೂರ್ವಶ್ಚ. ಶೂದ್ರಾದಿಗಳನ್ನ ನೋಡಬಾರದು. ಅನಂತರ,

ಪ್ರಾಣಾನಾಂಗ್ರಂಥಿರಸಿರುದ್ರೋ ಮಾವಿಶಾಂತಕಸ್ತೇನಾನ್ನೇ

ನಾಪ್ಯಾಯಸ್ವ—ಇತಿಹೃದಯಂಸ್ಪೃಶೇತ್.

ಅಂಗುಷ್ಠಮಾತ್ರಃಪುರುಷೋಂಗುಷ್ಠಂಚಸಮಾಶ್ರಿತಃ । ಈಶ

ಸ್ಸರ್ವಸ್ಯಜಗತಃ ಪ್ರಭುಃಪ್ರೀಣಾತಿವಿಶ್ವಭುಕ್ ॥ ಇತಿ ದಕ್ಷಿ

ಣಪಾದಾಂಗುಷ್ಠೇ ಊರ್ಧ್ವದಕ್ಷಿಣಹಸ್ತೇನಜಲಂನಿಸ್ರಾವ್ಯ.

ಶ್ರದ್ಧಾಯಾಂಪ್ರಾಣೇನಿವಿಶ್ಯಾಮೃತಗ್ಂಹುತಂಪ್ರಾಣಮನ್ನೇ

ನಾಪ್ಯಾಯಸ್ವ.

ಅಪಾನೇನಿವಿಶ್ಯಾಮೃತಗ್ಂಹುತಮಪಾನಮನ್ನೇನಾಪ್ಯಾಯಸ್ವ.

ವ್ಯಾನೇನಿವಿಶ್ಯಾಮೃತಗ್ಂಹುತಂವ್ಯಾನಮನ್ನೇನಾಪ್ಯಾಯಸ್ವ.

ಉದಾನೇನಿವಿಶ್ಯಾಮೃತಗ್ಂಹುತಮುದಾನಮನ್ನೇನಾಪ್ಯಾಯಸ್ವ.

ಸವಿತಾನೇನಿವಿಶ್ವಾನ್ಮೃತಗ್ಂಹುತಗ್ಂಸವಾಸವಮನ್ನನಾಪ್ಯಾಯಸ್ವ.

ಬ್ರಹ್ಮಣಿಮಆತ್ಮಾಮೃತತ್ವಾಯ ಇತಿಹುತಮಭಿಮಂತ್ರ್ಯ.

ಓಂನಾರಾಯಣಾಯವಿದ್ಮಹೇವಾಸುದೇವಾಯಧೀಮಹಿತನ್ನೋ

ವಿಷ್ಣುಃಪ್ರಚೋದಯಾತ್-ಇತಿಸೂರ್ಯಾಯ ಅರ್ಘ್ಯಮೇಕಂ

ದತ್ವಾ, ಆತ್ಮಾನಂಪರಿಷಿಚ್ಯ, ಸೂರ್ಯಮಭಿವೀಕ್ಷೇತ, ರಾತ್ರೌ
ಧೀಪಮವಲೋಕಯೇತ್ ॥

ಉದುತ್ಯಂಜಾತವೇದಸಂದೇವಂವಹಂತಿಕೇತವಃ, ದೃಶೇವಿಶ್ವಾ

ಯಸೂರ್ಯಂ, ಇತ್ಯಾದಿತ್ಯಮುಪತಿಷ್ಠೇತ, ತತಃ.

ವಿಷ್ಣುರತ್ತಾ ತಥೈವಾನ್ನಂ ಪರಿಣಾಮಕ್ಷ್ವ ವೈಸದಾ ಸತ್ಯೇನಸತ್ಯೇ
ನಮೇಭುಕ್ತಂಜೀರ್ಯತ್ವನ್ನಮಿದಂತಥಾ, ಇತ್ಯುಚ್ಚಾರ್ಯೋದಕಂ
ಪರಿಷ್ಟುಜ್ಯ, ಓಂ, ಇತಿ ಬ್ರಹ್ಮಣಿಸ್ವಾತ್ಮಾನಂಯೋಜಯೇತ್,
ಆಸೀನೋಯಥಾಶಕ್ತಿ ಮೂಲಮಂತ್ರಂ ದ್ವಾದಶಾಕ್ಷರಾದಿಕಂ
ವಾಜಪೇತ್.

ಕೃಷ್ಣಾಷ್ಟಮೀ, ಕೃಷ್ಣಚತುರ್ದಶೀ ಪೌರ್ಣಮಾಸೀತಿಥಿಷು
ಏಕವಾರಮೇವಭೋಜನಂಕುರ್ಯಾತ್.

ಅಮಾವಾಸ್ಯಾಯಾಂ, ಸಂಕ್ರಮಣೇ, ಶ್ರಾದ್ಧದಿನೇ, ನಿಯಮ
ತ್ರಯದಿನೇ, ರಾತ್ರೌಭೋಜನಂ ನಕುರ್ಯಾತ್.

ಗ್ರಸ್ತಾಸ್ತಗೇಚಂದ್ರೇ ಗ್ರಹಣಾತ್ಪೂರ್ವಸ್ಮಿನ್ ರಾತ್ರೌದಿವ
ಸ್ಸೇಚನಭುಂಜೀತ.

ಗ್ರಸ್ತಾಸ್ತಗೇಸೂರ್ಯೇಗ್ರಹಣಾತ್ಪೂರ್ವಸ್ಮಿನ್ದಿವಸೇ
ರಾತ್ರೌಚನಭುಂಜೀತ.

ಚಂದ್ರಸೂರ್ಯಗ್ರಹಣೇ ಸ್ನಾತ್ವೈವಭುಂಜೀತ,

ಚಂದ್ರಗ್ರಸ್ತೋದಯೇಽಹ್ನಿ ಸೂರ್ಯಗ್ರಸ್ತೋದಯೇರಾತ್ರೌ ಭೋಜನಂನಕುರ್ಯಾತ್,

ಸೂರ್ಯಗ್ರಹಣೇಪೂರ್ವಂಯಾಮಚತುಷ್ಟಯಂ, ಚಂದ್ರಗ್ರಹಣೇ, ಪೂರ್ವಂತ್ರಯಯಾಮತ್ರಯಂನಭುಂಜೀತ.

ಭುಕ್ತ್ವಾಽಽರ್ದ್ರಪಾದೇನ ಗೃಹಾದ್ಬಹಿರ್ವ್ರಜೇತ್.

## ಅಥ ತಾಂಬೂಲಚರ್ವಣ ಕ್ರಮಃ.

ವಸಿಷ್ಠಃ॥ ಮುಖೇಪರ್ಣಮಸಿಕ್ಷಿಪ್ಯ ಪೂಗಂಖಾದತಿಯೋನರಃ।
ಸಪ್ತಜನ್ಮದರಿದ್ರಸ್ಸ್ಯಾದಂತೇವಿಷ್ಣುಂನಸಂಸ್ಮರೇತ್ ॥

ತಾತ್ಪರ್ಯ॥ ತಾಂಬೂಲಚರ್ವಣದಲ್ಲಿ ಪ್ರಥಮತಃ ತಾಂಬೂಲವನ್ನ ಹಾಕಿಕೊಂಡು ಆ ನಂತರ ಅಡಿಕೆಯನ್ನ ಹಾಕಿಕೊಳ್ಳಬೇಕು. ಹಾಗೆ ಮಾಡದೇ ಪ್ರಥಮತಃ ಅಡಿಕೆಯನ್ನ ಹಾಕಿಕೊಂಡರೆ ಸಪ್ತಜನ್ಮ ದರಿದ್ರನಾಗುತ್ತಾನೆ.

ಪರ್ಣಮೂಲೇಭವೇದ್ವ್ಯಾಧಿಃ ಪರ್ಣಾಗ್ರೇಪಾಪಸಂಭವಃ।
ಚೂರ್ಣಪರ್ಣಂಹರತ್ಯಾಯುಃ ಸಿರಾಬುದ್ಧಿವಿನಾಶಿನೀ ॥

ತಾತ್ಪರ್ಯ॥ ತಾಂಬೂಲದ (ವೀಳ್ಯದೆಲೆಯ) ಮೂಲವನ್ನ ಭಕ್ಷಿಸಿದರೆ ವ್ಯಾಧಿಯೂ, ಯಲೆಯತುದಿಯನ್ನ ಭಕ್ಷಿಸಿದರೆ ಪಾಪವೂ, ಸುಣ್ಣದೆಲೆಯನ್ನ ಹಾಕಿಕೊಂಡರೆ ಆಯುಷ್ಯನಾಶವೂ, ನಾರುಗಳನ್ನ ತಿಂದರೆ, ಬುದ್ಧಿನಾಶವೂ ಆಗುವದು. ಆದಕಾರಣ ನಾಗವಲ್ಲಿಯ ತುದಿಯನ್ನೂ ಬುಡವನ್ನೂ, ನಾರುಗಳನ್ನೂ ತೆಗದುಹಾಕಿ, ಹಾಕಿಕೊಳ್ಳಬೇಕು. ಸುಣ್ಣದ ಯಲೆಯನ್ನ ಉಪಯೋಗಿಸಬಾರದು. (ಹಾಕಿಕೊಳ್ಳಬಾರದು)

ಸುರಾಪಾನಸಮಂಜ್ಞೇಯಂ ತಾಂಬೂಲೇಸಸಹೋದಕಂ। ಯತಿಶ್ಚಬ್ರಹ್ಮಚಾರೀಚ ವಿಧವಾನಚಭಕ್ಷಯೇತ್॥

ತಾತ್ಪರ್ಯ॥ ತಾಂಬೂಲದೊಡನೆ ಉದಕ ಪಾನಮಾಡಿದರೆ ಅದು ಸುರಾಪಾನಕ್ಕೆ ಸಮಾನವಾಗುವದು. ಯತಿಯು, ಬ್ರಹ್ಮಚಾರಿಯು, ವಿಧವೆಯೂ, ತಾಂಬೂಲಚರ್ವಣ ಮಾಡಬಾರದು.

ದೇವಃ॥ ಬೀಜಭೂತಂತುಭುಂಜಾನೋಹಿಂಸಾದೋಷೇಣಯುಜ್ಯತೆ॥

ತಾತ್ಪರ್ಯ॥ ಬೀಜಾರ್ಥವಾಗಿ ಸಿದ್ಧ ಮಾಡಲ್ಪಟ್ಟಿರುವ ತಾಂಬೂಲವನ್ನ ಉಪಯೋಗಿಸಿದರೆ ಹಿಂಸಾದೋಷಕ್ಕೆ ಪಾತ್ರನಾಗುವನು.

ಭಗವಾನೇವಸ್ವಾಸೀಯಾಮ್ಯ ಸ್ವರೂಪಸ್ಥಿತಿಪ್ರವೃತ್ತಿಸ್ವಶೇಷತ್ವೈಕರಸೇನಮಯಾ ಸ್ವಕೀಯೈಶ್ಚೋಪಕರಣೈಸ್ಸ್ವಾರಾಧನೈಕಪ್ರಯೋಜನಾಯ ಪರಮಪುರುಷಸ್ಸರ್ವಶೇಷೀ ಸ್ವಶೇಷಭೂತಮಿದಂ ಇಜ್ಯಾಖ್ಯಂಕರ್ಮಸ್ವಸ್ಮೈಸ್ವಪ್ರೀತಯೇ ಸ್ವಯಮೇವಕಾರಿತವಾನ್, ಇತಿ ಸಾತ್ವಿಕತ್ಯಾಗಂಕೃತ್ವಾ.

ಅನೇನಇಜ್ಯಾಖ್ಯೇನಕರ್ಮಣಾ ಭಗವಾನ್ಪ್ರೀಯತಾಂವಾಸುದೇವಃ, ಇತಿಇಜ್ಯಾಂಸಮಾಪಯೇತ್.

## ಸ್ವಾಧ್ಯಾಯ ಪ್ರಕರಣಂ.

ತತಶ್ಚತುರ್ಥೇಕಾಲೇ॥

ಕೃತಂಚಕರಿಷ್ಯಾಮಿ ಭಗವನ್ನಿತ್ಯೇನ ಭಗವತ್ಪ್ರೀತ್ಯರ್ಥೇನ ಮಹಾವಿಭೂತಿ ಚಾತುರಾತ್ಮ್ಯಭಗವದ್ವಾಸುದೇವಪಾದಾರವಿಂದಾರ್ಚನೇನಸ್ವಾಧ್ಯಾಯೇನ ಭಗವತ್ಕರ್ಮಣಾಭಗವಂತಂವಾಸುದೇವಮರ್ಚಯಿಷ್ಯಾಮಿ॥ ಇತಿಸಂಕಲ್ಪ್ಯ॥ ಭಗವತೋಬಲೇನ ಭಗವತೋವೀರ್ಯೇಣ ಭಗವತಸ್ತೇಜಸಾ ಭಗವತಃಕರ್ಮಣಾ ಭಗವತಃಕರ್ಮಕರಿಷ್ಯಾಮಿ ಭಗವತೋವಾಸುದೇವಸ್ಯ, ಇತಿ ಬಲಮಂತ್ರಮನುಸಂಧಾಯ॥

ಭಗವಾನೇವಸ್ವಾಸೀಯಾಮ್ಯ ಸ್ವರೂಪಸ್ಥಿತಿಪ್ರವೃತ್ತಿ ಸ್ವಶೇಷತ್ವೈಕರಸೇನಮಯಾ ಸ್ವಕೀಯೈಶ್ಚೋಪಕರಣೈಸ್ಸ್ವಾರಾಧನೈಕಪ್ರಯೋಜನಾಯ ಪರಮಪುರುಷಸ್ಸರ್ವಶೇಷೀ, ಸ್ವಶೇಷಭೂತಮಿದಂ ಸ್ವಾಧ್ಯಾಯಾಖ್ಯಂಕರ್ಮಸ್ವಸ್ಮೈ ಸ್ವಪ್ರೀತಯೇಸ್ವಯಮೇವಕಾರಯತಿ, ಇತಿ ಸಾತ್ವಿಕತ್ಯಾಗಂಕೃತ್ವಾ॥

ಚತುರ್ಮುಖ ಸರಸ್ವತೀಪ್ರಸಾದದಿಂದ ತಿಳಿಯಲ್ಪಟ್ಟ ಸಕಲ ವೇದಾ

ರ್ಥ ಜ್ಞಾನವುಳ್ಳವರಾದ ವಾಲ್ಮೀಕಿ ಮಹರ್ಷಿಯಿಂದ ಲೋಕಾನುಗ್ರಹಾರ್ಥವಾಗಿ ಪ್ರಣೀತವಾಗಿಯೂ.

ವೇದಃಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ ॥

ಇತ್ಯಾದ್ಯುಕ್ತಪ್ರಕಾರ ವೇದಪರ್ಯಾಯ ಮಾಹಾತ್ಮ್ಯವುಳ್ಳದ್ದಾಗಿಯೂ-

> ಪ್ರಾತಃಪ್ರೋತಪ್ರಸಂಗೇನಮಧ್ಯಾಹ್ನೇಸ್ತ್ರೀಪ್ರಸಂಗತಃ । ರಾತ್ರೌ
> ಚೋರಪ್ರಸಂಗೇನ ಕಾಲೋಗಚ್ಛತಿಧೀಮತಾಂ ॥

ಇತ್ಯುಕ್ತರೀತ್ಯಾ ಸ್ವಾಧ್ಯಾಯಕಾಲದಲ್ಲಿ ಅವಶ್ಯ ಪಠನೀಯತಯಾ ಸಂಗ್ರಹಿತನಾಗಿಯೂ, ಇರುವ, ಶರಣಾಗತಿ ಸಾರಭೂತವಾದ ಶ್ರೀಮದ್ರಾಮಾಯಣವನ್ನ ಯೋಗ್ಯತಾನುಸಾರ ಪಾರಾಯಣ ಮಾಡತಕ್ಕದ್ದು.

ವೇದಾಂತದ್ವಯ ವ್ಯಾಖ್ಯಾನ ಸಾಪೇಕ್ಷಾಧಿಕಾರಿಯಾಗಿರುವಪಕ್ಷ – ಉಪನಿಷದ್ಭಾಗ, ಶ್ರೀಮದ್ಭಾಷ್ಯ, ಭಗವದ್ಗೀತಾ, ತದ್ಭಾಷ್ಯ, ಶ್ರೀಮದ್ರಹಸ್ಯತ್ರಯಸಾರ, ಸ್ವಯೋಗಮಹಿಮ ಸಾಕ್ಷಾತ್ಕೃತ ನಿಗಮಾಂತ ಶ್ರೀಮತ್ಪರಾಂಕುಶ ಪರಮಾಚಾರ್ಯ ದೃಷ್ಟದ್ರಾವಿಡಗಾಥಾ ಸಹಸ್ರ ಸಂಹಿತಾವ್ಯಾಖ್ಯಾನ ಪರಿಶೀಲನವು ಮಾಡಬಹುದು.

ಅನಸೂಯರುಗಳಾಗಿಯೂ, ಪರಾಪರ ತತ್ವನಿರ್ಣಯಾಭಿಲಾಷಿಗಳಾಗಿಯೂ, ವಿನೀತರಾಗಿಯೂ, ಇರುವ ಶಿಷ್ಯರುಗಳಿಗೆ ವೇದಾಂತ ಪ್ರವಚನಾದಿಗಳನ್ನೂ ಮಾಡುವದು.

ವ್ಯಾಖ್ಯಾನಾಪೇಕ್ಷೆ ಇಲ್ಲದೇ ವೇದಾಂತದ್ವಯಾನು ಸಂಧಾನಾಧಿಕಾರಿಯಾದ ಪಕ್ಷ ವ್ಯಾಖ್ಯೇಯ ವೇದದ್ವಯಭಾಗವನ್ನೇ ಪಾರಾಯಣ ಮಾಡತಕ್ಕದ್ದು. ಅವರೊಳ್[1] ಸಾಕ್ಷಾದ್ಭಗವತ್ಪ್ರತಿಪಾದಕ ಭಾಗವನ್ನೇ ಅನುಸಂಧಾನ ಮಾಡತಕ್ಕದ್ದು.

ಅದಕ್ಕೆ ಶಕ್ತಿ ಇಲ್ಲದ ಪಕ್ಷ, ಮನು, ಪರಾಶರ, ವ್ಯಾಸ, ಶುಕ, ಶೌನಕಾದಿ ಪರಮಋಷಿ ಪ್ರಣೀತವಾಗಿಯೂ, ಭಗವತ್ಪ್ರೀತಿಕರವಾಗಿಯೂ,

---

೧ ಶಕ್ತಿಯಿದ್ದರೆ ಅರ್ಥಾನುಸಂಧಾನದೊಡನೆಯೂ, ಇಲ್ಲದಿದ್ದರೆ ಮೂಲ ಮಾತ್ರವನ್ನೂ ಪಾರಾಯಣ ಮಾಡಬೇಕೆಂಬ ಭಾವ.

ಸ್ವಮನೋರಂಜಕವಾಗಿಯೂ, ಇರುವ ಇತಿಹಾಸ ಪುರಾಣಾದಿ ಪರಿಶೀಲನವಂ ಮಾಡತಕ್ಕದ್ದು.

ಅದಕ್ಕೂ ಶಕ್ತಿಇಲ್ಲದಪಕ್ಷ, ಭಗವತ್ಪ್ರಾಪ್ತ್ಯುಪಾಯೋಪೇಯ ಪ್ರತಿಪಾದಕ ಭಗವನ್ಮಂತ್ರ ಜಪವಂ ಅನುಷ್ಠಿಸಬಹುದು.

ಅದೂ ಸಾಧ್ಯವಿಲ್ಲದಪಕ್ಷ, ಸರ್ವ ಸಾರಭೂತವಾದ ಅಷ್ಟಾಕ್ಷರ ಮಂತ್ರ ಜಪವನ್ನಾದರೂ ಮಾಡಬಹುದು.

ಯಾವದಕ್ಕೂ ಶಕ್ತಿಇಲ್ಲವಪಕ್ಷ, ಸರ್ವಕಾಲದಲ್ಲಿಯೂ ಕೀರ್ತನೀಯಂಗಳಾದ ಭಗವನ್ನಾಮಸಂಕೀರ್ತನಗಳನ್ನ ಮಾಡತಕ್ಕದ್ದು.

ಅನಧ್ಯಾಯ ದಿವಸಗಳಲ್ಲಿ ವೇದಾಭ್ಯಾಸ ಮಾಡಬಾರದಾದ ಕಾರಣ ಸ್ಮೃತಿ, ಇತಿಹಾಸ, ಪುರಾಣ ಪಠನ ಮಂತ್ರ ಜಪಾದಿಗಳನ್ನೇ ಅನುಷ್ಠಿಸತಕ್ಕದ್ದು.

ಆಶೌಚಾದಿ ದಿವಸಗಳಲ್ಲಿ ಭಗವನ್ನಾಮಕೀರ್ತನವಂ ಮಾಡುವದು.

ಹೀಗೆ ಯಥಾಧಿಕಾರ, ಯಥಾಸಂಭವ, ಯಥಾಶಕ್ತಿ, ಯಥಾವಿಧಿ, ಪಾರಾಯಣ ಮಾತ್ರದಿಂದಲೇ ಸಕಲ ಪಾಪನಿವರ್ತಕವಾದ, ಇತಿಹಾಸ, ಪುರಾಣ, ಸ್ತೋತ್ರ ವೇದಾಂತದ್ವಯ ತದ್ವ್ಯಾಖ್ಯಾನಾದಿಗಳ, ಶ್ರವಣ, ಮನನ, ಪ್ರವಚನ, ಜಪಾದಿಗಳನ್ನ ಅನುಷ್ಠಿಸತಕ್ಕದ್ದು. ಅನಂತರ ಸ್ವಹಸ್ತೋತ್ರಾದಿ ಗೃಹಕೃತ್ಯಚಿಂತನವಂ ಮಾಡತಕ್ಕದ್ದು.

## ಅಥ ಸಾಯಂಸಂಧ್ಯಾವಂದನ ವಿಧಿಃ.

ಅಥಲೋಹಿತಾಯತಿಸೂರ್ಯೇ ವಸ್ತ್ರಪರಿವರ್ತನಪೂರ್ವಕಂ
ಸಾಯಂಸಂಧ್ಯಾಮುಪಾಸೀತ ॥

ತತ್ಪ್ರಕಾರಃ॥ ಪ್ರಾಙ್ಮುಖಃ ಉದಙ್ಮುಖೋವಾ ಆಸೀನಃ ದ್ವಿರಾಚಮ್ಯ॥ ಪ್ರಾಣಾನಾಯಮ್ಯ. ಶ್ರೀಭಗವದಾಜ್ಞಯಾ, ಭಗವತ್ಪ್ರೀತ್ಯರ್ಥಂ ಸಾಯಂಸಂಧ್ಯಾಮುಪಾಸಿಷ್ಯೇ, ಇತಿ ಸಂಕಲ್ಪ್ಯ॥ ಆಪೋಹಿಷ್ಠೇತಿಮಂತ್ರಸ್ಯ, ಇತ್ಯಾರಭ್ಯ-ಆತ್ಮಾ ಸಂಪರಿಷಿಚ್ಯ, ಇತಿ ಪರ್ಯಂತಂ, ಪ್ರಾತಸ್ಸಂಧ್ಯಾವಂದನವತ್ಕುರ್ಯಾತ್ ॥

ಅಗ್ನಿಶ್ಚೇತ್ಯನುವಾಕಸ್ಯ, ಸೂರ್ಯಋಷಿಃ ದೇವೀಗಾಯತ್ರೀ ಚ್ಛಂದಃ॥

ಅಗ್ನಿರ್ದೇವತಾ, ಇತಿನ್ಯಸ್ಯ. ಅಪಾಂಪ್ರಾಶನೇ ವಿನಿಯೋಗಃ ಇತ್ಯುಕ್ತ್ವಾ, ಹಸ್ತೇಆಚಮನವಜ್ಜಲಂಗೃಹೀತ್ವಾ ॥

ಅಗ್ನಿಶ್ಚಮಾಮನ್ಯುಶ್ಚಮನ್ಯುಪತಯಶ್ಚಮನ್ಯುಕೃತೇಭ್ಯಃ, ಪಾಪೇಭ್ಯೋರಕ್ಷಂತಾಂ, ಯದಹ್ನಾಪಾಪಮಕಾರ್ಷಂ, ಮನಸಾವಾಚಾಹಸ್ತಾಭ್ಯಾಂ ಪದ್ಭ್ಯಾಮುದರೇಣ ಶಿಶ್ನಾ, ಅಹಸ್ತದವಲುಂಪತು, ಯತ್ಕಿಂಚದುರಿತಂಮಯಿ, ಇದಮಹಮ್ಮಾಮಮೃತಯೋನೌ, ಸತ್ಯೇಜ್ಯೋತಿಷಿಜುಹೋಮಿಸ್ವಾಹಾ, ಇತ್ಯಪಃಪ್ರಾಶ್ಯಾ ಆಚಮ್ಯ ॥

## ಸಾಯಂ ಸಂಧ್ಯಾರ್ಥಃ.

ಮೂಲಂ॥ ಅಗ್ನಿಶ್ಚ + ಸ್ವಾಹಾ ॥

ಪದಂ, ಅಗ್ನಿಃ, ಚ, ಮಾ, ಮನ್ಯುಃ, ಚ, ಮನ್ಯುಪತಯಃ, ಚ, ಮನ್ಯುಕೃತೇಭ್ಯಃ, ಪಾಪೇಭ್ಯಃ, ರಕ್ಷಂತಾಂ, ಯತ್, ಅಹ್ನಾ, ಪಾಪಂ, ಅಕಾರ್ಷಂ, ಮನಸಾ, ವಾಚಾ, ಹಸ್ತಾಭ್ಯಾಂ, ಪದ್ಭ್ಯಾಂ, ಉದರೇಣ, ಶಿಶ್ನಾ, ಅಹಃ, ತತ್, ಅವಲುಂಪತು, ಯತ್, ಕಿಂಚ, ದುರಿತಂ, ಮಯಿ, ಇದಂ, ಅಹಂ, ಮಾಂ, ಅಮೃತಯೋನೌ, ಸತ್ಯೇ, ಜ್ಯೋತಿಷಿ, ಜುಹೋಮಿ, ಸ್ವಾಹಾ.

ಅರ್ಥ॥ ಅಗ್ನಿಃ, (ಅಗ್ರಂನಯತೀತ್ಯಗ್ನಿಃ, ಎಂಬಂತೆ ಉತ್ಕೃಷ್ಟವಾದ ಪರಮಪದವನ್ನ ಹೊಂದಿಸುವ) ಪರಮಾತ್ಮನು.

ಅಹ್ನಾ-ಹಗಲಿನಲ್ಲಿ, ಅಹ-ಅಹಿಂಸಕನಾದ ಪರಮಾತ್ಮನು, ಸತ್ಯೇ-

ನಿರುಪಾಧಿಕ ಸತ್ತೆಯುಳ್ಳ ಪರಮಾತ್ಮನಲ್ಲಿ, ಇತರಪದಗಳಿಗೆ "ಸೂರ್ಯಶ್ಚ" ಎಂಬ ಅನುವಾಕರೀತ್ಯಾ ಅರ್ಥವು.

ಶ್ವೇತಪ್ರಕಾಶಿಕಾಚಾರ್ಯಕೃತಭಾಷ್ಯಾನುಸಾರೇಣ ಅಸ್ಯೈವಯೋಜನಾಂತರಂ.

ಅರ್ಥ॥ ಅಗ್ನಿಃ-ಅಗ್ನಿಯೂ, ಮನ್ಯುಃ-"ಮನ್ಯುರಿಂದ್ರೋಮನ್ಯುರೇವಾಸದೇವಃ" ಎಂಬಂತೆ ಮನ್ಯುಶಬ್ದವಾಚ್ಯನಾದ ಇಂದ್ರನೂ, ಮನ್ಯುಪತಯಃ-ಇಂದ್ರನೇ ಸ್ವಾಮಿಯಾಗಿ ಉಳ್ಳ ದೇವತೆಗಳೂ, ಚ-ಕೂಡಾ, ಮಾ-ನನ್ನನ್ನು, ಮನ್ಯುಕೃತೇಭ್ಯಃ-ಮನ್ಯು-ಕೋಪದಿಂದ, ಕೃತೇಭ್ಯಃ-ಮಾಡಲ್ಪಟ್ಟ, ಪಾಪೇಭ್ಯಃ-ಪಾಪಗಳ ದೆಸೆಯಿಂದ, ರಕ್ಷಂತಾಂ-ರಕ್ಷಿಸಲಿ. (ವ್ಯತ್ಯಯೋಬಹುಲಂ, ಇತಿಪರಸ್ಮೈಪದಸ್ಯಾತ್ಮನೇಪದಂ,) ಅಹ್ನಾ-(ಸಪ್ತಮ್ಯರ್ಥೇತೃತೀಯಾ) ಹಗಲಿನಲ್ಲಿ, ಮನಸಾ-ಮನಸ್ಸಿನಿಂದಲೂ, ವಾಚಾ-ವಾಕ್ಕಿನಿಂದಲೂ, ಹಸ್ತಾಭ್ಯಾಂ-ಹಸ್ತಗಳಿಂದಲೂ, ಪದ್ಭ್ಯಾಂ-ಪಾದಗಳಿಂದಲೂ, ಉದರೇಣ-ಉದರ (ಹೊಟ್ಟೆ) ದಿಂದಲೂ, ಶಿಶ್ನಾ-ಶಿಶ್ನದಿಂದಲೂ, ಯತ್-ಯಾವ ಪಾಪವನ್ನು, ಅಕಾರ್ಷಂ-ಮಾಡಿದೆನೋ, ತತ್-ಆ ಪಾಪಕರ್ಮವನ್ನು, ಅಹಃ-ದಿವಸಾಭಿಮಾನಿ ದೇವತೆಯು, ಅವಲುಂಪತು-ಅಪಹರಿಸಲಿ, ಯತ್ಕಿಂಚ-ಇನ್ನೂ ಇತರವಾದ, ದುಷ್ಕೃತಂ-ಪಾಪವು, ಮಯಿ-ನನ್ನಲ್ಲಿರುವದೋ, ಇದಂ-ಇದನ್ನೂ ಅಪಹರಿಸಲಿ, ಮಾಂ-ಹೀಗೆ ಸಕಲ ಪಾಪಗಳಿಂದಲೂ ಬಿಡಲ್ಪಟ್ಟ ನನ್ನನ್ನು, ಅಹಂ-ನಾನು, ಅಮೃತಯೋನೌ-ಮೋಕ್ಷಪ್ರದನಾದ, ಸತ್ಯೇ-ಸತ್ಯಶಬ್ದವಾಚ್ಯನಾದ, ಜ್ಯೋತಿಷಿ-ಪರಂಜ್ಯೋತಿಃ, ಎಂದು ಶ್ರುತಿಪ್ರಸಿದ್ಧನಾದ ಪರಮಾತ್ಮನಲ್ಲಿ, ಜುಹೋಮಿ-ಸಮರ್ಪಿಸುವೆನು.

ತಾತ್ಪರ್ಯ॥ ಯಜಮಾನನ ದೆಸೆಯಿಂದ ಹವಿರ್ಭಾಗವನ್ನ ಸ್ವೀಕರಿಸಿ ಯಜಮಾನೋದ್ದಿಷ್ಟದೇವತೆಗೆ ಸಮರ್ಪಿಸಿ ತದ್ದತ್ತ (ಆ ದೇವತೆಯಿಂದ ಕೊಡಲ್ಪಟ್ಟ) ವಾದ ಯಜಮಾನಾಭಿಲಷಿತ ಪ್ರಸಾದವನ್ನ ತೆಗದುಕೊಂಡು ಯಜಮಾನನಿಗೆ ಕೊಡುವದಕ್ಕಾಗಿ ಯಾತಾಯಾತ (ಹೋಗುವದು-ಬರುವದು) ವಂ ಮಾಡುವನಾದ (ಕಾರಣ-ಅಗ್ನಿಶಬ್ದವಾಚ್ಯನಾದ) ಅಗ್ನಿಯೂ.

ಶತಮನ್ಯು ಶಬ್ದದಲ್ಲಿ ಏಕದೇಶ ಗ್ರಹಣದಿಂದ ಮನ್ಯುಶಬ್ದವಾಚ್ಯನಾದ ದೇವೇಂದ್ರನೂ, ದೇವರಾಜನಿಂದ ರಕ್ಷಿಸಲ್ಪಡುವ ದೇವತೆಗಳೂ ಕೂಡಾ ಸ್ವಧರ್ಮಾನುಷ್ಠಾನಶೀಲನಾದ ನನ್ನನ್ನ ರಕ್ಷಿಸಲಿ, (ಕೋಪದಿಂದ ಮಾಡಲ್ಪಟ್ಟ ಪರಾಪವಾದ ಪರಪ್ರಹರಣವೇ ಮುಂತಾದ್ದರಿಂದ ಪ್ರಾಪ್ತವಾದ ಪಾಪಗಳಿಂದ (ಪಾಪನಿಮಿತ್ತ ನರಕಪಾತವಿಲ್ಲದಂತೆ ರಕ್ಷಿಸಲಿ) ಹಗಲಿನಲ್ಲಿ ಯಾವಯಾವ ಪಾಪವು ಮನಸ್ಸಿನಿಂದ ಮಾಡಲ್ಪಟ್ಟಿರುವದೋ (ಪರದಾರ, ಪರದ್ರವ್ಯ, ಪರದ್ರೋಹಾದಿ ಚಿಂತನವು ಮಾನಸಿಕ ಪಾಪವು) ಯಾವಪಾಪವು ವಾಕ್ಕಿನಿಂದ ಮಾಡಲ್ಪಟ್ಟಿರುವುದೋ (ಅಸತ್ಯ-ಪರಪರಿವಾದಾದಿಯು).

| | |
|---|---|
| ಹಸ್ತಗಳಿಂದಲೂ | ಪರಪ್ರಹರಣ, ಪರದ್ರವ್ಯಾಪಹಾರಾದಿಗಳು. |
| ಪಾದಗಳಿಂದಲೂ | ಚಂಡಾಲವಾಟಿಕಾ ಪ್ರವೇಶಾದಿಗಳು. |
| ಉದರದಿಂದಲೂ | ಅಭಕ್ಷ್ಯ ಭಕ್ಷಣಾದಿಗಳು. |
| ಶಿಶ್ನದಿಂದಲೂ | ಅಗಮ್ಯ ಗಮನಾದಿಗಳು. |

ಯಾವಪಾಪವನ್ನು ಮಾಡಿರುವೆನೋ-ಅಲ್ಲದೇ ಇನ್ನೂ ಇತರವಾದ ಯಾವಪಾಪವು (ನನ್ನಿಂದ ತಿಳಿಯಲ್ಪಡದಿರುವ ಬಾಲ್ಯಾದ್ಯವಸ್ಥೆಗಳಲ್ಲಿ ಮಾಡಲ್ಪಟ್ಟರುವವು) ನನ್ನಲ್ಲಿರುವದೋ ಆ ಸಕಲವಾದ ಪಾಪವನ್ನೂ ದಿನಾಭಿಮಾನಿದೇವತೆಯು ನನ್ನ ಪ್ರಾರ್ಥನೆಯಿಂದ ಅಪಹರಿಸಲಿ.

ಮಾ-ಹೀಗೆ ಸಕಲ ಪಾಪಗಳಿಂದಲೂ ಬಿಡಲ್ಪಟ್ಟ ನನ್ನನ್ನ, ಅಹಂ-ಶ್ರುತಿಸ್ಮೃತ್ಯುಕ್ತ ನಿತ್ಯನೈಮಿತ್ತಿಕಾದಿ ಕರ್ಮಾನುಷ್ಠಾನದಿಂದ ನಾರಾಯಣಾರಾಧನವಂ ಮಾಡಲಪೇಕ್ಷೆಯುಳ್ಳ ನಾನು.

"ಮೋಕ್ಷಮಿಚ್ಛೇಜ್ಜನಾರ್ದನಾತ್, ಎಂಬಂತೆ ಮೋಕ್ಷಪ್ರದನಾಗಿಯೂ, ಸತ್ಯಂಜ್ಞಾನಮನಂತಂಬ್ರಹ್ಮ, ಎಂಬಂತೆ ಸತ್ಯಶಬ್ದಾದಿ ವಾಚ್ಯನಾಗಿಯೂ, ಇರುವ ಜ್ಯೋತಿಶ್ಶಬ್ದವಾಚ್ಯನಾದ ಪರಮಾತ್ಮನಲ್ಲಿ ದಾನಮಾಡುವೆನು (ಸಮರ್ಪಿಸುವೆನೆಂದು ಭಾವ.) ಸ್ವೀಕರಿಸು.

---

೧ ಇಲ್ಲಿ ಬರೆಯಲ್ಪಡಬೇಕಾದ ಶಂಕಾಸಮಾಧಾನಗಳು ಸೂರ್ಯಶ್ಚ, ಎಂಬ ಅನುವಾಕ ತಾತ್ಪರ್ಯದಲ್ಲಿ ಬರೆಯಲ್ಪಟ್ಟಿವೆ. ಎರಡನೇ ಯೋಜನೆಯಲ್ಲಿ ಈ ಮಂತ್ರಗಳಿಗೂ ಸೂರ್ಯಶ್ಚ ಎಂಬ ಅನುವಾಕ ಮಂತ್ರಗಳಿಗೂ ತಾರತಮ್ಯವಿಲ್ಲವು. ಅರ್ಥ.

ದಧಿಕ್ರಾವ್ಣ್ಣ, ಇತಿಮಂತ್ರಸ್ಯ, ಇತ್ಯಾರಭ್ಯ, ರಾಕ್ಷಸಮು ದ್ರಾರಹಿತಾಂಜಲಿನಾತೋಯೇನ ಇತಿಪರ್ಯಂತಂಪ್ರಾತಸ್ಸಂಧ್ಯಾ ವಂದನವತ್ ॥

ಅಥಾಸ್ತಮಿತೇಸೂರ್ಯೇ ಪ್ರತ್ಯಙ್ಮುಖಸ್ತಿಷ್ಠ ಅರ್ಘ್ಯತ್ರ ಯಂದತ್ವಾ, ಅರ್ಘ್ಯತ್ರಪ್ರದಾನಂಸೂರ್ಯಾಸ್ತಮಯೇಸತಿ, ಪ್ರಾ ಣಾನಾಯಮ್ಯ, ಸಾಯಂಸಂಧ್ಯಾಕಾಲಾತಿಕ್ರಮ ಪ್ರಾಯಶ್ಚಿ ತ್ತಾರ್ಥಂ ತುರ್ಯಾರ್ಘ್ಯಪ್ರದಾನಂಕರಿಷ್ಯೇ, ಇತಿಸಂಕಲ್ಪ್ಯ ಸಪ್ತವ್ಯಾಹೃತಿಸಂಪುಟಿತಗಾಯತ್ರ್ಯಾ, ಇತ್ಯಾರಭ್ಯ, ಸಂತ ರ್ಪ್ಯ ಆಚಮ್ಯ ಇತಿಪರ್ಯಂತಂ ಪ್ರಾತಸ್ಸಂಧ್ಯಾವಂದನವತ್. ವಿಷ್ಣ್ವಾಯತನಂ, ತತ್ಸವಿತಾಸಂ ಅನ್ಯದ್ವಾಗತ್ವಾ, ತತ್ಥಸ ಲಂವ್ಯಾವೃತಿಭಿಃಪ್ರೋಕ್ಷ್ಯ.

ತತ್ರಉದಗಗ್ರದರ್ಭೇಷ್ವಾಸೀನಃ, ಆಸನಮಂತ್ರಸ್ಯಇತ್ಯಾರ ಭ್ಯ. ದಶವಾರಂ ಇತಿಪರ್ಯಂತಂ ಪ್ರಾತಸ್ಸಂಧ್ಯಾವಂದನವತ್ ಸಾಯಂಸಂಧ್ಯಾಗಾಯತ್ರೀ ಮಂತ್ರಜಪಂಕರಿಷ್ಯೇ, ಇತಿಸಂ ಕಲ್ಪ್ಯ ಆಯಾತ್ವಿತ್ಯನುವಾಕಸ್ಯ, ಇತ್ಯಾರಭ್ಯಂಇತ್ಯನುವಾ ಕೇನಾವಾಹ್ಯ, ಇತಿಪರ್ಯಂತಂ ಪ್ರಾತಸ್ಸಂಧ್ಯಾವಂದನವತ್.

ಸಾಯಂಸರಸ್ವತೀಂಶ್ಯಾಮಾಂ ರವಿಮಂಡಲಮಧ್ಯಗಾಂ । ಸಾಮ ವೇದಂವ್ಯಾಹರಂತೀಂ ಚಕ್ರಾಯುಧಧರಾಂಶುಭಾಂ । ಧ್ಯಾಯಾ ಮಿವಿಷ್ಣುದೈವತ್ಯಾಂ ವೃದ್ಧಾಂಗರುಡವಾಹನಾಂ ॥ ಏವಂಧ್ಯಾ ತ್ವಾಆಸನಾವಿಷ್ಟೋತಶ ಇತ್ಯಾರಭ್ಯ, ಸವಿತಾದೇವತಾ ಇತ್ಯನ್ತ ಸ್ಯಇತಿಪರ್ಯಂತಂಪ್ರಾತಸ್ಸಂಧ್ಯಾವಂದನವತ್, ಸಾಯಂಸಂಧ್ಯಾ ಜಪೇವಿನಿಯೋಗಃ ಇತ್ಯುಕ್ತ್ವಾ, ಅಸ್ತ್ರಮಂತ್ರೇಣ ಇತ್ಯಾ ರಭ್ಯ, ಸಂಹತಾಂಗುಳಿಕರದ್ವಯಂ ಇತಿಪರ್ಯಂತಂ ಪ್ರಾತಸ್ಸಂ ಧ್ಯಾವಂದನವತ್, ನಾಭಿಸಮಮುದ್ಧೃತ್ಯ. ಕನಿಷ್ಠಿಕಾಮೂಲ ಮಾರಭ್ಯ, ಇತ್ಯಾರಭ್ಯ, ತ್ರಿಃಪ್ರಾಣಾನಾಯಮ್ಯ ಇತಿಪರ್ಯಂ ತಂ ಪ್ರಾತಸ್ಸಂಧ್ಯಾವಂದನವತ್.

ಸಾಯಂಸಂಧ್ಯೋಪಸ್ಥಾನಂಕರಿಷ್ಯೇ ಇತಿಸಂಕಲ್ಪ್ಯ, ಉತ್ತ

ಮಿತ್ಯನುವಾಕಸ್ಯ ಇತ್ಯಾರಭ್ಯ ಗಾಯತ್ರೀಮುದ್ವಾಸ್ಯ ಇತಿ ಪರ್ಯಂತಂ ಪ್ರಾತಸ್ಸಂಧ್ಯಾವಂದನವತ್.

ಇಮಮ್ಮ ಇತಿಪಂಚರ್ಚಾನಾಂ ದೇವರಾತಋಷಿಃ, ಗಾಯತ್ರೀ, ತ್ರಿಷ್ಟುಪ್, ಗಾಯತ್ರೀ, ಜಗತೀ, ತ್ರಿಷ್ಟುಭಃ ಛಂದಾಂಸಿ, ವರುಣೋದೇವತಾ, ಇತಿನ್ಯಸ್ಯ, ಸಾಯಂಸಂಧ್ಯೋಪಸ್ಥಾನೇವಿನಿಯೋಗಃ, ಇತ್ಯುಕ್ತ್ವಾ.

ಇಮಂಮೇವರುಣಶ್ರುಧೀಹವಮದ್ಯಾಚಮೃಡಯ, ತ್ವಾಮವಸ್ಯುರಾಚಕೇ, ತತ್ವಾಯಾಮಿಬ್ರಹ್ಮಣಾವಂದ ಮಾನಸ್ತದಾಶಾಸ್ತೇಯಜಮಾನೋಹವಿರ್ಭಿಃ, ಅಹೇಡಮಾನೋವರುಣೇಹಬೋಧ್ಯುರುಶಗ್ಂಸಮಾನಆಯುಃಪ್ರಮೋಷೀಃ

ಯಚ್ಚಿದ್ಧಿತೇವಿಶೋಯಥಾಪ್ರದೇವವರುಣವ್ರತಂ, ಮಿನೀಮಸಿದ್ಯವಿದ್ಯವಿ, ಯತ್ಕಿಂಚೇದಂವರುಣದೈವ್ಯೇಜನೇಭಿದ್ರೋಹಂ ಮನುಷ್ಯಾಶ್ಚರಾಮಸಿ, ಅಚಿತ್ತೀಯತ್ತವಧರ್ಮಾಯುಯುಯೋಪಿಮ ಮಾನಸ್ತಸ್ಮಾದೇನಸೋದೇವರೀರಿಷಃ, ಕಿತವಾಸೋಯದ್ರಿರಿಪುರ್ನದಿವಿಯದ್ವಾಘಾ ಸತ್ಯಮುತಯನ್ನವಿದ್ಮ, ಸರ್ವಾತಾವಿಷ್ಯಶಿಥಿರೇವದೇವಾಥಾತೇಸ್ಯಾಮವರುಣಪ್ರಿಯಾಸಃ,

ಇತ್ಯುಪಸ್ಥಾಯ, ಶೇಷಂಪ್ರಾತಸ್ಸಂಧ್ಯಾವಂದನವತ್.

ಪದಂ|| ಇಮಂ, ಮೇ, ವರುಣ, ಶ್ರುಧಿ, ಹವಂ, ಅದ್ಯ, ಚ, ಮೃಡಯ, ತ್ವಾಂ, ಅವಸ್ಯುಃ, ಆಚಕೇ, ತತ್, ತ್ವಾ, ಯಾಮಿ, ಬ್ರಹ್ಮಣಾ,

ವಂದಮಾನಃ, ತತ್, ಆಶಾಸ್ತೇ, ಯಜಮಾನಃ, ಹವಿರ್ಭಿಃ, ಅಹೇಡಮಾನಃ, ವರುಣ, ಇಹ, ಬೋಧಿ, ಉರುಶಂಸ, ಮಾ, ನ, ಆಯುಃ, ಪ್ರ, ಮೋಷೀಃ, ಯತ್, ಚಿತ್, ಹಿ, ತೇ, ವಿಶಃ, ಯಥಾ, ಪ್ರ, ದೇವ, ವರುಣ, ವ್ರತಂ, ಮಿನೀಮಸಿ, ದ್ಯವಿದ್ಯವಿ, ಯತ್, ಕಿಂಚ, ಇದಂ, ವರುಣ, ದೈವ್ಯೇ, ಜನೇ, ಅಭಿದ್ರೋಹಂ, ಮನುಷ್ಯಾಃ, ಚರಾಮಸಿ, ಅಚಿತ್ತೀ, ಯತ್, ತವ, ಧರ್ಮಾ, ಯುಯೋಪಿಮ, ಮಾ, ನಃ, ತಸ್ಮಾತ್, ಏನಸಃ, ದೇವ, ರೀರಿಷಃ, ಕಿತವಾಸಃ, ಯತ್, ರಿರಿಪುಃ, ನ, ದೀವಿ, ಯತ್, ವಾ, ಘಾ, ಸತ್ಯಂ, ಉತ, ಯತ್, ನ, ವಿದ್ಮ, ಸರ್ವಾ, ತಾ, ವಿಷ್ಯ, ಶಿಥಿರಾ, ಇವ, ದೇವ, ಅಥ, ತೇ, ಸ್ಯಾಮ, ವರುಣ, ಪ್ರಿಯಾಸಃ.

ಅರ್ಥ॥ ಹೇವರುಣ-ವರುಣೋ[೧]ವಾರುಣೋ ಎಂಬಂತೆ ವರುಣಶಬ್ದವಾಚ್ಯನಾದ ಪರಮಾತ್ಮನೇ, ಮೇ-ನನ್ನ, ಇಮಂ-ಈ ಪ್ರಾರ್ಥನಾರೂಪವಾದ, ಹವಂ-ಆಹ್ವಾನವನ್ನ, ಶ್ರುಧಿ-ಕೇಳು, ಅದ್ಯಾಚ-ಈಗಲೇ, ಮೃಡಯ-ನನ್ನನ್ನ ಸುಖಿಯಾಗಿ ಮಾಡು, ಅವಸ್ಯುಃ-ಆತ್ಮರಕ್ಷಣದಲ್ಲಿ ಇಚ್ಛೆಯುಳ್ಳವನಾದ ನಾನು, ತ್ವಾಂ-ನಿನ್ನನ್ನು, ಆಚಕೇ-ಅಭಿಮುಖ್ಯತೆಯಿಂದ, ಪ್ರಾರ್ಥಿಸುವೆನು, ಅಥವಾ ನಿನ್ನ ತೃಪ್ತಿಯನ್ನ ಯಾಚಿಸುವೆನು, ತತ್-ಆ ಕಾರಣದ್ದೆಸೆಯಿಂದ, ತ್ವಾ-ನಿನ್ನನ್ನ, ಬ್ರಹ್ಮಣಾ-ಪ್ರಣವದಿಂದ, ವಂದಮಾನಃ-ಸ್ತೋತ್ರಮಾಡುವೆನಾಗಿ, ಯಾಮಿ-ಶರಣ ಹೊಂದುವೆನು.

ತತ್-ಆ ಕಾರಣದಿಂ (ಭಗವನ್ನಾರಾಯಣನು ಸರ್ವಫಲಪ್ರದ ಪ್ರಯುಕ್ತ) ದಲೇ, ಯಜಮಾನಃ-ಯಜ್ಞಮಾಡುವನು, ಹವಿರ್ಭಿಃ-ಪುರೋಡಾಶಾದಿ ಹವಿಸ್ಸುಗಳಿಂದ ನಿನ್ನಂ ಆರಾಧಿಸಿ, ಆಶಾಸ್ತೇ-ಇಷ್ಟಾರ್ಥವಂ ಪ್ರಾರ್ಥಿಸುವನು.

ಹೇ ವರುಣ-ಓ ಪರಮಾತ್ಮನೇ, ಅಹೇಡಮಾನಃ-ಆಗ್ರಹಗೊಳ್ಳದೇ, ಇಹ-ಈ ಲೋಕದಲ್ಲಿ, ಬೋಧಿ-ನನ್ನ ವಿಜ್ಞಾಪನವಂ ತಿಳಿದುಕೊ.

ಉರುಶಂಸ-ಉರು-ಮಹತ್ತಾದ, ಶಂಸ-ಕೀರ್ತಿಯುಳ್ಳವನೇ, ನಃ-ನಮ್ಮಗಳ, ಆಯುಃ-ಆಯುಸ್ಸನ್ನ, ಮಾಪ್ರಮೋಷೀಃ-ನಾಶಮಾಡಬೇಡ.

---

೧ ವರುಣೋ ವಾರುಣೋ ವೃಕ್ಷ ಇತ್ಯಾದಿ ಸಹಸ್ರನಾಮವ್ಯಾಖ್ಯಾನು.

ದೇವ-ಕ್ರೀಡಾಶೀಲನಾದ, ಹೇ ವರುಣ-ಓ ಭಗವಂತನೇ, ತೇ-ನಿನ್ನ, ಯಚ್ಚಿದ್ಧಿವ್ರತಂ-ಯಾವ ಆರಾಧನಾದಿ ವ್ರತವೋ, ತತ್-ಅದನ್ನ, ದ್ಯವಿದ್ಯವಿ-ದಿನೇದಿನೇ, ವಿಶೋಯಥಾ-ಅಜ್ಞರಾದ ಮನುಷ್ಯರೋಪಾದಿಯಲ್ಲಿ, ಪ್ರಮಿನೀಮಸಿ-ನಾಶಮಾಡುವೆವು.

ಹೇವರುಣ-ಎಲೈ ಭಗವಂತನೇ, ದೈವ್ಯೇಜನೇ-ದೇವತೆಗಳಲ್ಲಿ, ಮನುಷ್ಯಾಃ-ನಿಕೃಷ್ಟರಾದ ಮನುಷ್ಯರಾದ ನಾವುಗಳು, ಅಚಿತ್ತೀ-ಅಜ್ಞಾನದಿಂದ, ಯತ್ಕಿಂಚ-ಯಾವ, ಇದಂ-ಈ, ಅಭಿದ್ರೋಹಂ-ಅಪರಾಧವನ್ನು, ಚರಾಮಸಿ-ಮಾಡುವೆವೋ, ಯತ್-ಯಾವ ಪಾಪದ್ದೆಸೆಯಿಂದ, ತವ-ನಿನ್ನ, ಧರ್ಮಾ-ಕೈಂಕರ್ಯರೂಪವಾದ ಧರ್ಮಗಳನ್ನು, ಯುಯೋಪಿಮ-ನಾಶಮಾಡುವೆವೋ, ಹೇದೇವ-ಎಲೈ ಭಗವಂತನೇ, ನಃ-ನಮ್ಮಗಳನ್ನು, ತಸ್ಮಾದೇನಸಃ-ಆ ಉಭಯವಿಧ ಪಾಪಗಳ ದೆಸೆಯಿಂದಲೂ, ಮಾರೀರಿಷಃ-ಹಿಂಸೆ ಪಡಿಸಬೇಡ.

ಕಿತವಾಸಃ-ಕಪಟಿಗಳಾದ ನಾವುಗಳು, ಯದ್ರಿರಿಪುಃ-ಶತ್ರುಗಳೋಪಾದಿಯಲ್ಲಿ, ಯತ್-ಯಾವ, ದಿವಿ-ನಿಷಿದ್ಧಕಾರ್ಯವನ್ನು ಮಾಡುವೆವೋ, ಯದ್ವಾಘಾ-ಯಾವಪಾಪವು, ಸತ್ಯಂ-ಬುದ್ಧಿಪೂರ್ವಕವಾಗಿ ಮಾಡಲ್ಪಟ್ಟಿರುವದೋ, ಉತ ಅಥವಾ ಯತ್-ಯಾವ ಪಾಪವನ್ನು, ನವಿದ್ಮ-ತಿಳಿದೇ ಇಲ್ಲವೋ, ಸರ್ವಾತಾ-ಸಕಲವಾದ ಆ ಪಾಪಗಳನ್ನು, ಶಿಥಿರೇವವಿಷ್ಯ-ಹೋಗಲಾಡಿಸು.

ದೇವ-ವರುಣ, ಕ್ರೀಡಾಶೀಲನಾದ ಪರಮಾತ್ಮನೇ, ಅಥ-ಅನಂತರ, ತೇ-ನಿನಗೆ, ಪ್ರಿಯಾಸಃಸ್ಯಾಮ-ಇಷ್ಟರಾಗುವೆವು.

ತಾತ್ಪರ್ಯ॥ ಸರ್ವವ್ಯಾಪಿಯಾಗಿಯೂ, ಸರ್ವಾನಿಷ್ಟ ನಿವಾರಕನಾಗಿಯೂ, ಸಕಲಾರ್ಥಪ್ರದನಾಗಿಯೂ ಇರುವ, ವರುಣಶಬ್ದವಾಚ್ಯನಾದ ಪರಮಾತ್ಮನೇ ನನ್ನ ಪ್ರಾರ್ಥನೆಯನ್ನು ಕೇಳು.

---

೧ ಇದು ಉಪಲಕ್ಷಣವು. ನಿನ್ನ ಆಜ್ಞಾನುವರ್ತಿಗಳಲ್ಲಿ ಎಂದು ಭಾವ.

೨ ಯಾವ ಭಾಗವತಾಪಚಾರವಂ ಮಾಡುವೆವೋ ಎಂದು ಭಾವ.

೩ ನ ಇವಾರ್ಥೇ—ಶತ್ರುರಿವೇತ್ಯರ್ಥಃ.

ಈಗಲೇ ನನ್ನನ್ನು ಸುಖಿಯನ್ನಾಗಿ ಮಾಡು. ಅರ್ಥಿತಾರ್ಥ ಪ್ರದಾನಚತುರನೆಂದು ಪ್ರಸಿದ್ಧನಾದ ನಿನ್ನನ್ನು ಪ್ರಾರ್ಥಿಸುವೆನು.

ವೇದಮಂತ್ರದಿಂದ ಸ್ತುತಿಸಿ ಶರಣಹೊಂದುವೆನು. (ಶರಣಾಗತನ ಇಷ್ಟಾರ್ಥವಂ ಸಾಫಲ್ಯಮಾಡುವದು ಸಮರ್ಥನಿಗೆ ವಿಧಿಪ್ರಾಪ್ತ ಧರ್ಮವೆಂದು ಲೋಕವೇದಗಳಲ್ಲಿ ಪ್ರಸಿದ್ಧವಾಗಿರುವದರಿಂದ, ಸರ್ವಜ್ಞನಾಗಿಯೂ, ಸರ್ವಶಕ್ತನಾಗಿಯೂ, ಅಪಾರ ಕಾರುಣ್ಯ ಸಾಶೀಲ್ಯ ವಾತ್ಸಲ್ಯಾದಿ ಗುಣಗಳಿಗೆ ಸಮುದ್ರಪ್ರಾಯನಾಗಿಯೂ ಇರುವ ನಿನ್ನಲ್ಲಿ ಕೇಳತಕ್ಕದ್ದೇನಿರುವುದು. ಎಂದು ಭಾವ.)

ಭಗವಂತನಾದ ನಿನ್ನ ಆಶ್ರಯಣವು ಫಲಿಸದೇ ಇರುವದಿಲ್ಲವಾದುದರಿಂದಲೇ ಯಜಮಾನನು (ಯಜ್ಞ ಮಾಡುವನು) ಪುರೋಡಾಶಾದಿ ಹವಿಸ್ಸುಗಳಿಂದ ನಿನ್ನನ್ನ ಆರಾಧಿಸಿ ಇಷ್ಟಸಿದ್ಧಿಯಂ ಪ್ರಾರ್ಥಿಸುವನು. (ಹೀಗೆ ಕರ್ಮಯೋಗನಿಷ್ಠನಾದ ಮುಮುಕ್ಷುವಿಗೇನೆ ಫಲಸಿದ್ಧಿ ಇರುವದರಿಂದ ಸರ್ವಾತ್ಮನಾ ಶರಣಾಗತನಾದ ನನ್ನ ವಿಷಯದಲ್ಲಿ ಕೇಳತಕ್ಕದ್ದೇನೆಂದು ಭಾವವು.)

ಎಲೈ ಪರಮಾತ್ಮನೇ, ನನ್ನವಿಜ್ಞಾಪನೆಯನ್ನ ಆಗ್ರಹ ಮಾಡದೇ (ಅನಾದಿಕಾಲದಿಂದಲೂ ಅಕೃತ್ಯಕರಣ, ಕೃತ್ಯಾಕರಣಾದಿ ಅನಂತಾಪರಾಧಗಳಂ ನಾಂಮಾಡಿರುವೆನು. ಇದನ್ನಾಲೋಚಿಸಿ, "ನಕ್ಷಮಾಮಿ, ಕ್ಷಿಪಾಮಿ" ಎಂಬಂತೆ, ಕ್ಷಮಿಸಲಾರೆ. ಆ ಸುರಯೋನಿಗಳಲ್ಲಿ ಹಾಕುವೆನು ಎಂದು ಆಗ್ರಹ ಮಾಡಕೂಡದು, ಶರಣಾಗತಿವಾಕ್ಯದಿಂದಲೇ ಯಲ್ಲವನ್ನೂ ಕ್ಷಮಿಸಬೇಕು) ಸಾವಧಾನದಿಂ ಕೇಳು.

"ರಿಪೂಣಾಮಪಿವತ್ಸಲಃ" ಎಂಬಂತೆ ಅತಿ ಪ್ರಸಿದ್ಧಕೀರ್ತಿಯುಳ್ಳ ಪರಮಾತ್ಮನೇ ನಮ್ಮಗಳ ಆಯುಸ್ಸು ವ್ಯರ್ಥವಾಗದಂತೆ ಮಾಡು, (ಶರಣಾಗತರಾದ ನಮ್ಮಗಳ ಆಯುಸ್ಸು ವ್ಯರ್ಥವಾದ ಕಾರ್ಯಗಳಲ್ಲಿ ಕಳೆಯದಂತೆ ನಾವು ಸರ್ವದಾ ಭಗವತ್ಕೈಂಕರ್ಯ ಭಾಗವತ ಕೈಂಕರ್ಯಗಳನ್ನು ಮಾಡುವಂತೆ ಅನುಗ್ರಹಿಸು.)

ಕ್ರೀಡಾಶೀಲನಾದ ಪರಮಾತ್ಮನೇ, ತ್ವದುದ್ದೇಶ್ಯದಿಂದ ಮಾಡಲ್ಪಡುವ ಆರಾಧನಾದಿ ವ್ರತಗಳು ಸರ್ವಕಾಲದಲ್ಲಿಯೂ, ಲೋಪಹೊಂದುವ

ವು, ಆ ಲೋಪಾದಿಗಳಿಂದ ಉಂಟಾಗುವ ಅಪರಾಧವನ್ನ ನೀನೇ ಕ್ಷಮಿಸಿ ಕೃಪೆಮಾಡು.

ಓ ವರುಣಶಬ್ದವಾಚ್ಯನಾದ ಪರಮಾತ್ಮನೇ, ನಿನ್ನ ಆಜ್ಞಾನುವರ್ತಿಗಳಾದ ದೇವತೆಗಳಗಿಂತಲೂ, ಸರ್ವವಿಧದಲ್ಲಿಯೂ ಅತಿನಿಕೃಷ್ಟರಾದ ಮನುಷ್ಯರಾದ ನಾವುಗಳು ಅಜ್ಞಾನದ್ದೆಸೆಯಿಂದ ನಿನ್ನ ಭಕ್ತರುಗಳಿಗೆ ಯಾವಯಾವ ಅಪರಾಧ ಮಾಡುವೆವೋ, ಅಲ್ಲದೇ ಯಾವ ಕೈಂಕರ್ಯರೂಪಧರ್ಮಗಳನ್ನೂ ನಾಶಪಡಿಸುವೆವೋ ಆ ಉಭಯವಿಧ ಪಾಪಗಳನ್ನೂ ನೀನು ಕ್ಷಮಿಸು. ನಮ್ಮಗಳನ್ನ ಹಿಂಸಿಸಬೇಡಾ. ಮಹಾ ಕಪಟಿಗಳಾದ ನಾವುಗಳು, ಶತ್ರುಗಳು ಮಾಡುವಂತೆ ನಿಷಿದ್ಧವಾದ ಯಾವ ಪಾಪಕಾರ್ಯವಂ ಮಾಡುವೆವೋ ಬುದ್ಧಿಪೂರ್ವಕವಾಗಿ ಯಾವ ಪಾಪಕಾರ್ಯಗಳಂ ಮಾಡುವೆವೋ ಮತ್ತೂ ಪ್ರಮಾದದಿಂದ ಯಾವ ಪಾಪಗಳಂ ಮಾಡುವೆವೋ ಆ ಸಕಲವಾದ ಪಾಪಗಳನ್ನೂ ಶಿಥಿಲಗಳನ್ನಾಗಿ ಮಾಡು.

ಕ್ರೀಡಾಶೀಲನಾದ ಪರಮಾತ್ಮನೇ ಸಕಲಾಪರಾಧಗಳನ್ನೂ ನೀನು ಕ್ಷಮಿಸಿದ ನಂತರ, ಸಮಸ್ತ ಪ್ರತಿಬಂಧಕಗಳಿಂದಲೂ ಬಿಡಲ್ಪಟ್ಟ ನಾವುಗಳು, "ಪ್ರಿಯೋಹಿಜ್ಞಾನಿನೋಽತ್ಯರ್ಥಂ" ಎಂಬಂತೆ ನಿನ್ನ ಅಜ್ಞಾನುಸಾರಿಗಳಾಗಿಯೂ, ಉತ್ತರೋತ್ತರ ಪ್ರೀತಿವರ್ಧಕರಾಗಿಯೂ, ನಿನ್ನಸ್ವರೂಪ ಗುಣ ವಿಭೂತಿಗಳ ಅನುಭವೈಕರಸರಾಗಿಯೂ, ನಿನಗೆ ಇಷ್ಟರಾಗುವೆವು.

ಪರಮಪುರುಷನೇ, ನಿನ್ನನ್ನು ಶರಣಹೊಂದಿರುವೆನು. ನನ್ನ ಸಕಲ ಪಾಪಗಳನ್ನೂ, ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಇರುವ ನೀನು ನಿನ್ನ ಸಹಜಕೃಪೆಯಿಂದ ಹೋಗಲಾಡಿಸಿ ಉತ್ತರತ್ರ ಪಾಪಬುದ್ಧಿಯು ಉದಿಸದಂತೆ ಮಾಡಿ ಭಗವದ್ಭಾಗವತಕೈಂಕರ್ಯಗಳಲ್ಲಿ ನಿರತನಾಗುವಂತೆ ಬುದ್ಧಿಯನ್ನ ಕೊಟ್ಟು ಆರೀತ್ಯಾ ರಕ್ಷಿಸಲು ಪ್ರಾರ್ಥಿಸುವೆನೆಂದು ಮುಖ್ಯ ತಾತ್ಪರ್ಯ.

ಅಸ್ಯೈವಶ್ರುತಪ್ರಕಾಶಿಕಾಚಾರ್ಯಕೃತ ಭಾಷ್ಯಾನುಸಾರೇಣ ಯೋಜನಾಂತರಂ.

ಮಂ॥ ಇಮಂಮೇ + ಪ್ರಿಯಾಸಃ ॥

ಅವತರಣಿಕಾ॥ ಇಮಂಮೇ-ಇತ್ಯಾದಿ ಮಂತ್ರಗಳಿಂದ ಗಾಯತ್ರೀ ಜಪಕ್ಕಾಗಿ ಆವಾಹಿಸಲ್ಪಟ್ಟ ಗಾಯತ್ರೀಜಪದಿಂದ ಪೂಜಿತನಾದ ನಾರಾಯಣನನ್ನ ವಂದಿಸುವದು.

ಈ (೫) ಮಂತ್ರಗಳಲ್ಲಿ ಆದಿತಃಮಂತ್ರತ್ರಯಕ್ಕೆ, ಶುನಶ್ಶೇಫಃ ಋಷಿಃ, ಚತುರ್ಥಸ್ಯವಸಿಷ್ಠಃ, ಪಂಚಮಸ್ಯಅತ್ರಿಃ, ಪಂಚಾನಾಂವರುಣಾತ್ಮಾ ದೇವತಾ, ಇಲ್ಲಿ ಋಗ್ವೇದಬ್ರಾಹ್ಮಣದಲ್ಲಿ ಒಂದು ಇತಿಹಾಸವು ಶ್ರುತವಾಗಿರುವದು.

*ಹರಿಶ್ಚಂದ್ರನೆಂಬ ಅಂಬರೀಷ ಮಹಾರಾಜನು ಶತ (೧೦೦) ಸಂಖ್ಯಾಕರಾದ ಪತ್ನಿಯರಿದ್ದಾಗ್ಯೂ ಸಂತಾನ ಹೊಂದದವನಾಗಿ ಖೇದದಿಂದ ಕೂಡಿರುವ ಸಂದರ್ಭದಲ್ಲಿ ಅಕಸ್ಮಾತ್ತಾಗಿ ನಾರದಪರ್ವತರೆಂಬ ಋಷಿಗಳು ಅವನ ಗೃಹಕ್ಕೆಬಂದರು.

ಮಹಾರಾಜನು ಮಹರ್ಷಿಗಳನ್ನು ಪೂಜಿಸಿ ಪುತ್ರಲಾಭೋಪಾಯವನ್ನ ಕುರಿತು ಪ್ರಶ್ನೆಗೈದನು.

ಆಗ ನಾರದಮಹರ್ಷಿಯು, ಮಹಾರಾಜನನ್ನ ಕುರಿತು, (ವರುಣರಾಜನೇ ಪುತ್ರನನ್ನು ಅನುಗ್ರಹಿಸು. ನಿನ್ನಿಂದ ಕೊಡಲ್ಪಟ್ಟ ಪುತ್ರನನ್ನೇ ಪಶುವನ್ನಾಗಿಮಾಡಿ ನಿನ್ನಂ ಯಾಗದಿಂದ ಆರಾಧಿಸುವೆನು. ಎಂದು) ವರುಣನನ್ನ ಪ್ರಾರ್ಥಿಸಿದರೆ ಪುತ್ರನಾಗುವನೆಂದು ಅಪ್ಪಣೆ ಮಾಡಿದರು.

ಮಹಾರಾಜನು ಆ ಪ್ರಕಾರ ಪ್ರಾರ್ಥನೆಯಂಮಾಡಿ ಪುತ್ರನನ್ನು ಹೊಂದಿದನು.

ಅನಂತರ ವರುಣರಾಜನು ಹರಿಶ್ಚಂದ್ರನನ್ನು ಕುರಿತು ಮಹಾರಾಜ ನಿನ್ನ ಇಷ್ಟಪ್ರಕಾರ ಪುತ್ರನನ್ನ ಕೊಟ್ಟಿರುವೆನು ಪ್ರತಿಜ್ಞಾನುಸಾರವಾಗಿ ಯಜ್ಞವನ್ನನುಷ್ಠಿಸೆಸಲು, ಮಹಾರಾಜನು ಬಹಳ ಕಷ್ಟದಿಂದ ಪುತ್ರನನ್ನು ಹೊಂದಿದ್ದವನಾದಪ್ರಯುಕ್ತ ಪ್ರತಿಜ್ಞಾನುಸಾರವಾಗಿ ನಡಿಯಲು ಮನಸ್ಸೊಪ್ಪದೆ ತಂಬತಪೇ ನಾಮಕರಣವಾಗಲಿ, ದಂತೋತ್ಪತ್ತಿಯಾಗಲಿ, ಒಂದು

---

೧ ಅತ್ರ ಗೋವಿಂದರಾಜಾಃ ನನು ಹರಿಶ್ಚಂದ್ರೋ ವೈವಸ್ವತಸ್ತ್ವಾಕೋ ರಾಜಪುತ್ರ ಅರ ಇತ್ಯಾದಿಬ್ರಹ್ಮ ಬ್ರಾಹ್ಮಣೋಕ್ತೇತಿಹಾಸ ವಿರುದ್ಧೋಯಂ ಕಥಮುಪಪದ್ಯತೇ ಇತಿಚೇತ್ ಅಂಬರೀಷಶ್ಚೈವ ಹರಿಶ್ಚಂದ್ರ ಇತಿಸಂಜ್ಞಾಂತರಮಿತ್ಯವಿರೋಧಸ್ಯನೇಯತ್ವಾತ್, ಇತಿ.

ವರುಷ ತುಂಬಲಿ, ಚೌಲವಾಗಲಿ, ಉಪನಯನವಾಗಲಿ, ಇತ್ಯಾದಿ ವಾಕ್ಯಗಳನ್ನಾಡಿ ಕಾಲಯಾಪನೆ ಮಾಡುತ್ತಾ ತನ್ನ ಕುಮಾರನಾದ ರೋಹಿತನು ಪ್ರಾಪ್ತವಯಸ್ಕನಾಗಲು, ಅವನಲ್ಲಿ ಈ ಸಮಾಚಾರವಂ ಹೇಳಿದನು.

ಆ ವಾರ್ತೆಯಂ ಕೇಳಿ ರಾಜಕುಮಾರನು ಭಯಗ್ರಸ್ತನಾಗಿ ರೋಷದಿಂದಲೂ ಕೂಡಿ ಧನುರ್ಧಾರಿಯಾಗಿ ಅರಣ್ಯವಂ ತೆರಳಿದನು.

ಪ್ರತಿಜ್ಞಾನುಸಾರ ನಡಿಯದಪ್ರಯುಕ್ತ ಹರಿಶ್ಚಂದ್ರನಿಗೆ ಮಹೋದರವ್ಯಾಧಿ ಬರುವಂತೆ ವರುಣನು ಮಾಡಿದನು.

ಒಂದು ವರುಷಪರ್ಯಂತ ಅರಣ್ಯದಲ್ಲಿ ಆರುಗತ್ತಲಿದ್ದು, ರೋಹಿತನು, ತಂದೆಯ ಸಮಾಚಾರವನ್ನ ತಿಳಿದವನಾಗಿ ತಂದೆಯನ್ನ ನೋಡಲು ಪಟ್ಟಣಕ್ಕೆ ಬರಲು ಉದ್ಯೋಗಪಡಲು ದೇವೇಂದ್ರನು ಈಗ ನೀನು ಊರಿಗೆ ಹೋಗಬೇಡಾ ಎಂದು ತಡೆದನು. ಈರೀತ್ಯಾ ಐದುವರುಷಗಳು ಕಳೆದವು.

ಅನಂತರ ರೋಹಿತನು, ಅತ್ಯಾಶೆಯಿಂದ ಕೂಡಿದವರಾಗಿ ಮೂವ್ವರು ಕುಮಾರರಿಂದ ಯುಕ್ತರಾದ ಅಜೀಗರ್ತರೆಂಬ ಋಷಿಯನ್ನ ನೋಡಿ, ಅವರ ಪುತ್ರರುಗಳಲ್ಲಿ ಮಧ್ಯಮಕುಮಾರನಾದ ಶುನಶ್ಶೇಫರೆಂಬುವನನ್ನ ಕ್ರಯಕ್ಕೆ ತೆಗೆದುಕೊಂಡು ತನ್ನ ತಂದೆಯಾದ ಮಹಾರಾಜನಲ್ಲಿ ತನಗೆ ಪ್ರತಿನಿಧಿಯಾಗಿ ಅರ್ಪಿಸಿದನು.

ಅನಂತರ ಮಹಾರಾಜನು ವರುಣನಲ್ಲಿ ಈ ಸಮಾಚಾರವನ್ನೆಲ್ಲವನ್ನೂ ಹೇಳಿ ತನ್ನ ಮಗನಿಗೆ ಪ್ರತಿಯಾಗಿ ಶುನಶ್ಶೇಫನನ್ನೇ ಕಲ್ಪಿಸಿ ಯಾಗಮಾಡಲು ಅನುಜ್ಞೆಯನ್ನ ಹೊಂದಿ ನೀರೋಗಿಯಾಗಿ ರಾಜಸೂಯವನ್ನಾರಂಭಿಸಿ ಅಭಿಷೇಚನೀಯ ದಿವಸದಲ್ಲಿ ಆ ಶುನಶ್ಶೇಫನನ್ನ ಪಶುವನ್ನಾಗಿ ಕಲ್ಪಿಸಿ, ಪಶುವಿಶಸನ (ಸಂಹಾರ) ಕ್ಕೆ ಆ ಶುನಶ್ಶೇಫನ ತಂದೆಯಾದ ಅಜೀಗರ್ತರನ್ನೇ ನಿಯಮಿಸಲು ಅಜೀಗರ್ತಋಷಿಯು ವಿಶಸನವೇತನವಾಗಿ ಒಂದುನೂರು ಗೋವುಗಳನ್ನ ಅಂಗೀಕರಿಸಿ ಖಡ್ಗಧಾರಿಯಾಗಿ ಮಗನನ್ನು ಕೊಲ್ಲುವದಕ್ಕೆ ಬಂದರು.

ಇಂತಹ ತಂದೆಯನ್ನ ನೋಡಿ ಶುನಶ್ಶೇಫನು ಭೀತನಾಗಿ ಭಗವದುಪಾಸನವನ್ನ ವಿನಾ ಈ ಆಪತ್ತು ಹೋಗಲಾರದು ಎಂದು ತಿಳಿದು, ಭಗವ

ಪಾಪನಾಶನಾರ್ಥವಾಗಿ ಈ ಮಂತ್ರಗಳನ್ನು ನೋಡಿ, ಜಪಿಸಿ ಭಗವಂತನಿಂದ ರಕ್ಷಿಸಲ್ಪಟ್ಟನು.

ಅನಂತರ ಮಹರ್ಷಿಗಳು ಇತಿಹಾಸ ಪುರಾಣಾದಿಗಳಲ್ಲಿ ಈ ಅನುಷ್ಠಾನವೇ (ಭಗವಂತನನ್ನು ಶರಣಹೊಂದುವದು, ಸ್ಮರಿಸುವದು) ಸಕಲ ನಾವ ಆಪತ್ತುಗಳಲ್ಲಿಯೂ ರಕ್ಷಕವೆಂದು ಅಪ್ಪಣೆ ಕೊಡಿಸಿರುವರು.

ತಥಾಚ ॥ ಸಭಾಪರ್ವಣಿ ॥

ದ್ರೌಪದೀ ॥ ಪ್ರಾತಂಪುಯೂವಸಿಷ್ಠೇನ ಪುರಾಸೀತಂ ಮಹಾತ್ಮನಾ । ಮಹತ್ಯಾಪದಿಸಂಪ್ರಾಪ್ತೇ ಸ್ಮರ್ತವ್ಯೋಭಗವಾನ್ ಹರಿಃ ॥

ವಿಷ್ಣುಧರ್ಮೇ ॥ ಪರಮಾಪದಮಾಪನ್ನೋ ಮನಸಾಚಿಂತಯದ್ಧರಿಂ । ಸತುನಾಗವರಃಶ್ರೀಮಾನ್ ನಾರಾಯಣಪರಾಯಣಃ ॥ ಇತ್ಯಾದಿ ; ಭಗವತ್ಸಮಾಚಾರಸ್ತು । ವ್ಯಸನೇಷುಮನುಷ್ಯಾಣಾಂ ಭೃಶಂಭವತಿದುಃಖಿತಃ ॥

ರಾಮಾಯಣೇಭಾರತೇ ॥ ಗೋವಿಂದೇತಿಯದಾಕ್ರಂದತ್ಕೃಷ್ಣಾಮಾಂ ದೂರವಾಸಿನಂ । ಋಣಂಪ್ರವೃದ್ಧಮಿವಮೇಹೃದಯಾನ್ನಾಪಸರ್ಪತಿ ॥ ಇತ್ಯಾದಿ.

ಈ ಋಗ್ವೇದಾರ್ಥವೇ ಶ್ರೀ ಭಾಗವತೇ, ನವಮಸ್ಕಂಧೇ ೭ನೇ ಅಧ್ಯಾಯದಲ್ಲಿ ವಿವರಿಸಲ್ಪಟ್ಟಿದೆ.

ಶ್ರೀಶುಕಃ ॥ ತ್ರಿಶಂಕುಪ್ರೋಹರಿಶ್ಚಂದ್ರಃ ವಿಶ್ವಾಮಿತ್ರವಸಿಷ್ಠಯೋಃ । ಯನ್ನಿಮಿತ್ತಮಭೂದ್ಯುದ್ಧಂ ಪಕ್ಷಿಣೋರ್ಬಹುವಾರ್ಷಿಕಂ ॥೭॥

ಸೋಽನಪತ್ಯೋವಿಷಣ್ಣಾತ್ಮಾ ನಾರದಸ್ಯೋಪದೇಶತಃ । ವರುಣಂ ಶರಣಂಯಾತಃ ಪುತ್ರೋಮೇಜಾಯತಾಂಪ್ರಭೋ ॥೮॥

ಯದಿವೀರೋಮಹಾರಾಜ ತೇನೈವತ್ವಾಂಯಜೇಇತಿ । ತಥೇತಿ ವರುಣೇನಾಸ್ಯ ಪುತ್ರೋಜಾತಸ್ತು ರೋಹಿತಃ ॥೯॥

ಇತ್ಯಾದ್ಯುಕ್ತ್ವಾಪಿ । ತತ್ರೈವಕಿಂಚಿದ್ದೂರೇಷಷ್ಠಂಸಂವತ್ಸರಂ
ತತ್ರಚರಿತ್ವಾರೋಹಿತಃಪುರಂ । ಉಪವ್ರಜನ್ನಜೀಗರ್ತಾದ
ಕ್ರೀಣಾನ್ಮಧ್ಯಮಂಸುತಂ। ಶುನಶ್ಶೇಫಂಪಶುಂಪಿತ್ರೇಪ್ರದಾಯಸ
ಮವಿಂದತ ॥ ॥೨೦॥

ತತ್ರೈವ ೧೬ನೇ ಅಧ್ಯಾಯದಲ್ಲಿ ;

ಯೋಽಸೌಹರಿಶ್ಚಂದ್ರಮಖೇವಿಕ್ರೀತಃಪುರುಷಃಪಶುಃ । ಸ್ತುತ್ವಾ
ದೇವಾನ್ಪ್ರಜೇಶಾದೀನ್ಮುಮುಚೇಪಾಶಬಂಧತಃ ॥೩೧॥

ಯೋರಾತೋದೇವಯಜನೇದೇವೈರ್ಗಾಧಿಷುತಾಪಸಃ। ದೇವರಾತ
ಇತಿಖ್ಯಾತಃಶುನಶ್ಶೇಫಸ್ತುಭಾರ್ಗವಃ ॥೩೨॥

ಈ ಶುನಶ್ಶೇಫನಿಗೇನೇ ದೇವರಾತನೆಂದು ನಾಮಾಂತರವಾದ ಪ್ರಯುಕ್ತ ಕೆಲವರು ಈ ಮಂತ್ರಕ್ಕೆ ದೇವರಾತ ಋಷಿಃ ಎಂದೂ, ಕೆಲವರು ಶುನಶ್ಶೇಫ ಋಷಿಃ ಎಂದೂ ಹೇಳುತ್ತಾರೆ.

ಈ ಶ್ಲೋಕ ತಾತ್ಪರ್ಯವು ಹಿಂದೆಯೇ ವಿವರಿಸಲ್ಪಟ್ಟಿದೆ.

ಅವತರಣಿಕಾ॥ ವಾತ್ಸಲ್ಯ ಸೌಶೀಲ್ಯಾದಿ ಗುಣಾನು ಸಂಧಾನಪೂರ್ವಕವಾಗಿ ಭಗವದ್ಭಜನವೇ ಸರ್ವಾಪದುತ್ತಾರಕವಾದುದು ಅತಏವ, ಹವಿರ್ಭೋಜನಾಃ, ಸೋಮಪಾಃ, ಎಂಬ ಉಭಯ ದೇವತೆಗಳೂ ಭಗವಚ್ಛರೀರ ಭೂತರೆಂದು ತಿಳಿದು ಆ ಯಜ್ಞಪುರುಷನಾದ ಪರಮಾತ್ಮನೇ ತತ್ವವಿತ್ತುಗಳಾದ ಯಜಮಾನರು (ಯಾಗಮಾಡುವರು) ಗಳಿಂದ ಯಜ್ಞಗಳಲ್ಲಿ ಆರಾಧಿಸಲ್ಪಡುವನು.

ಕಾರಣ ಋಷಿಪುತ್ರನಾದ ಶುನಶ್ಶೇಫನು ಆ ಭಗವಂತನನ್ನೇ ವರುಣರಾಜನ ಪ್ರೀತಿಗೋಸ್ಕರ ವರುಣಶಬ್ದದಿಂದ ಆಮಂತ್ರಣ (ಸಂಬೋಧನ) ಮಾಡಿ ಯಾಚಿಸುವನು.

ಇಮಂಮೇವರುಣ+ಪ್ರಿಯಾಸಃ.

ಅರ್ಥ॥ ಹೇವರುಣ-ವರಣೀಯನಾದವನೇ, ಮೇ-ನನ್ನ, ಇಮಂ-ಈ, ಹವಂ-ಆಹ್ವಾನವನ್ನು, ಶ್ರುಧಿ-ಕೇಳು, ಅದ್ಯಾಚ-ಈ ಕಾಲವೂ

ದಲುಗೊಂಡು, ಮೃಡಯ-ಸುಖಪಡಿಸು, ಅವಸ್ಯು-ರಕ್ಷಣಾಪೇಕ್ಷೆಯುಳ್ಳವನಾಗಿ, ತ್ವಾಂ-ಭಗವಂತನಾದ ನಿನ್ನನ್ನು, ಆಚಕೇ-ಅಭಿಮುಖವಾಗಿ ಯಾಚಿಸುವೆನು.

ತತ್-ಆ ಕಾರಣದ್ದೆಸೆಯಿಂದ, ತ್ವಾ-ನಿನ್ನನ್ನು, ಬ್ರಹ್ಮಣಾ-ಮಂತ್ರದಿಂದ್ವಂದಮಾನಃ-ನಮಸ್ಕರಿಸುವನಾಗಿ, ಯಾಮಿ-ಶರಣ ಹೊಂದುವೆನು.

ಹೇವರುಣ-ವಿಪತ್ಕಾಲಗಳಲ್ಲಿ, ಶರಣತ್ವೇನ-ವರಣೀಯನಾದ, ದೇವ-ಸ್ವಾಮಿಯೇ, ಇಹ-ಈ ಯಜಮಾನನಾದ ಹರಿಶ್ಚಂದ್ರನ ಇಷ್ಟಕ್ಕೆ ವಿರುದ್ಧವಾದ ನನ್ನ ಪ್ರಾರ್ಥನಾ ವಿಷಯದಲ್ಲಿ, ಅಹೇಡಮಾನಃ-ಕೋಪಿಸಿಕೊಳ್ಳದೇ, ಬೋಧಿ-ನನ್ನ ವಿಜ್ಞಾಪನೆಯನ್ನು ಕೇಳು.

ಯಜಮಾನಃ-ಹರಿಶ್ಚಂದ್ರನು, ಹವಿರ್ಭಿಃ-ನನ್ನ ದೇಹಾವಯವೆಂಬ ಹವಿಸ್ಸುಗಳಿಂದ, ತತ್-ಆ ಯಜ್ಞಫಲವನ್ನ ಆಶಾಸ್ತೇ-ಅಪೇಕ್ಷಿಸುವನು.

ಹೇ ಉರುಶಂಸ-ಮಹಾ ಕೀರ್ತಿಯುಳ್ಳ ಪರಮಾತ್ಮನೇ, ನಃ-ನನ್ನ, ಆಯುಃ-ಪ್ರಾಣವನ್ನು, ಮಾಪ್ರಮೋಷೀಃ-ಅಪಹರಿಸಬೇಡ.

ಹೇ ದೇವವರುಣ-ಪ್ರಾರ್ಥನೀಯನಾದ ಸ್ವಾಮಿಯೇ, ಚಿತ್-ಬುದ್ಧಿ ಪೂರ್ವಕವಾಗಿ ಕರ್ತವ್ಯವಾದ, ತೇವ್ರತಂ-ನಿನ್ನ ಕರ್ಮವನ್ನು ವಿಶೋಯಥಾ, ಶ್ವಾನಾದಿಗಳೋಪಾದಿಯಲ್ಲಿ ಅಜ್ಞರಾಗಿ, ದ್ಯವಿದ್ಯವಿ-ಪ್ರತಿದಿವಸದಲ್ಲಿಯೂ, ಪ್ರಮಿನೀಮಸಿ-ನಾಶ ಮಾಡುವೆವು.

ಹೇ ವರುಣ-ಏಶ್ವ ಪರಮಾತ್ಮನೇ ದೈವ್ಯೇಜನೇ-ಭಗವದ್ಭಕ್ತರಲ್ಲಿ, ಮನುಷ್ಯಾಃ-ಸುಳ್ಳುಗಾರರಾದ ನಾವುಗಳು, ಅಭಿದ್ರೋಹಂ-ಲೋಕದ್ವೇಷಾನುಚಿತವಾದ ಅಪಕಾರವನ್ನು, ಚರಾಮಸಿ-ಮಾಡುವೆವು, ಯತ್-ಯಾವಕಾರಣದ್ದೆಸೆಯಿಂದ, ಅಚಿತ್ತೀ-ಅಜ್ಞಾನದಿಂದ, ತವಧ-ನಿನ್ನ, ಧರ್ಮಾ-ಕರ್ಮಗಳನ್ನು, ಯುಯೋಪಿಮ-ಲೋಪ ಮಾಡುವೆವೋ, ದೇವ-ಸ್ವಾಮಿನ್ ನಾರಾಯಣ, ತಸ್ಮಾದೇನಸಃ-ಆ ಪಾಪದ್ದೆಸೆಯಿಂದ, ನಃ-

ನಮ್ಮಗಳನ್ನು, ಮಾರಿರಿಷಃ-ಹಿಂಸಿಸಬೇಡ, ದಿವಿ, ನ-ದ್ಯೂತಕ್ರೀಡೆಯಲ್ಲಿ ಮೋಸಾದಿಯಲ್ಲಿ ಕಿತವಾಸಃ-ಪಾಪಿಗಳು, ಯತ್-ಯಾವಪಾಪವನ್ನು, ರಿರಿಪುಃ-ಲೇಪಿಸುವರೋ, (ಪಾಪಿಗಳ ಸಂಪರ್ಕದಿಂದ ಯಾವ ಪಾಪವು ಬರುವದೋ ಎಂದು ಭಾವ) ಯದ್ವಾ-ಯಾವ ಪಾಪವು' ಸತ್ಯಂ-ಬುದ್ಧಿಪೂರ್ವಕವಾಗಿ ಮಾಡಲ್ಪಟ್ಟಿರುವದೋ, ಉತ-ಮತ್ತು, ಯತ್, ಯಾವ ಪಾಪವನ್ನು, ನವಿದ್ಮಃ-ನಾವು ತಿಳಿದಿಲ್ಲವೋ.

ಸರ್ವಾಃ-ಸಮಸ್ತಗಳಾದ, ತಾಃ-ಅವುಗಳನ್ನು, ಶಿಥಿರೇವಶಿಷ್ಯ-ಶಿಥಿಲಗಳನ್ನಾಗಿ ಮಾಡು, ಅಥಾ-ಅನಂತರ, ದೇವ-ಸ್ವಾಮಿಯೇ, ತೇ-ನಿನಗೆ, ಪ್ರಿಯಾಸಃ ಸ್ಯಾಮಃ-ಪ್ರಿಯರಾಗುವೆವು.

ತಾತ್ಪರ್ಯ॥ ಎಲೈ ವರುಣ ಶಬ್ದವಾಚ್ಯನಾದ ಪರಮಾತ್ಮನೇ ಕಮಲನಯನವಾಸುದೇವ ವಿಷ್ಣೋಧರಣೀಧರಾಚ್ಯುತ ಶಂಖಚಕ್ರಪಾಣೇ ಇತ್ಯಾದಿಯಾದ ನನ್ನ ಆರ್ತಸ್ವರ ವಿಶಿಷ್ಟವಾದ ವಿಜ್ಞಾಪನೆಯನ್ನು ಕೇಳು. ಅನುಗ್ರಹಮಾಡಿ ನನ್ನನ್ನು ರಕ್ಷಿಸು, ನಿನ್ನನ್ನು ವೇದಮಂತ್ರಗಳಿಂದ ಸ್ತುತಿಸಿ ಶರಣಹೊಂದುವೆನು. ಇತಃಪ್ರಭೃತಿ ನನ್ನನ್ನ ಸುಖಿಯನ್ನಾಗಿ ಮಾಡು.

ಈ ಯಜಮಾನನಾದ ಹರಿಶ್ಚಂದ್ರನು ಯಜ್ಞವನ್ನಾರಂಭಿಸಿ ನನ್ನ ಶರೀರಾವಯವಗಳೆಂಬ ಹವಿಸ್ಸುಗಳಿಂದಲೇ ಯಜ್ಞಪೂರ್ತಿಯನ್ನು ಬಯಸುವನು. ಆಪದ್ರಕ್ಷಕನೇ ಈ ಯಜಮಾನನ ಅಪೇಕ್ಷಾವಿರುದ್ಧವಾದ ನನ್ನ ಪ್ರಾರ್ಥನಾ ವಿಷಯದಲ್ಲಿ ಕೋಪಮಾಡದೇ ನನ್ನ ವಿಜ್ಞಾಪನವನ್ನಂಗೀಕರಿಸು.

ಪ್ರಾಣಾಪಹಾರಿಯಾದ ಮೃತ್ಯುವಿಗೂ ನಿಯಾಮಕನಾದ ಮಹಾಕೀರ್ತಿಯುಳ್ಳ ಪರಮಾತ್ಮನೇ, ಯೂಪಸ್ತಂಭದಲ್ಲಿ ಪಶುವಿನಂತೆ ಬದ್ಧನಾಗಿ ನಿರಪರಾಧಿಯಾಗಿದ್ದಾಗ್ಯೂ ಅಪರಾಧಿಯಂತೆ ಕೊಲ್ಲಲ್ಪಡುವ ಶರಣಾಗತನಾದ ನನ್ನ ಆಯುಸ್ಸನ್ನು ಅಪಹರಿಸಬೇಡ, ನನ್ನನ್ನ ರಕ್ಷಿಸು.

---

೧ ನ ಶಬ್ದ ಉಪಮಾನೇ.

೨ ರಜ್ಜೋರಿನ ವಿಶೇಷಃ, ಬಿಬ್ರುರಿತ್ಯರ್ಥಃ.

ದಾನಾದಿ ಗುಣಯೋಗದ್ದೆಸೆಯಿಂದ ದೇವಶಬ್ದವಾಚ್ಯನಾದ ಪರಮಾತ್ಮನೇ.

ಮತ್ಕರ್ಮಕೃನ್ಮತ್ಪರಮೋಮದ್ಭಾಜೀಮಾಂನಮಸ್ಕುರು, ಇತ್ಯಾದ್ಯುಕ್ತಪ್ರಕಾರ ಬುದ್ಧಿಪೂರ್ವಕವಾಗಿ ಅವಶ್ಯ ಕರ್ತವ್ಯವಾದ ಕರ್ಮಾದಿ ವ್ರತವನ್ನು, ಶೋಚನೀಯ ಜಂತುಗಳಾದ ಶ್ವಾನಾದಿಗಳೋಪಾದಿಯಲ್ಲಿ ಅಜ್ಞರಾದ ನಾವುಗಳು ಪ್ರತಿದಿವಸದಲ್ಲಿಯೂ ನಾಶಮಾಡುವೆವು.

ಕಿಂಚ॥ ಸತ್ಯಸಂಹಿತಾವೈದೇವಾ ಅನೃತಸಂಹಿತಾಮನುಷ್ಯಾಃ॥

ಎಂಬಂತೆ ಅಸತ್ಯಶಾಲಿಗಳಾದ ನಾವುಗಳು ನಿನ್ನ ಭಕ್ತರುಗಳಲ್ಲಿ ಮಾನಸಿಕ, ವಾಚಿಕ, ಕಾಯಿಕವೆಂದು ಪ್ರಭೇದವುಳ್ಳದ್ದಾಗಿಯೂ, ಲೋಕದ್ವಯಾನುಚಿತವಾಗಿಯೂ ಇರುವ ಅಪಕಾರವನ್ನು ಆಚರಿಸುವೆವು. ಅಲ್ಲದೇ, ಶ್ರುತಿ ಸ್ಮೃತಿ ಚೋದಿತಗಳಾಗಿರುವ ಯಜ್ಞ ದಾನ ತಪಸ್ಸೇ ಮುಂತಾದ ಸ್ವವರ್ಣಾಶ್ರಮ ಧರ್ಮಭೂತಗಳಾದ ಕರ್ಮಗಳನ್ನೂ ಲೋಪಮಾಡುವೆವು.

ಯಥಾಧೇನುಸಹಸ್ರೇಷುವತ್ಸೋವಿಂದತಿಮಾತರಂ। ತಥಾಪೂರ್ವಕೃತಂಕರ್ಮ ಕರ್ತಾರಮಧಿಗಚ್ಛತಿ॥

ಎಂಬಂತೆ ಆ ಉಭಯ ವಿಧವಾದ (ಭಗವದಪಚಾರ-ಭಾಗವತಾಪಚಾರಗಳು) ಪಾತಕದ್ದೆಸೆಯಿಂದಲೂ ಪ್ರಾಪ್ತವಾಗುವ ಬಾಧೆಯಿಂದ ನಮ್ಮನ್ನು ರಕ್ಷಿಸು.

ದ್ಯೂತಕಾರರುಗಳು, ಪಾರ್ಶ್ವವರ್ತಿಗಳಾದವರಲ್ಲಿ ಪರಾಜಯ ನಿಮಿತ್ತವಾದ ಋಣವನ್ನು ಆರೋಪಿಸುವಂತೆ ನಾವು ಪಾಪವಂ ಮಾಡದಿದ್ದಾಗ್ಯೂ ಪಾಪಕಾರಿಗಳಾದ ಧೂರ್ತರುಗಳು ತಮ್ಮ ಸಂಪರ್ಕದಿಂದ ಯಾವ ಪಾಪವನ್ನು ನಮಗೆ ಉಂಟುಮಾಡುವರೋ, ಬುದ್ಧಿಪೂರ್ವಕವಾಗಿ ನಾವು ಯಾವ ಪಾಪಗಳಂ ಮಾಡುವೆವೋ, ಅಜ್ಞಾನದಿಂದ ಯಾವ ಪಾಪಕೃತ್ಯಗಳಂ ಮಾಡುವೆವೋ.

೧ ಅನೇಕವಾದ ಹಸುಗಳಿದ್ದಾಗ್ಯೂ ಕರುವು ತಾಯನ್ನೇ ಹುಡುಕಿಕೊಂಡು ಬರುವಂತೆ ಕರ್ಮವು ಕರ್ತೃವನ್ನು ಹೊಂದುವುದು.

ಬಾಲ್ಯದಲ್ಲಿ ಅಥವಾ ಜನ್ಮಾಂತರದಲ್ಲಿ, ಯಾವಯಾವ ಪಾಪಗಳ ನ್ನು ಪ್ರಮಾದಾದಿಗಳಿಂದ ಮಾಡಿರುವೆವೋ ಆ ಸಕಲ ಪಾಪಗಳನ್ನು ಶಿಥಿ ಲಗಳನ್ನಾಗಿ ಮಾಡು.

ಈ ಪ್ರಕಾರವಾಗಿ ನಿನ್ನ ಅನುಗ್ರಹದಿಂದ ಸಕಲ ಪಾಪಗಳೂ ನಾಶ ಹೊಂದಿದ ಬಳಿಕ ಎಲೈ ಸ್ವಾಮಿಯೇ ನಾವುಗಳು ನಿನಗೆ.

ಪ್ರಿಯೋಹಿಜ್ಞಾನಿನೋತ್ಯರ್ಥಂ ಅಹಂಸಚಮಮಪ್ರಿಯಃ ॥

ಎಂಬಂತೆ ಪ್ರೀತಿಪಾತ್ರರಾಗುವೆವು.

ಮುಖ್ಯತಾತ್ಪರ್ಯ॥ ಎಲೈ ಸ್ವಾಮಿಯೇ, ಈ ಉಪಸ್ಥಾನ ಮಂತ್ರಗ ಳಿಂದ ಭಗವಂತನಾದ ನಿನ್ನನ್ನು ಶರಣುಹೊಂದಿ ನಿನ್ನ ಅನುಗ್ರಹದಿಂದ ನಷ್ಟ ವಾದ ಸಕಲ ಕಲ್ಮಷವುಳ್ಳವರಾಗಿ ಶುನಶ್ಶೇಫನೋಪಾದಿಯಲ್ಲಿ ಇಹಲೋ ಕ ಪರಲೋಕಗಳಲ್ಲಿ ಕೃತಕೃತ್ಯರಾಗುವೆವು.

## ಇತ್ಯುಪಸ್ಥಾನ ಪ್ರಾರ್ಥನಾ.

ಮಿತ್ರಸ್ಯೇತ್ಯಾದ್ಯುಪಸ್ಥಾನ ಮಂತ್ರಗಳಿಗೆ ಯೋಜನಾಂತರಂ,

ಮಿತ್ರಸ್ಯ × ನ ದೂರಾತ್.

ಅರ್ಥ॥ ಮಿತ್ರಸ್ಯ-ಹಿಂಸಾರೂಪವಾದ ಸಂಸಾರದುಃಖದ್ದೆಸೆಯಿಂದ ರಕ್ಷಿಸುವನಾದ ಪ್ರಯುಕ್ತ, ಮಿತ್ರಶಬ್ದವಾಚ್ಯನಾಗಿಯೂ, ಚರ್ಷಣೀ ಧೃತಃ, (ಚರ್ಷಣೀ-ಚರಪದಾರ್ಥಗಳು ಇದು ಅಚರ ಪದಾರ್ಥಗಳಿಗೂ ಉಪಲಕ್ಷಣವು ಜಂಗಮಾಜಂಗಮಾತ್ಮಕವಾದ ಜಗತ್ತನ್ನ ಸೃಷ್ಟಿಸಿ ಅಂತಃ ಪ್ರವೇಶದಿಂದ ಧರಿಸುವ ಪ್ರಯುಕ್ತ ಚರ್ಷಣೀಧೃತ್) ಜಗದ್ಧಾ ರಕನಾಗಿಯೂ,

ದೇವಸ್ಯ-ವರದಾನಾದಿ ಗುಣಯೋಗದ್ದೆಸೆಯಿಂದ ದೇವಶಬ್ದವಾ ಚ್ಯನಾಗಿಯೂ, ಇರುವ ನಾರಾಯಣನ ಸಂಬಂಧಿಯಾದ, ಶ್ರವಃ (ಶೃಹಿಂ ಸಾಯಾಂ, ಎಂಬಂತೆ ಹಿಂಸಾರೂಪವಾದ ಸಂಸಾರದ್ದೆಸೆಯಿಂದ, ಅವಃ-

---

೧ ಶೃ ಹಿಂಸಾಯಾಂ ಇತಿ ಧಾತುಃ.

೨. ತತ್ಸೃಷ್ಟ್ವಾತದೇವಾನುಪ್ರಾವಿಶತ್, ಇತ್ಯಾದಿಶ್ರುತಿಃ.

ರಕ್ಷಣವು ಅವರಕ್ಷಣೆ, ಇತಿಧಾತುಃ) ಸಂಸಾರದುಃಖದಿಂದ ಸೆಯಿಂದ ರಕ್ಷಣವು. ಸಾನಸಿಂ-ಭಜನೀಯವಾದುದು (ವನಷಣಸಂಭಕ್ತೌ, ಇತಿಧಾತುಃ) ಸತ್ಯಂ-ಪರಮಾರ್ಥ ಭೂತವಾಗಿಯೂ, ಚಿತ್ರಶ್ರವಸ್ತಮಂ-(ಶ್ರೂಯತ ಇತಿಶ್ರವಃ ಕೀರ್ತಿಃ, ಚಿತ್ರಂ, ಚಾಯನೀಯಂ, ಚಾಯೃಪೂಜಾಯಾಂ ಪೂಜ್ಯಂ, ವಿಸ್ಮಾಪನೀಯಂಶ್ರವಃ ಯಸ್ಯತತ್ ಚಿತ್ರಶ್ರವಸ್ತಮಂ) ಪ್ರಜಿತನಾದ ಕೀರ್ತಿಯನ್ನುಂಟುಮಾಡುವದಾಗಿಯೂ ಇರುವದು.

ಧ್ರುವ, ಪುಂಡರೀಕ, ಪ್ರಹ್ಲಾದ, ಗಜೇಂದ್ರರೇ ಮೊದಲಾದಿಯಲ್ಲಿ (ಸಂಸಾರೋತ್ತಾರಕವಾಗಿಯೂ, ಕೀರ್ತಿಪ್ರದವಾಗಿಯೂ, ಭಗವದನುಗ್ರಹದಿಂದ ಸುಖಲಭ್ಯವಾಗಿಯೂ, ಇರುವ)ನಮ್ಮ ರಕ್ಷಣವನ್ನು ಈ ಉಪಸ್ಥಾನ ಮಂತ್ರದ್ವಾರಾ ಭಗವಂತನದ್ದೆಸೆಯಿಂದಲೇ ಪೊಂದಲಪೇಕ್ಷಿಸುವೆನೆಂದು ಭಾವವು.

## ಮಿತ್ರೋಜನಾನ್ + ವಿಧೇಮ.

ಅವತಾರಿಕಾ॥ ಪೂರ್ವಮಂತ್ರ ಪ್ರತಿಪಾದ್ಯನಾದ ಮಿತ್ರನಿಗೆ ಇಷ್ಟಾರ್ಥ ಪ್ರದಾನಾದಿ ಸರ್ವಕಾರ್ಯ ಕ್ಷಮತ್ವವು ಈ ಮಂತ್ರದಿಂದ ಹೇಳಲ್ಪಡುವುದು.

ಅರ್ಥ॥ ಪ್ರಜಾನರ್ ಮಿತ್ರಃ-ಸರ್ವಾಂತರ್ಯಾಮಿಯಾದ ಪ್ರಯುಕ್ತ, ಸರ್ವವನ್ನೂ ತಿಳಿಯುವ ಪರಮಾತ್ಮನು, ಜನಾನ್-ಸಕಲ ಜನಗಳನ್ನೂ, ಯಾತಯತಿ-ಪುಣ್ಯಪಾಪಾನುಗುಣವಾಗಿ ನಿಯಮಿಸುವನು.

ಮಿತ್ರಃ-ಪರಮಾತ್ಮನೇ, ಪೃಥಿವೀಂ-ಉತ, ದ್ಯಾಂ ದಾಧಾರ-ಭೂಮ್ಯಾದಿ ಲೋಕಗಳಲ್ಲಿರುವ ಪ್ರಾಣಿಗಳನ್ನು ಸೃಷ್ಟಿ ಪೋಷಣಾದಿಗಳಿಂದ ಧರಿಸುವನು, ಅಥವಾ ವರಾಹಾವತಾರವಂನಾದಿ ಭೂಮ್ಯುದ್ಧಾರಾದಿಗಳನ್ನು ಮಾಡಿದನು.

ಮಿತ್ರಃ-ಪರಮಾತ್ಮನು, ಕೃಷ್ಟೀಃ-ಪ್ರಾಣಿಗಳನ್ನು, ಅನಿಮಿಷಾ-(ರೆಪ್ಪೆ ಮುಚ್ಚದಿರುವ ಕಣ್ಣಿನಿಂದ) ಜಾಗರೂಕನಾಗಿ, ಅಭಿಚಷ್ಟೇ-ಸಾಕ್ಷಾತ್ಕರಿಸುವನು, ತಸ್ಮಾತ್-ಆದುಕಾರಣ, ಸತ್ಯಾಯ-ಸತ್ಯಶಬ್ದ

ವಾಚ್ಯನಾದ ಪರಮಾತ್ಮನಿಗೆ, ಘೃತವತ್ ಹವ್ಯಂ-ಘೃತವಿಶಿಷ್ಟ ಹವ್ಯಾದಿಗಳನ, ವಿಧೇಮ-ನಿವೇದನ ಮಾಡುವ.

ಪ್ರಸಮಿತ್ರ+ನ ದೂರಾತ್.

ಅ॥ ಈ ಮಂತ್ರವು ಮಿತ್ರನನ್ನ ಸಾಕ್ಷಾತ್ಕರಿಸಿದ ಅನುಪಾತ್ರವಿನ ವಾಕ್ಯವು.

ಅರ್ಥ॥ ಹೇಮಿತ್ರ, ಆದಿತ್ಯ, ಅದಿತೀ ಕುಮಾರನಾಗಿ, ಇಂದ್ರಾವರಜನೆಂದು ಪ್ರಸಿದ್ಧನಾದ ಪರಮಾತ್ಮನೇ, ಮರ್ತಃ-ನಿತ್ಯನೈಮಿತ್ತಿಕಾದಿ ಕರ್ಮಗಳಿಂದ ನಿನ್ನಂ ಆರಾಧಿಸುವ ನನ್ನಂತಹ ಮನುಷ್ಯನು, ಪ್ರಯಸ್ವಾನ್ (ಪ್ರಯಇತಿ ಅನ್ನನಾಮ) ಅನ್ನವುಳ್ಳವನಾಗಿ ಪ್ರ ಅಸ್ತು, ಪ್ರಕರ್ಷದಿಂದ ಇರಲಿ.

(ನಿತ್ಯನೈಮಿತ್ತಿಕಾದಿ ಲಕ್ಷಣವಾದ ನಿನ್ನ ಆರಾಧನಕ್ಕೆ ಸಾಧನವಾದ ಅನ್ನದಿಂದ ಯಾವಜ್ಜೀವವೂ ಕೂಡಿ ಇರಲಿ ಎಂದು ಭಾವ.)

ಯಃ-ಯಾವ ಮನುಷ್ಯನು, ತೇ-ನಿನ್ನ, ವ್ರತೇನ-ಜಪಾರ್ಚನಾದಿ ಲಕ್ಷಣವಾದ ಕರ್ಮದಿಂದ, ಶಿಕ್ಷತಿ-ತನ್ನನ್ನ ಶಿಕ್ಷಿಸಿಕೊಳ್ಳುವನೋ, ಸಹ-ಆ ಮನುಷ್ಯನು, ತ್ವೋತಃ-ನಿನ್ನಿಂದ ರಕ್ಷಿಸಲ್ಪಟ್ಟವನಾಗಿ, ನಹನ್ಯತೇ ನಜೀಯತೇ-ವಿಘ್ನಗಳಿಂದ ಹೊಡಿಯಲ್ಪಡುವದಿಲ್ಲ. ಇತರರಿಂದ ಜಯಿಸಲ್ಪಡುವದೂ ಇಲ್ಲವು, ಏನಂ-ಈ ಮನುಷ್ಯನನ್ನು, ಅಂತಿತಃ-ವರ್ತಮಾನ ಜನ್ಮದಲ್ಲಿಯಾಗಲಿ, ದೂರತಃ-ಜನ್ಮಾಂತರ ಸಂಬಂಧವುಳ್ಳದ್ದಾಗಿಯಾಗಲಿ;, ಅಂಹಃ-ವಧ, ಬಂಧ, ಪರಾಜಯಾದಿ ನಿಮಿತ್ತ ಪಾಪವು, ನಾಶ್ನೋತಿ-ಹೊಂದಲಾರದು.

(ಎಲೈ ಪರಮಾತ್ಮನೇ ಜಪಾರ್ಚನಾದಿ ರೂಪನಿತ್ಯನೈಮಿತ್ತಿಕಾದಿ ಕರ್ಮದ್ವಾರಾ ನಿನ್ನನ್ನ ಆರಾಧಿಸುವರಿಗೆ ಜನ್ಮಾಂತರೀಯ ಏತಜ್ಜನ್ಮಕೃತಗಳೆಂಬ ಪಾಪಗಳು ವಧಬಂಧಾದಿ ಫಲಪ್ರದಗಳಾಗಲಾರವಾದವು ಪ್ರಯುಕ್ತ, ನಿನ್ನನ್ನ ಆಶ್ರಿಸಿದವರಿಗೆ ಸುಖವು ಇಚ್ಛಾಧೀನವಾಗಿರುವದೆಂದು ಭಾವ)

ಪ್ರದೋಷರಹಿತ ರಾತ್ರಿಯಲ್ಲಿ ಪರಿಶುದ್ಧನಾಗಿ ಯಥಾಶಕ್ತಿ ಶ್ರೀಮದಷ್ಟಾಕ್ಷರವನ್ನು ಜಪಿಸತಕ್ಕದ್ದು. ಪ್ರದೋಷರಾತ್ರಿಯಲ್ಲಿ ಅಷ್ಟಾಕ್ಷರವು ಜಪಿಸಬಾರದು. ಪ್ರದೋಷ, ಅನಧ್ಯಾಯ ರಾತ್ರಿ ಆಪತ್ಕಾಲಾದಿಗಳಲ್ಲಿ ಸಂಕೋಚವಾಗಿ ಗಾಯತ್ರಿಯನ್ನು ಜಪಿಸತಕ್ಕದ್ದು. ಪ್ರದೋಷದಲ್ಲಿ ವಿಮಾನಸ್ಥನಾದ ಪರಮಾತ್ಮನನ್ನು, ಅರ್ಧರಾತ್ರಿಯಲ್ಲಿ ಗೃಹಾರ್ಚೆಯನ್ನು, ನೋಡಬಾರದು. ಅಭಿವಾದನ ಮಾಡಲೂಕೂಡದು. ಆಸ್ಥಾನಮಂಟಪದಲ್ಲಿಯೂ ಬೀದಿಯಲ್ಲಿಯೂ ಭಗವದ್ದರ್ಶನಾಭಿವಾದಗಳಿಗೆ ಯಾವ ಬಾಧಕವೂ ಇಲ್ಲವು.

ಅನಂತರ ಉದಕಪೂರಿತವಾದ ಪಾತ್ರವನ್ನ ತೆಗೆದುಕೊಂಡು ಮನೆ

---

೧ ಚತುರ್ಥೀ, ಸಪ್ತಮೀ, ತ್ರಯೋದಶೀ ತಿಥಿಗಳಲ್ಲಿ ಸೂರ್ಯಾಸ್ತಮಯಾನಂತರ ಕಾಲವಿಶೇಷಕ್ಕೆ ಪ್ರದೋಷವೆಂದು ಹೆಸರು. ೪-೭ ತಿಥಿಗಳಲ್ಲಿ ಸೂರ್ಯಾಸ್ತಮಯ ಮೊದಲು ೩ ಮುಹೂರ್ತಪ್ರದೋಷವು. (೧೩) ತಿಥಿಯಲ್ಲಿ ಹಗಲಿನ (೮) ನೇ ಭಾಗ ಮೊದಲು ಅರ್ಧರಾತ್ರಿ ಪರ್ಯಂತ ಪ್ರದೋಷವು. ಯಾವದಿವಸ ಸೂರ್ಯಾಸ್ತಮಯಾನಂತರ (೯) ಘಳಿಗೆಗಿಂತಲೂ ಒಳಗೆ (೪) ಚತುರ್ಥಿ ಬರುವದೋ ಆ ದಿವಸವೂ, ಮರುದಿನ ಸೂರ್ಯಾಸ್ತಮಯಾನಂತರ ಚತುರ್ಥೀ (೨) ಘಳಿಗೆ ಇದ್ದರೆ ಆ ದಿವಸವೂ, ಯಾವದಿವಸ ಸೂರ್ಯಾಸ್ತಮಯಾನಂತರ (೧೫) ಘಳಿಗೆ ಒಳಗೆ (೭) ಸಪ್ತಮಿ ಬರುವದೋ ಆ ದಿವಸವೂ, ಮರುದಿನ ಸೂರ್ಯಾಸ್ತಮಯಾನಂತರ ಸಪ್ತಮಿಯು ಒಂದುಘಳಿಗೆ ಇದ್ದದ್ದಾದರೆ ಆ ದಿವಸವೂ, ಯಾವದಿವಸ ಸೂರ್ಯೋದಯಾದಿ (೩೦) ಘಳಿಗೆಯಲ್ಲಿ (೧೩) ತ್ರಯೋದಶಿ ಬರುವದೋ ಆ ದಿವಸವೂ, ಮರುದಿನ ಸೂರ್ಯಾಸ್ತಮಯಾನಂತರ ಅರ್ಧಘಳಿಗೆ ತ್ರಯೋದಶಿ ಇದ್ದರೆ ಆ ದಿವಸವೂ ಪ್ರದೋಷವು. ೨ ಪಾಡ್ಯ ೧೫-೩೦ ರಾತ್ರಿಗಳಲ್ಲಿ (೩೬) ಗಾಯತ್ರಿಯನ್ನು, ೪-೮-೧೪ ರಾತ್ರಿಗಳಲ್ಲಿ ([illegible]) ಗಾಯತ್ರಿಯನ್ನು, (೬) ರಾತ್ರಿಯಲ್ಲಿ (೩೨) ಗಾಯತ್ರಿಯನ್ನು, ವಿಷ್ಣುವಿನ ತ್ರಯೋದಶೀ ರಾತ್ರಿಗಳಲ್ಲಿ ([illegible]) ಗಾಯತ್ರಿಯನ್ನು, ಜಪಿಸತಕ್ಕದ್ದು. ಮಹಾಪ್ರದೋಷವೆಂಬ ತ್ರಯೋದಶೀ ಪ್ರದೋಷದಲ್ಲಿ ಹಗಲಿನ ಎಂಟನೇಭಾಗ ಮೊದಲು ಅರ್ಧರಾತ್ರಿಪರ್ಯಂತ [illegible] (ಗಾಯತ್ರೀ ಜಪ, ಸಾಯಮೌಪಾಸನ, ವೈಶ್ವದೇವ ಹೋಮ, [illegible], ಭಗವದಾರಾಧನ ವ್ಯತಿರಿಕ್ತಕರ್ಮ)ದಲ್ಲಿ [illegible]. [illegible] (೧೦) ಗಾಯತ್ರಿಯನ್ನು ಜಪಿಸತಕ್ಕದ್ದು. ([illegible] ತಿಥಿಗಳೆಂದು ಭಾವಿಸಬೇಕು.)

ಯಾವತ್ಪುತ್ರೋತ್ಪತ್ತಿ ಋತುಕಾಲದಲ್ಲಿ[೧] ಅನಿಷಿದ್ಧವಾದ
ಯಲ್ಲಿ ಪತ್ನಿಯಿಂದ ಪ್ರಾರ್ಥಿಸಲ್ಪಡದವನಾದಾಗ್ಯೂ ಹೊಂದಬಹು
ಇತರ ರಾತ್ರಿಯಲ್ಲಿ ಪತ್ನಿಯ ಇಚ್ಛಾನುಸಾರ ನಡೆಯಬಹುದು.
ಸ್ವೈಂರಾತ್ರೌ ಏಕದೈವಸ್ತ್ರಿಯಂಗಚ್ಛೇತ್ ನದ್ವಿತೀಯಾಮ್, ಗ
ಣೀಂನಗಚ್ಛೇತ್, ಅಷ್ಟಮಾಸಾದೂರ್ಧ್ವಂಗರ್ಭಿಣೀಂ ನಗಚ್ಛೇದಿತ್ಯ
ಹುಃ, ವ್ಯವಾಯಾವಧೀ (ರೇತಃಪತನಪರ್ಯಂತಂ) ಸ್ತ್ರಿಯಾಸಹ
ಶೀತ, ತತಃಪೃಥಗೇವಶಯೀತ, ಋತುಕಾಲೇ ಸಂಗಮೇಯಜ್ಞ
ತ್ರಂ ಉಪವೀತಮೇವ, ಅನ್ಯತ್ರಾತು ಪೃಷ್ಠಭಾಗತಃ ನಿವೀತಂ ಕೃ
ಸ್ತ್ರಿಯಂಗಚ್ಛೇತ್, ಋತೌ ಉಪೇಯಾದ್ಯದಿ ಉಭಯೋಃಸ್ನಾ
ಅನ್ಯತ್ರಾತು ಮೂತ್ರೋಕ್ತದ್ವಿಗುಣಶೌಚಮಾಚರೇತ್, ಪೃಥಗ್ವಾಗ
ಚೇ ಉಭಾವಪಿ ಧಾರಯೇತಾಂ.

ನಿದ್ರಾವಿಚ್ಛೇದ ಕಾಲದಲ್ಲಿ ಭಗವಂತನನ್ನ ಧ್ಯಾನಿಸುವದು, ಸ
ಪ್ನದರ್ಶನದಲ್ಲಿ ಕೈಕಾಲುಗಳನ್ನ ತೊಳೆದುಕೊಂಡು ದ್ವಿರಾಚಮನ
ಭಗವಂತನನ್ನ ನಮಸ್ಕರಿಸಿ ಭಗವನ್ನಾಮ ಸಂಕೀರ್ತನವಂ ಮಾಡುವ

ಈ ರೀತ್ಯಾವರ್ತಿಸುವನಿಗೆ ಸಕಲಕಾಲವೂ ವ್ಯರ್ಥವಾಗದೇ
ರ್ಥಕವಾಗುವದು, ಇತಿಸರ್ವಂ ನಿರವದ್ಯಂ.

ಇತಿ ಸತ್ಸಂಪ್ರದಾಯದೀಪಿಕಾಯಾಂ ಆಚಾರಕಾಂಡಃ.

---

[೧] ರಜೋದರ್ಶನ ಪ್ರಭೃತಿಷೋಡಶ (೧೬) ರಾತ್ರ್ಯಾತ್ಮಕವಾದ ಗರ್ಭಗ್ರ
ಣ ಸಮರ್ಥವಾದ ಕಾಲವೇ ಋತುಕಾಲವೆನಿಸುವದು.